Reg. No. M. 3975



# ಕನ್ನಡ ನುಡಿ

ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಸಂಪಾದಕ: ಅ. ನ. ಕೃಷ್ಣರಾಯ

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨, ೧೯೩೮ [ಸಂಚಿಕೆ ೯

## ತ್ಯಾಗ ವೈರಾಗ್ಯ ಮೂರ್ತಿ



ಶ್ರವಣಬೆಳ್ಗೊಳದ ಶ್ರೀ ಗೊಮ್ಮಟೇಶ್ವರ

॥ ಸಿರಿಗನ್ನಡಂ ಗೆಲ್ಗೆ ॥

ಕನ್ನಡ ನುಡಿ

ಶುಕ್ರವಾರ, ಡಿಸೆಂಬರ್ ೨, ೧೯೩೮

# ಶ್ರೀ ಗೊಮ್ಮಟೇಶ್ವರ

ಕ್ಷಣಕಾಲ ನಮ್ಮನ್ನು ನಾವು ಮರೆತು, ನಮ್ಮ ಸಣ್ಣತನವನ್ನು ತೊರೆದು, ಒಂದು ದೊಡ್ಡತನದ ಅನುಭವ ಹೊಂದಬೇಕಾದರೆ ಶ್ರವಣ ಬೆಳ್ಗೊಳದ ಶ್ರೀ ಗೊಮ್ಮಟೇಶ್ವರ ಮೂರ್ತಿಯನ್ನು ಸಂದರ್ಶಿಸಬೇಕು. ಆ ಮೂರ್ತಿಯನ್ನು ಎಷ್ಟು ನೋಡಿದರೂ, ಎಷ್ಟು ಸಲ ನೋಡಿದರೂ, ಕಣ್ಣು ದಣಿಯದು, ಹೃದಯ ತಣಿಯದು. ಅಂಥ ಸೌಂದರ್ಯ ಮೂರ್ತಿ, ಮಹಿಮಾಮೂರ್ತಿ ಅದು.

ಮುಖದಲ್ಲಿ ಅದೇನು ಚೆಲುವು! ನೋಟದಲ್ಲಿ, ನಗೆಯಲ್ಲಿ ಅದೆಂಥ ಗೆಲವು, ಒಲವು! ಎಂಥ ಸತ್ವಪೂರ್ಣವಾದ ನಿಲವು!

ಮೂರ್ತಿ ನಿರಾಭರಣ ಮೂರ್ತಿ: ಬಾನೇ ಬಟ್ಟೆ, ತೇಲುವ ಮುಗಿಲ ಮಾಲೆಯೇ ಮಾಲೆ, ಬಳ್ಳಿಗಳೇ ಅಲಂಕಾರ.

ಇಂಥ ತ್ಯಾಗ ವೈರಾಗ್ಯ ಮೂರ್ತಿಯ, ಮಹಾಪುರುಷನ ವಿಚಾರವಾಗಿ ಮೂರು ಮಾತು ಮಾತ್ರ:

ಪ್ರಥಮ ತೀರ್ಥಂಕರನಾದ ವೃಷಭನಿಗೆ ಇಬ್ಬರು ಹೆಂಡಿರು. ಭರತನೆಂಬವನು ಮೊದಲ ಹೆಂಡತಿಯ ೯೯ ಗಂಡು ಮಕ್ಕಳಲ್ಲಿ ಹಿರಿಯನು; ಬಾಹುಬಲಿ ಎರಡನೆಯ ಹೆಂಡತಿಯ ಮಗ. ವೃಷಭನು ಬಹುಕಾಲ ರಾಜ್ಯಭಾರ ಮಾಡಿ ತಪಸ್ಸಿಗೆ ಮನಕೊಟ್ಟು, ಭರತನಿಗೆ ಅಯೋಧ್ಯೆಯಲ್ಲಿ ಪಟ್ಟಕಟ್ಟಿ, ಬಾಹುಬಲಿಯನ್ನು ಪೌದನ ಪುರದಲ್ಲಿ ಯುವರಾಜಪದವಿಯಲ್ಲಿ ನಿಲಿಸಿ, ಮಕ್ಕಳಿಗೆಲ್ಲ ರಾಜ್ಯವನ್ನು ಹಂಚಿಕೊಟ್ಟು ತಪಸ್ಸಿಗೆ ತೆರಳಿದನು.

ಕಾಲಕ್ರಮದಲ್ಲಿ ಭರತನು ಚಕ್ರರತ್ನಾಯುಧವನ್ನು ಸಂಪಾದಿಸಿ ವೈಭವದಿಂದ ರಾಜ್ಯವಾಳುತ್ತಿದ್ದು, ದಿಗ್ವಿಜಯಕ್ಕೆ ಹೊರಟು ಎಲ್ಲ ಅರಸರನ್ನೂ ಗೆದ್ದನು. ದಿಗ್ವಿಜಯದಿಂದ ಹಿಮ್ಮರಳಿ ಅಯೋಧ್ಯೆಯನ್ನು ಹೊಗುವಾಗ ಮುಂಬರಿಯುತ್ತಿದ್ದ ಚಕ್ರ ನಿಂತುಬಿಟ್ಟಿತು. ಕಾರಣವನ್ನು ಅರಸಲಾಗಿ, ತನ್ನ ತಮ್ಮಂದಿರು, ಅದರಲ್ಲಿಯೂ ಬಾಹುಬಲಿ, ತನ್ನ ಚಕ್ರಾಧಿಪತ್ಯವನ್ನು ಒಪ್ಪಲು ಸಿದ್ಧರಾಗಿಲ್ಲವೆಂದು ತಿಳಿಯಬಂತು. ಕೂಡಲೆ ಅವನು ತನ್ನ ಎಲ್ಲ ತಮ್ಮಂದಿರ ಮೇಲೂ ವಿಜಯಯಾತ್ರೆ ಹೊರಟನು. ಆದರೆ ಅವರು ಇವನಿಗೆ ಶರಣಾಗದೆ, ರಾಜ್ಯವನ್ನು ತೊರೆದು ತಮ್ಮ ತಂದೆಯ ಸನ್ನಿಧಿಯಲ್ಲಿ ತಪೋನಿರತರಾದರು.

ಭರತನು ತನ್ನ ತಮ್ಮ ಬಾಹುಬಲಿಯ ಮೇಲೂ ಯುದ್ಧ ಹೂಡಿದನು. ಜನರ ಕೊಲೆಯಾಗಬಾರದೆಂಬ ಧರ್ಮಬುದ್ಧಿಯಿಂದ ಇಬ್ಬರ ಸೈನ್ಯಗಳಿಗೂ ಯುದ್ಧ ನಡೆಯದೆ, ಇಬ್ಬರಿಗೂ ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧಗಳೆಂಬ ಮೂಬಗೆಯ ದ್ವಂದ್ವಯುದ್ಧ ನಡೆಯಿತು. ಎಲ್ಲ ಯುದ್ಧಗಳಲ್ಲಿಯೂ ಬಾಹುಬಲಿಯೇ ಗೆದ್ದನು. ಕೋಪಗೊಂಡ ಭರತನು ತನ್ನ ಚಕ್ರವನ್ನು ತಮ್ಮನ ಮೇಲೆ ಇಟ್ಟನು. ಅದು ಬಾಹುಬಲಿಯನ್ನು ಬಲವಂದು ಅವನ ಬಳಿ ಚಲಿಸದೆ ನಿಂತಿತು. ಹೀಗೆ ನಿಂತ ಚಕ್ರವನ್ನು ನೋಡಿದ ಕ್ಷಣವೇ ಅವನ ಮನಸ್ಸಿನಲ್ಲಿ ವೈರಾಗ್ಯ ಹುಟ್ಟಿತು; ಯಾವ ಒಂದು ರಾಜ್ಯಕ್ಕಾಗಿ ತನ್ನ ಅಣ್ಣ ತನ್ನ ಮೇಲೆ ಕತ್ತಿಕಟ್ಟಿದನೋ ಅದರಲ್ಲಿ ಜುಗುಪ್ಸೆಯಾಯಿತು. ತನ್ನ ತಂದೆ ತನಗೆ ಕೊಟ್ಟಿದ್ದ ರಾಜ್ಯವನ್ನೂ ಅಣ್ಣನಿಗೇ ಕೊಟ್ಟುಬಿಟ್ಟು, ತಪಸ್ಸಿಗೆ ತೆರಳಿ, ಒಂದು ವರ್ಷಕಾಲ ಒಂದೇ ಸಮನಾಗಿ ನಿಂತು ಉಗ್ರವಾದ ತಪಸ್ಸು ಮಾಡಿದನು. ಆದರೂ ಕೇವಲಜ್ಞಾನೋತ್ಪತ್ತಿಯಾಗಲಿಲ್ಲ. ಅಣ್ಣನ ನೆಲದ ಮೇಲೆ ನಿಂತಿರುವೆನೆಂಬ ಅಭಿಮಾನವೇ ಕಾರಣವಾಗಿ ಬಾಹುಬಲಿಗೆ ಕೇವಲಜ್ಞಾನವುಂಟಾಗಿಲ್ಲವೆಂಬುದನ್ನು ಭರತನು ತನ್ನ ತಂದೆ ಆದಿನಾಥ (ವೃಷಭ) ನಿಂದ ತಿಳಿದು, ತನ್ನ ತಮ್ಮನ ಬಳಿ ಹೋಗಿ ಅವನ ಕಾಲಿಗೆ ಎರಗಿ, ಅವನಲ್ಲಿ ನೆಲಸಿದ್ದ ನೆಲದ ಅಭಿಮಾನವನ್ನು ಕಳೆಯಲು ಬಾಹುಬಲಿಗೆ ಕೇವಲಜ್ಞಾನ ಉದಯಿಸಿತು; ಅವನು ಮುಕ್ತಿಗೆ ಸಂದನು. ವೀರ ವೈರಾಗ್ಯ ಮೂರ್ತಿಯಾದ ಈ ಬಾಹುಬಲಿಯೇ ಗೊಮ್ಮಟೇಶ್ವರ.

ಜೈನರಿಗೆ ಮಾತ್ರವಲ್ಲ, ಎಲ್ಲ ಕನ್ನಡಿಗರಿಗೂ, ಅಷ್ಟೇಕೆ ಎಲ್ಲ ಕಲಾ ಪ್ರೇಮಿಗಳಿಗೂ ಯಾತ್ರಾಸ್ಥಳವಾದ ಶ್ರವಣಬೆಳ್ಗೊಳದ ಗೊಮ್ಮಟೇಶ್ವರ ವಿಗ್ರಹವಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡು ಕಡೆ (ಕಾರ್ಕಳ, ಏಣೂರು) ಎರಡು ಗೊಮ್ಮಟನ ವಿಗ್ರಹಗಳಿವೆ. ಶ್ರವಣ ಬೆಳ್ಗೊಳದ ಗೊಮ್ಮಟ ವಿಗ್ರಹವೇ ಎಲ್ಲಕ್ಕೂ ದೊಡ್ಡದು; ಅದು ೫೭ ಅಡಿಯ ಒಂದೇ ಕಲ್ಲಿನ ವಿಗ್ರಹ. ಇನ್ನು ೪೩ ವರ್ಷವಾದರೆ ಅದು ವೈವೆತ್ತು ೧,೦೦೦ ವರ್ಷ.

ಈ ವಿಗ್ರಹವನ್ನು ಮಾಡಿಸಿದ ಮಹನೀಯ ಚಾವುಂಡರಾಯ; ಮಾಡಿಸಿದ್ದು ಕ್ರಿ. ಶ. ೯೮೧ರಲ್ಲಿ. ಚಾವುಂಡರಾಯನು ಗಂಗರಸರಾದ ಮಾರಸಿಂಹ, ರಾಚಮಲ್ಲ ಮತ್ತು ರಕ್ಕಸಗಂಗ (ಕ್ರಿ. ಶ. ೯೭೭-೯೮೪) ಎಂಬವರ ಆಶ್ರಯದಲ್ಲಿ ಸೇನಾಧಿಪತಿಯೂ ಮಂತ್ರಿಯೂ ಆಗಿದ್ದನು. ಅಲ್ಲದೆ, ಕನ್ನಡ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ದೊಡ್ಡ ವಿದ್ವಾಂಸನಾಗಿದ್ದನು. ಇವನ ಹೆಸರನ್ನು ಕನ್ನಡಿಗರು ಎಂದೆಂದೂ ಮರೆಯುವಂತಿಲ್ಲ: ಗೊಮ್ಮಟೇಶ್ವರ ವಿಗ್ರಹದ ಪೀಠದಲ್ಲಿ "ಶ್ರೀ ಚಾವುಂಡರಾಜಂ ಮಾಡಿಸಿದಂ" ಎಂಬ ಬರಹ ಚಾವುಂಡರಾಯನ ಹೆಸರನ್ನು ಶಾಶ್ವತಗೊಳಿಸಿದೆ. ಗೊಮ್ಮಟನ ಪ್ರತಿಮೆಯನ್ನು ಅಪಾರ ದ್ರವ್ಯ ವ್ಯಯಮಾಡಿ ಮಾಡಿಸಿದ್ದಕ್ಕಾಗಿ ಅವನ 'ಪರಮಸ್ವಾಮಿ'ಯಾದ ರಾಚಮಲ್ಲನು ಅವನಿಗೆ 'ರಾಯ' ಎಂಬ ಬಿರುದನ್ನು ಕೊಟ್ಟನು.

ಚಾವುಂಡರಾಯನು ೨೪ ತೀರ್ಥಂಕರರ ಚರಿತ್ರೆಯನ್ನೊಳಕೊಂಡ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ವನ್ನು ಕನ್ನಡದಲ್ಲಿ ಬರೆದಿದ್ದಾನೆ. (ಕ್ರಿ. ಶ. ೯೭೮) ಇದು 'ಚಾಮುಂಡರಾಯ ಪುರಾಣಂ' ಎಂದು ಪ್ರಸಿದ್ಧವಾಗಿದೆ. ಕನ್ನಡದಲ್ಲಿ ಇದುವರೆಗೆ ದೊರೆತಿರುವ ಗದ್ಯ ಗ್ರಂಥಗಳಲ್ಲಿ ಇದೇ ಮೊದಲನೆಯದು.

ಗೊಮ್ಮಟೇಶ್ವರ ಮಹಾಮುನಿಯನ್ನು ನೆನೆದಾಯ್ತು; ಆತನ ಪ್ರತಿಮೆಯನ್ನು ಮಾಡಿಸಿದ ಮಹಾಮಂತ್ರಿಯನ್ನು ನೆನೆದಾಯ್ತು; ಆದರೆ, ದಿವ್ಯಭವ್ಯವಾದ ಗೊಮ್ಮಟ ಮೂರ್ತಿಯನ್ನು ಕಂಡರಿಸಿದ ಶಿಲ್ಪಿವರ್ಯನನ್ನು ಹೆಸರಿಸಿ ನೆನೆಯುವ ಭಾಗ್ಯವನ್ನು ಕಾಲಪುರುಷ ಕನ್ನಡ ನಾಡಿಗೆ ಉಳಿಸಲಿಲ್ಲ.

ಕೆ. ವಿ. ರಾಘವಾಚಾರ್, ಬೆಂಗಳೂರು.

---

## ಸಾದರ ಸ್ವೀಕಾರ

೧. ದಸರೆಯ ಕಾಣಿಕೆ (ಕವಿತೆ):
   ಲೇಖಕರು: ಶ್ರೀ॥ ಜಿ. ಎನ್. ಲಕ್ಷ್ಮಣ ಪೈ, ಪುತ್ತೂರು.
೨. ಮೈಸೂರಿನ ಮಹನೀಯರು—ಭಾಗ ೧ (ಜೀವನ ಚರಿತೆ):
   ಲೇಖಕರು: ಶ್ರೀ॥ ಶ್ರೀ ಸುಬ್ರಹ್ಮಣ್ಯ ಅವರು, ನಂಜನಗೂಡು.
೩. ಹಳ್ಳಿಯ ಹಾಡುಗಳು:
   ಸಂಗ್ರಾಹಕರು: ಶ್ರೀ॥ಗಳಾದ ಬಿ. ಎನ್. ರಂಗಸ್ವಾಮಿಯವರು ಮತ್ತು ಗೊರೂರು ರಾಮಸ್ವಾಮಿ ಐಯಂಗಾರ್ಯರವರು, ಗೊರೂರು.
೪. ಕನ್ನಡ ಗದ್ಯಮಾಲೆ:
   ಸಂಪಾದಕರು: ಪ್ರೊ॥ ಎಸ್.ಎಸ್. ಮಾಳವಾಡರವರು, ಎಂ.ಎ., ಧಾರವಾಡ.

॥ ಸಿರಿಗನ್ನಡಂ ಗೆಲ್ಗೆ ॥

ಕನ್ನಡ ನುಡಿ

ಶುಕ್ರವಾರ, ಡಿಸೆಂಬರ್ ೨, ೧೯೩೮

# ಶ್ರೀ ಗೊಮ್ಮಟೇಶ್ವರ

ಕ್ಷಣಕಾಲ ನಮ್ಮನ್ನು ನಾವು ಮರೆತು, ನಮ್ಮ ಸಣ್ಣತನವನ್ನು ತೊರೆದು, ಒಂದು ದೊಡ್ಡತನದ ಅನುಭವ ಹೊಂದಬೇಕಾದರೆ ಶ್ರವಣ ಬೆಳ್ಗೊಳದ ಶ್ರೀ ಗೊಮ್ಮಟೇಶ್ವರ ಮೂರ್ತಿಯನ್ನು ಸಂದರ್ಶಿಸಬೇಕು. ಆ ಮೂರ್ತಿಯನ್ನು ಎಷ್ಟು ನೋಡಿದರೂ, ಎಷ್ಟು ಸಲ ನೋಡಿದರೂ, ಕಣ್ಣು ದಣಿಯದು, ಹೃದಯ ತಣಿಯದು. ಅಂಥ ಸೌಂದರ್ಯ ಮೂರ್ತಿ, ಮಹಿಮಾಮೂರ್ತಿ ಅದು.

ಮುಖದಲ್ಲಿ ಅದೇನು ಚೆಲುವು! ನೋಟದಲ್ಲಿ, ನಗೆಯಲ್ಲಿ ಅದೆಂಥ ಗೆಲವು, ಒಲವು! ಎಂಥ ಸತ್ವಪೂರ್ಣವಾದ ನಿಲವು!

ಮೂರ್ತಿ ನಿರಾಭರಣ ಮೂರ್ತಿ: ಬಾನೇ ಬಟ್ಟೆ, ತೇಲುವ ಮುಗಿಲ ಮಾಲೆಯೇ ಮಾಲೆ, ಬಳ್ಳಿಗಳೇ ಅಲಂಕಾರ.

ಇಂಥ ತ್ಯಾಗ ವೈರಾಗ್ಯ ಮೂರ್ತಿಯ, ಮಹಾಪುರುಷನ ವಿಚಾರ ವಾಗಿ ಮೂರು ಮಾತು ಮಾತ್ರ:

ಪ್ರಥಮ ತೀರ್ಥಂಕರನಾದ ವೃಷಭನಿಗೆ ಇಬ್ಬರು ಹೆಂಡಿರು. ಭರತನೆಂಬವನು ಮೊದಲ ಹೆಂಡತಿಯ ೯೯ ಗಂಡು ಮಕ್ಕಳಲ್ಲಿ ಹಿರಿಯನು; ಬಾಹುಬಲಿ ಎರಡನೆಯ ಹೆಂಡತಿಯ ಮಗ. ವೃಷಭನು ಬಹುಕಾಲ ರಾಜ್ಯಭಾರ ಮಾಡಿ ತಪಸ್ಸಿಗೆ ಮನಕೊಟ್ಟು, ಭರತನಿಗೆ ಅಯೋಧ್ಯೆಯಲ್ಲಿ ಪಟ್ಟಕಟ್ಟಿ, ಬಾಹುಬಲಿಯನ್ನು ಪೌದನ ಪುರದಲ್ಲಿ ಯುವರಾಜಪದವಿಯಲ್ಲಿ ನಿಲಿಸಿ, ಮಕ್ಕಳಿಗೆಲ್ಲ ರಾಜ್ಯವನ್ನು ಹಂಚಿ ಕೊಟ್ಟು ತಪಸ್ಸಿಗೆ ತೆರಳಿದನು.

ಕಾಲಕ್ರಮದಲ್ಲಿ ಭರತನು ಚಕ್ರರತ್ನಾಯುಧವನ್ನು ಸಂಪಾದಿಸಿ ವೈಭವದಿಂದ ರಾಜ್ಯವಾಳುತ್ತಿದ್ದು, ದಿಗ್ವಿಜಯಕ್ಕೆ ಹೊರಟು ಎಲ್ಲ ಅರಸರನ್ನೂ ಗೆದ್ದನು. ದಿಗ್ವಿಜಯದಿಂದ ಹಿಮ್ಮರಳಿ ಅಯೋಧ್ಯೆಯನ್ನು ಹೊಗುವಾಗ ಮುಂಬರಿಯುತ್ತಿದ್ದ ಚಕ್ರ ನಿಂತುಬಿಟ್ಟಿತು. ಕಾರಣವನ್ನು ಅರಸಲಾಗಿ, ತನ್ನ ತಮ್ಮಂದಿರು, ಅದರಲ್ಲಿಯೂ ಬಾಹುಬಲಿ, ತನ್ನ ಚಕ್ರಾಧಿಪತ್ಯವನ್ನು ಒಪ್ಪಲು ಸಿದ್ಧರಾಗಿಲ್ಲವೆಂದು ತಿಳಿಯ ಬಂತು. ಕೂಡಲೆ ಅವನು ತನ್ನ ಎಲ್ಲ ತಮ್ಮಂದಿರ ಮೇಲೂ ವಿಜಯ ಯಾತ್ರೆ ಹೊರಟನು. ಆದರೆ ಅವರು ಇವನಿಗೆ ಶರಣಾಗದೆ, ರಾಜ್ಯವನ್ನು ತೊರೆದು ತಮ್ಮ ತಂದೆಯ ಸನ್ನಿಧಿಯಲ್ಲಿ ತಪೋನಿರತರಾದರು.

ಭರತನು ತನ್ನ ತಮ್ಮ ಬಾಹುಬಲಿಯ ಮೇಲೂ ಯುದ್ಧ ಹೂಡಿದನು. ಜನರ ಕೊಲೆಯಾಗಬಾರದೆಂಬ ಧರ್ಮಬುದ್ಧಿಯಿಂದ ಇಬ್ಬರ ಸೈನ್ಯಗಳಿಗೂ ಯುದ್ಧ ನಡೆಯದೆ, ಇಬ್ಬರಿಗೂ ದೃಷ್ಟಿಯುದ್ಧ ಜಲಯುದ್ಧ ಮಲ್ಲಯುದ್ಧಗಳೆಂಬ ಮೂಬಗೆಯ ದ್ವಂದ್ವಯುದ್ಧ ನಡೆಯಿತು. ಎಲ್ಲ ಯುದ್ಧಗಳಲ್ಲಿಯೂ ಬಾಹುಬಲಿಯೇ ಗೆದ್ದನು. ಕೋಪಗೊಂಡ ಭರತನು ತನ್ನ ಚಕ್ರವನ್ನು ತಮ್ಮನ ಮೇಲೆ ಇಟ್ಟನು. ಅದು ಬಾಹುಬಲಿಯನ್ನು ಬಲವಂದು ಅವನ ಬಳಿ ಚಲಿಸದೆ ನಿಂತಿತು. ಹೀಗೆ ನಿಂತ ಚಕ್ರವನ್ನು ನೋಡಿದ ಕ್ಷಣವೇ ಅವನ ಮನಸ್ಸಿನಲ್ಲಿ ವೈರಾಗ್ಯ ಹುಟ್ಟಿತು; ಯಾವ ಒಂದು ರಾಜ್ಯಕ್ಕಾಗಿ ತನ್ನ ಅಣ್ಣ ತನ್ನ ಮೇಲೆ ಕತ್ತಿಕಟ್ಟಿದನೋ ಅದರಲ್ಲಿ ಜುಗುಪ್ಸೆಯಾಯಿತು. ತನ್ನ ತಂದೆ ತನಗೆ ಕೊಟ್ಟಿದ್ದ ರಾಜ್ಯವನ್ನೂ ಅಣ್ಣನಿಗೇ ಕೊಟ್ಟುಬಿಟ್ಟು, ತಪಸ್ಸಿಗೆ ತೆರಳಿ, ಒಂದು ವರ್ಷಕಾಲ ಒಂದೇ ಸಮನಾಗಿ ನಿಂತು ಉಗ್ರವಾದ ತಪಸ್ಸು ಮಾಡಿದನು. ಆದರೂ ಕೇವಲಜ್ಞಾನೋತ್ಪತ್ತಿಯಾಗಲಿಲ್ಲ. ಅಣ್ಣನ ನೆಲದ ಮೇಲೆ ನಿಂತಿರುವೆನೆಂಬ ಅಭಿಮಾನವೇ ಕಾರಣವಾಗಿ ಬಾಹುಬಲಿಗೆ ಕೇವಲಜ್ಞಾನವುಂಟಾಗಿಲ್ಲವೆಂಬುದನ್ನು ಭರತನು ತನ್ನ ತಂದೆ ಆದಿನಾಥ (ವೃಷಭ) ನಿಂದ ತಿಳಿದು, ತನ್ನ ತಮ್ಮನ ಬಳಿ ಹೋಗಿ ಅವನ ಕಾಲಿಗೆ ಎರಗಿ, ಅವನಲ್ಲಿ ನೆಲಸಿದ್ದ ನೆಲದ ಅಭಿಮಾನವನ್ನು ಕಳೆಯಲು ಬಾಹುಬಲಿಗೆ ಕೇವಲಜ್ಞಾನ ಉದಯಿಸಿತು; ಅವನು ಮುಕ್ತಿಗೆ ಸಂದನು. ವೀರ ವೈರಾಗ್ಯ ಮೂರ್ತಿಯಾದ ಈ ಬಾಹುಬಲಿಯೇ ಗೊಮ್ಮಟೇಶ್ವರ.

ಜೈನರಿಗೆ ಮಾತ್ರವಲ್ಲ, ಎಲ್ಲ ಕನ್ನಡಿಗರಿಗೂ, ಅಷ್ಟೇಕೆ ಎಲ್ಲ ಕಲಾ ಪ್ರೇಮಿಗಳಿಗೂ ಯಾತ್ರಾಸ್ಥಳವಾದ ಶ್ರವಣಬೆಳ್ಗೊಳದ ಗೊಮ್ಮಟೇಶ್ವರ ವಿಗ್ರಹವಲ್ಲದೆ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎರಡು ಕಡೆ (ಕಾರ್ಕಳ, ಏಣೂರು) ಎರಡು ಗೊಮ್ಮಟನ ವಿಗ್ರಹಗಳಿವೆ. ಶ್ರವಣ ಬೆಳ್ಗೊಳದ ಗೊಮ್ಮಟ ವಿಗ್ರಹವೇ ಎಲ್ಲಕ್ಕೂ ದೊಡ್ಡದು; ಅದು ೫೭ ಅಡಿಯ ಒಂದೇ ಕಲ್ಲಿನ ವಿಗ್ರಹ. ಇನ್ನು ೪೩ ವರ್ಷವಾದರೆ ಅದು ಮೈವೆತ್ತು ೧,೦೦೦ ವರ್ಷ.

ಈ ವಿಗ್ರಹವನ್ನು ಮಾಡಿಸಿದ ಮಹನೀಯ ಚಾವುಂಡರಾಯ; ಮಾಡಿಸಿದ್ದು ಕ್ರಿ. ಶ. ೯೮೧ರಲ್ಲಿ. ಚಾವುಂಡರಾಯನು ಗಂಗರಸರಾದ ಮಾರಸಿಂಹ, ರಾಚಮಲ್ಲ ಮತ್ತು ರಕ್ಕಸಗಂಗ (ಕ್ರಿ. ಶ. ೯೭೭-೯೮೪) ಎಂಬವರ ಆಶ್ರಯದಲ್ಲಿ ಸೇನಾಧಿಪತಿಯೂ ಮಂತ್ರಿಯೂ ಆಗಿದ್ದನು. ಅಲ್ಲದೆ, ಕನ್ನಡ ಸಂಸ್ಕೃತ ಪ್ರಾಕೃತ ಭಾಷೆಗಳಲ್ಲಿ ದೊಡ್ಡ ವಿದ್ವಾಂಸನಾಗಿದ್ದನು. ಇವನ ಹೆಸರನ್ನು ಕನ್ನಡಿಗರು ಎಂದೆಂದೂ ಮರೆಯುವಂತಿಲ್ಲ: ಗೊಮ್ಮಟೇಶ್ವರ ವಿಗ್ರಹದ ಪೀಠದಲ್ಲಿ "ಶ್ರೀ ಚಾವುಂಡ ರಾಜಂ ಮಾಡಿಸಿದಂ" ಎಂಬ ಬರಹ ಚಾವುಂಡರಾಯನ ಹೆಸರನ್ನು ಶಾಶ್ವತಗೊಳಿಸಿದೆ. ಗೊಮ್ಮಟನ ಪ್ರತಿಮೆಯನ್ನು ಅಪಾರ ದ್ರವ್ಯ ವ್ಯಯಮಾಡಿ ಮಾಡಿಸಿದ್ದಕ್ಕಾಗಿ ಅವನ 'ಪರಮಸ್ವಾಮಿ'ಯಾದ ರಾಚಮಲ್ಲನು ಅವನಿಗೆ 'ರಾಯ' ಎಂಬ ಬಿರುದನ್ನು ಕೊಟ್ಟನು.

ಚಾವುಂಡರಾಯನು ೨೪ ತೀರ್ಥಂಕರರ ಚರಿತ್ರೆಯನ್ನೊಳಕೊಂಡ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ' ವನ್ನು ಕನ್ನಡದಲ್ಲಿ ಬರೆದಿದ್ದಾನೆ. (ಕ್ರಿ. ಶ. ೯೭೮) ಇದು 'ಚಾಮುಂಡರಾಯ ಪುರಾಣಂ' ಎಂದು ಪ್ರಸಿದ್ಧವಾಗಿದೆ. ಕನ್ನಡದಲ್ಲಿ ಇದುವರೆಗೆ ದೊರೆತಿರುವ ಗದ್ಯ ಗ್ರಂಥಗಳಲ್ಲಿ ಇದೇ ಮೊದಲನೆಯದು.

ಗೊಮ್ಮಟೇಶ್ವರ ಮಹಾಮುನಿಯನ್ನು ನೆನೆದಾಯ್ತು; ಆತನ ಪ್ರತಿಮೆಯನ್ನು ಮಾಡಿಸಿದ ಮಹಾಮಂತ್ರಿಯನ್ನು ನೆನೆದಾಯ್ತು; ಆದರೆ, ದಿವ್ಯಭವ್ಯವಾದ ಗೊಮ್ಮಟ ಮೂರ್ತಿಯನ್ನು ಕಂಡರಿಸಿದ ಶಿಲ್ಪಿವರ್ಯನನ್ನು ಹೆಸರಿಸಿ ನೆನೆಯುವ ಭಾಗ್ಯವನ್ನು ಕಾಲಪುರುಷ ಕನ್ನಡ ನಾಡಿಗೆ ಉಳಿಸಲಿಲ್ಲ.

ಕೆ. ಪಿ. ರಾಘವಾಚಾರ್, ಬೆಂಗಳೂರು.

---

## ಸಾದರ ಸ್ವೀಕಾರ

೧. ದೆಸರೆಯ ಕಾಣಿಕೆ (ಕವಿತೆ):
ಲೇಖಕರು: ಶ್ರೀ॥ ಜಿ. ಎನ್. ಲಕ್ಷ್ಮಣ ಪೈ, ಪುತ್ತೂರು.

೨. ಮೈಸೂರಿನ ಮಹನೀಯರು—ಭಾಗ ೧ (ಜೀವನ ಚರಿತೆ):
ಲೇಖಕರು: ಶ್ರೀ॥ ಶ್ರೀ ಸುಬ್ರಹ್ಮಣ್ಯ ಅವರು, ನಂಜನಗೂಡು.

೩. ಹಳ್ಳಿಯ ಹಾಡುಗಳು:
ಸಂಗ್ರಾಹಕರು: ಶ್ರೀ॥ಗಳಾದ ಬಿ. ಎನ್. ರಂಗಸ್ವಾಮಿಯವರು ಮತ್ತು ಗೊರೂರು ರಾಮಸ್ವಾಮಿ ಐಯಂಗಾರ್ಯರವರು, ಗೊರೂರು.

೪. ಕನ್ನಡ ಗದ್ಯಮಾಲೆ:
ಸಂಪಾದಕರು: ಪ್ರೊ॥ ಎಸ್.ಎಸ್. ಮಾಳವಾಡರವರು,ಎಂ.ಎ., ಧಾರವಾಡ.

# ಮುದವೀಡು ಕೃಷ್ಣರಾಯರು

ಶ್ರೀ. ದ. ಕೃ. ಭಾರದ್ವಾಜ, ಬೆಂಗಳೂರು.

೧೯೧೩—೧೪ನೆಯ ಸಾಲಿನಲ್ಲಿ ಒಂದು ದಿನ ಬಸವನಗುಡಿಯ ಶ್ರೀ ರಾಮಕೃಷ್ಣಾಶ್ರಮದಲ್ಲಿ ಸ್ವಾಮಿ ನಿಷಿದ್ಧಾನಂದರೊಂದಿಗೆ ಬಂಗಾಳಿ ಭಾಷೆಯ ವಿಷಯವಾಗಿ ಚರ್ಚೆ ಮಾಡುತ್ತಲಿದ್ದೆ. ಆಗ ಅಲ್ಲಿಗೆ ಹಣಮಂತಾಚಾರ್ಯ ಗುಡಿ ಎಂಬ ನನ್ನ ಯುವಕ ಮಿತ್ರರು ತಮ್ಮೊಂದಿಗೆ ಶ್ರೀ ರಾಮಕೃಷ್ಣಾಶ್ರಮವನ್ನು ದರ್ಶಿಸಲು ಬಂದ ವ್ಯಕ್ತಿಯ ಪರಿಚಯ ಮಾಡಿಸಿದರು. ವ್ಯಕ್ತಿಯ ದುಂಡಾದ ಮುಖ, ನಾಗಪುರಿ ಅಂಚಿನ ಧೋತ್ರ, ಪೋಷಾಕಿನ ಶಿಸ್ತು ಇವು ಅವರ ಶೃಂಗಾರ ಪ್ರಿಯತೆಯನ್ನು ವ್ಯಕ್ತಪಡಿಸುತ್ತಿದ್ದುವು. ಆಗತಾನೆ ನಾನು ಕನ್ನಡ ನುಡಿಯ ಸೇವೆಗಾಗಿ ಹಂಬಲಿಸಿ ನನ್ನ ಒಂದೆರಡು ಲೇಖನಗಳೂ ಪತ್ರಿಕೆಯಲ್ಲಿ ಪ್ರಕಟವಾಗಿದ್ದವು. ಅಂಥಾ ಸಮಯದಲ್ಲಿ ವ್ಯಕ್ತಿ ಪರಿಚಯ ಮಾಡಿಸಿದವರು, ಇವರೇ "ಧಾರವಾಡದ 'ಕರ್ನಾಟಕ ವೃತ್ತ' ಮತ್ತು 'ಧನಂಜಯ' ಪತ್ರಿಕೆಯ ಸಂಪಾದಕರು ಮಿಸ್ಟರ್ ಮುದವೀಡು ಕೃಷ್ಣರಾಯರು" ಎಂದು ಹೇಳಿ, ನನ್ನ ಪರಿಚಯವನ್ನೂ ಅವರಿಗೆ ಹೇಳಿದರು. ಆಗ ಅವರು, "ನೀವೇನೋ ಮಿಸ್ಟರ್ ಭಾರದ್ವಾಜರು" ಎಂದು ಅವರ ಸ್ವಭಾವ ಸಹಜವಾದ ಸಿಂಹನಾದದಲ್ಲಿ ನುಡಿದರು. ನಾನು, 'ದ. ಕೃ. ಭಾರದ್ವಾಜನೆಂದು ನನ್ನನ್ನು ಕರೆಯುತ್ತಾರೆ' ಎಂದೆನು. ಆಗ ಅವರು ಕನ್ನಡ ನುಡಿ ನಾಡಿನ ವಿಚಾರದಲ್ಲಿ ಧಾರವಾಡದವರು ಮಾಡುತ್ತಿರುವ ಕೆಲಸದ ವಿಚಾರವನ್ನು ಹೇಳಿದರು. ಹೀಗೆ ಮುದವೀಡರ ಪರಿಚಯಕ್ಕೆ ಮೊದಲಾಯಿತು.



ಅನಂತರ ೧೯೧೮-೧೯ನೆಯ ಸಾಲಿನಲ್ಲಿ ನಾನು ಮಂಗಳೂರಿನಲ್ಲಿದ್ದ ರಾಷ್ಟ್ರೀಯ ಶಿಕ್ಷಕಿಯರ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗ ಶ್ರೀ ಮುದವೀಡು ಕೃಷ್ಣರಾಯರೂ ದಿವಂಗತ ಕಡಪಾ ರಾಘವೇಂದ್ರ ರಾಯರೂ ನಾಗಪುರದ ಕಾಂಗ್ರೆಸಿನಲ್ಲಿ ಭಾಷಾವಾರು ಪ್ರಾಂತ ರಚನೆಗನುಸಾರವಾಗಿ ಕರ್ನಾಟಕ ಪ್ರಾಂತವನ್ನೂ ರಚಿಸಬೇಕೆಂಬ ಧೋರಣೆಯನ್ನು ಕಾಂಗ್ರೆಸಿನ ಮುಂದೆ ಮಂಡಿಸಬೇಕೆಂದು ಸಂಕಲ್ಪಿಸಿ, ಅದಕ್ಕಾಗಿ ನಾವು ಕನ್ನಡ ನಾಡಿನವರ ಅಭಿಪ್ರಾಯವನ್ನರಿಯಲು ಬಂದಿದ್ದೇವೆ ಎಂದರು. ಆಗ ಅವರನ್ನು 'ಸ್ವದೇಶಾಭಿಮಾನಿ' ಮತ್ತು 'ಕಂಠೀರವ' ಪತ್ರಿಕೆಗಳ ಸಂಪಾಕದರ ಬಳಿಗೆ ಕರೆದುಕೊಂಡು ಹೋಗಿ, ಅವರಿಗಾಗಿ ಅಂದು ಸಂಜೆಗೆ ಒಂದು ಬಹಿರಂಗಸಭೆಯನ್ನೂ ಏರ್ಪಡಿಸಲಾಯಿತು. ಅದರಲ್ಲಿ ಇಬ್ಬರು ಮಹನೀಯರೂ ಕನ್ನಡ ನಾಡಿನ ಅಂದಿನ ಸ್ಥಿತಿ, ಅದರಿಂದ ಆಗಿರುವ ಕನ್ನಡನುಡಿಯ ಸ್ಥಿತಿ, ಅದಕ್ಕಾಗಿ ಆಗಬೇಕಾಗಿರುವ ಕರ್ನಾಟಕದ ಏಕೀಕರಣ, ಕರ್ನಾಟಕ ಪ್ರಾಂತ ರಚನೆಯ ಆವಶ್ಯಕತೆ ಇತ್ಯಾದಿ ವಿಷಯವಾಗಿ ಭಾಷಣಮಾಡಿದರು. ಅನಂತರ ಅವರು ಅದೇ ಉದ್ದೇಶದಿಂದ ಉಡುಪಿಗೂ ಹೋಗಿ ಭಾಷಣ ಮಾಡಿ ಬಂದು, ಮುಂದೆ ನೀಲಗಿರಿ ಸೇಲಂ ಕಡೆಗೆ ಹೊರಡುತ್ತೇವೆಂದು ಹೊರಟರು. ಅಂದಿನಿಂದ ಅವರ ನನ್ನ ಪರಿಚಯವು ದಿನ ದಿನಕ್ಕೆ ಹೆಚ್ಚುತ್ತ ಹೋಯಿತು. ಅಂದಿನಿಂದ ಇಂದಿನವರೆಗೆ ನಡೆದಿರುವ ಕರ್ನಾಟಕದ ಏಕೀಕರಣ ವಿಚಾರದಲ್ಲಿ ಬೀಜವನ್ನು ನೆಟ್ಟವರಲ್ಲಿ ಶ್ರೀ|| ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು ಮತ್ತು ಮುದವೀಡು ಕೃಷ್ಣರಾಯರು ಇವರುಗಳ ಹೆಸರನ್ನು ಕನ್ನಡಿಗರು ಮರೆಯುವಂತಿಲ್ಲ. ಆಗ ಈ ಮೂವರು ಮಹನೀಯರಿಗೆ ಬೆಂಬಲವಾಗಿ ಧಾರವಾಡದ ಗೆಳೆಯರ ಗುಂಪಿನವರೂ, ಬೆಳಗಾವಿಯ ಡಾ|| ಸವಣೂರ ಹಣಮಂತರಾಯರೂ ವಿಶೇಷ ಸೇವೆಯನ್ನು ಸಲ್ಲಿಸಿರುವರು. ಕರ್ನಾಟಕ ಸಾಹಿತ್ಯ ಪರಿಷತ್ತಿನ ವ್ಯಾಪಕತ್ವವು ಈಗಿನಷ್ಟಿಲ್ಲದಿದ್ದ ಆ ಸಮಯದಲ್ಲಿ ಈ ಮಹನೀಯರು ಕನ್ನಡನಾಡಿನ ಏಕೀಕರಣಕ್ಕಾಗಿ ಸಲ್ಲಿಸಿರುವ ಸೇವೆ ಅಮೋಘವಾದುದಾಗಿದೆ. ಆ ಸಮಯದಲ್ಲಿ ಇದೇ ಕಾರ್ಯಸಾಧನೆಗಾಗಿ "ಜಯ ಕರ್ನಾಟಕ" ಜನ್ಮ ತಳೆಯಿತು. ಮತ್ತೆ ಅದಕ್ಕೆ ಮುಂಚೆ ಮುದವೀಡು ಕೃಷ್ಣರಾಯರ ಪತ್ರಿಕೆಯಂತೂ ಇದೇ ವಿಷಯಕ್ಕೆ ಮೀಸಲಾಯಿತು. ಧಾರವಾಡದಲ್ಲಿ ದಿವಂಗತ ಶ್ರೀ ಕೆರೂರ ವಾಸುದೇವಾಚಾರ್ಯರೂ ಒಂದು ಪತ್ರಿಕೆಯನ್ನು ಹೊರಡಿಸಿದರು. ಮತ್ತೆ ಡಾ|| ಸವಣೂರ ಹಣಮಂತರಾಯರ 'ಕರ್ನಾಟಕ ಮಿತ್ರ' ಪತ್ರಿಕೆಯೂ ಇದೇ ಕೆಲಸವನ್ನು ಮಾಡಲಾರಂಭಿಸಿತು. ಆದರೆ ಬೆಳಗಾವಿ ಕನ್ನಡಿಗರ ಹೆಚ್ಚಿನ ಸಹಕಾರವಿಲ್ಲದೆ ಕೆಲವು ಮರಾಠಿ ಮಿತ್ರರ ಉಪಟಳದಿಂದ ಅದು ಹೆಚ್ಚುಕಾಲ ಬಾಳಲಾರದೆ ಹೋಯಿತು. ಈ ಕಾರ್ಯಗಳಿಗೆಲ್ಲ ಆಲೂರ ವೆಂಕಟರಾಯರು ಮೂಲಋಷಿಗಳಾದರೆ ಮುದವೀಡು ಕೃಷ್ಣರಾಯರು ಪ್ರಚಾರಕರಾದರು.

ಒಂದು ದಿನ ಮದ್ರಾಸ ಬೀಚಿನಲ್ಲಿ ದಿವಂಗತ ಶ್ರೀ ವಿಪಿನ ಚಂದ್ರ ಪಾಲರು ಸಿಂಹನಾದದಿಂದ ಭಾಷಣ ಮಾಡುವಾಗ ಪ್ರೇಕ್ಷಕರೊಲ್ಲಬ್ಬರು 'ಗಟ್ಟಿಯಾಗಿ ಹೇಳಿ' ಎಂದರು. ಆಗ ಪಾಲರು ಸಮುದ್ರದ ತೆರೆಗಳ ನಾದವನ್ನು ತಮ್ಮ ನಾದದಲ್ಲಿ ಮುಳುಗಿಸುವಂತೆ ಮಾತನಾಡುತ್ತಾ "ಈಗ ನಿಮಗೆ ಕೇಳಿಸುವುದೋ" ಎಂದರು. ಆದರೆ ಕರ್ನಾಟಕದ ಮುದವೀಡು ಕೃಷ್ಣರಾಯರು ಭಾಷಣ ಮಾಡಲಾರಂಭಿಸುವಾಗ ಮೆತ್ತಗೆ ಆರಂಭಿಸಿದರೂ, ಸ್ವಲ್ಪ ಹೊತ್ತಿಗಾಗಲೇ ಅವರೂ ಆವೇಶಗೊಂಡರು. ಪ್ರೇಕ್ಷಕರನ್ನೂ ಆವೇಶದಲ್ಲಿ ಮುಳುಗಿಸುವ ಸಿಂಹ ಗರ್ಜನೆಯಂಥ ಧ್ವನಿ ಅವರದು. "ಲೌಡರ್ ಪ್ಲೀಸ್!" ಎಂದು ಅವರಿಗಾರೂ ಅನ್ನುವಂತೆಯೇ ಇಲ್ಲ. ಕೃಷ್ಣರಾಯರ ಬರಹದ ಶೈಲಿಯೂ ಅವರು ಮಾತಾಡಿದಂತೆಯೆ. ಅವರ ಮಾತಿನಲ್ಲಿ ವಕ್ತೃತ್ವ ಶೈಲಿಯಿದೆ. ಕೃಷ್ಣರಾಯರ ಪತ್ರಿಕೆಯನ್ನೋದದಿರುವವರಿಗೆ ಅವರ ಲೇಖನ ಪರಿಚಯವಾಗುವಂತಿಲ್ಲ. ಏಕೆಂದರೆ ಕೆಲವು ಪತ್ರಿಕೆಗಳ ವಿಶೇಷ ಸಂಚಿಕೆಗಳಿಗೆ ಅವರು ಬರೆದ ಲೇಖನಗಳು ಬೇರೆಯಾಗಿಲ್ಲ. ಅವರು ಕರ್ನಾಟಕ ಏಕೀಕರಣ, ಕರ್ನಾಟಕ ಪ್ರಾಂತನಿರ್ಮಾಣಕ್ಕಾಗಿ ಅಲ್ಲಲ್ಲಿ ಸುತ್ತಿ ಕನ್ನಡಿಗರನೆಚ್ಚರಿಸುವ ಕೆಲಸದಲ್ಲಿ ಒಂದು ಕಡೆ ನೆಲೆಯಾಗಿ ನಿಂತು ಸಾಹಿತ್ಯ ರಚನೆಯನ್ನು ಮಾಡಲು ಅವರಿಗೆ ಅವಕಾಶ ದೊರೆಯಲಿಲ್ಲ. ಅದರಿಂದಲೆ ಅವರ ಪತ್ರಿಕೆಗಾಗಿ ಕೆಲಸ ಮಾಡಲವಕಾಶವಾಗಲಿಲ್ಲ. ಮತ್ತೆ ಆ ಕಾರಣದಿಂದ ಅವರ ಪತ್ರಿಕೆ ವರ್ತಮಾನ ಪತ್ರಿಕೆ (ನ್ಯೂಸ್ ಪೇಪರ್) ಆಗಿರದೆ ಕೇವಲ ಅಭಿಪ್ರಾಯದ ಪತ್ರಿಕೆ (ವ್ಯೂಸ್ ಪೇಪರ್) ಆಗಿತ್ತು. ಅಂಥಾ ಪತ್ರಿಕೆಗೆ ಆಗಿನ್ನೂ ಜಾಗೃದವಸ್ಥೆಗೆ ಬರುತ್ತಿದ್ದ ಕರ್ನಾಟಕದಿಂದ ಹೆಚ್ಚು ಉತ್ತೇಜನ ದೊರೆಯುವುದು ಸಾಧ್ಯವಾಗದೆ ಅದು ನಿಂತು ಹೋಯಿತು. ಇನ್ನು ರಾಜಕೀಯ ರಂಗದಲ್ಲಿ ಕೃಷ್ಣರಾಯರು ಕಾರಾಗೃಹ ಕಷ್ಟನಿಷ್ಠುರಗಳನ್ನೂ ಸಹಿಸಿರುವರು. ೧೯೨೨—೨೩ನೆಯ ಸಾಲಿನಲ್ಲಿ ನಾನು ಕಾರಾಗೃಹದಿಂದ ಹೊರಬಿದ್ದು ಮಂಗಳೂರಿಗೆ ಮರಳಿದ ಬಳಿಕ ಶ್ರೀ|| ದಿವಾಕರ ಮತ್ತು ಶ್ರೀ|| ಮುಧವೀಡರನ್ನು ಉಪನ್ಯಾಸಗಳಿಗಾಗಿ ಆಹ್ವಾನಿಸಲಾಯಿತು. ಆಗ ಜಿಲ್ಲೆಯ ಅನೇಕ ಭಾಗಗಳಲ್ಲಿ ಸುತ್ತುತ್ತ ನಾವು ಕಾಸರಗೋಡಿಗೆ ಬಂದೆವು. ಅಲ್ಲಿ ಉಪನ್ಯಾಸಗಳು ಮುಗಿದ ಬಳಿಕ ರಾತ್ರಿ ಮುದವೀಡು ಕೃಷ್ಣರಾಯರು ತಮ್ಮ 'ಕೀರ್ತನೆ'ಯನ್ನಿಟ್ಟುಕೊಂಡಿದ್ದರು. ಅದನ್ನು ಕೇಳಿ ಆಶ್ಚರ್ಯವಾಗಿ, "ನಿಮ್ಮ ಕೀರ್ತನೆ ವಿಷಯವಾವುದು?" ಎಂದೆನು. ಅದಕ್ಕೆ ಅವರು, "ಕರ್ನಾಟಕದ ಏಕೀಕರಣ, ಪ್ರಾಂತರಚನೆ" ಎಂದು ಕೀರ್ತನವನ್ನೂ ಮಾಡಿದರು. ಇದರಿಂದ ಅವರ ಜೀವನದ ಕನಸು ಏನಾಗಿದೆಯೆಂದು ತಿಳಿಯಬಹುದು. ಮುದವೀಡರು ಯಾರಿಗಾದರೂ ವಿರೋಧಿಗಳಾದರೆ ತೀವ್ರ ವಿರೋಧಿಗಳಾಗಿ, ಕನ್ನಡ ನಾಡು ನುಡಿಗಳನ್ನು ವಿರೋಧಿಸುವವರನ್ನು ಸದೆಬಡಿಯಲು ಯತ್ನಿಸುವುದು ಅವರ ಸ್ವಭಾವವಾಗಿರುವುದರಿಂದ ಇಂದಿನ ಕರ್ನಾಟಕದ ರಾಜಕೀಯರಂಗದಲ್ಲಿ ಅವರಿಗೆ ಸರಿಯಾದ ಸ್ಥಾನ ದೊರೆಯದಾಗಿದೆ. ವಿರೋಧಿಗಳೊಂದಿಗೆ ಕುಸ್ತಿಗೆ ನಿಂತು ಬಿಡುವರವರು. ಶಾಂತಿ, ಸಮಾಧಾನ, ಒಪ್ಪಂದಗಳ ರೀತಿ ಅವರ ಸ್ವಭಾವದಲ್ಲಿಲ್ಲ. ಇದು ಅವರಲ್ಲಿರುವ ಕೆಲವರಿಗೆ ದೋಷವಾಗಿ ಕಾಣಬಹುದು.

# ಮುದವೀಡು ಕೃಷ್ಣರಾಯರು

ಶ್ರೀ. ದ. ಕೃ. ಭಾರದ್ವಾಜ, ಬೆಂಗಳೂರು.

೧೯೧೩—೧೪ನೆಯ ಸಾಲಿನಲ್ಲಿ ಒಂದು ದಿನ ಬಸವನಗುಡಿಯ ಶ್ರೀ ರಾಮಕೃಷ್ಣಾಶ್ರಮದಲ್ಲಿ ಸ್ವಾಮಿ ನಿಷಿದ್ಧಾನಂದರೊಂದಿಗೆ ಬಂಗಾಳಿ ಭಾಷೆಯ ವಿಷಯವಾಗಿ ಚರ್ಚೆ ಮಾಡುತ್ತಲಿದ್ದೆ. ಆಗ ಅಲ್ಲಿಗೆ ಹಣಮಂತಾಚಾರ್ಯ ಗುಡಿ ಎಂಬ ನನ್ನ ಯುವಕ ಮಿತ್ರರು ತಮ್ಮೊಂದಿಗೆ ಶ್ರೀ ರಾಮಕೃಷ್ಣಾಶ್ರಮವನ್ನು ದರ್ಶಿಸಲು ಬಂದ ವ್ಯಕ್ತಿಯ ಪರಿಚಯ ಮಾಡಿಸಿದರು. ವ್ಯಕ್ತಿಯ ದುಂಡಾದ ಮುಖ, ನಾಗಪುರಿ ಅಂಚಿನ ಧೋತ್ರ, ಪೋಷಾಕಿನ ಶಿಸ್ತು ಇವು ಅವರ ಶೃಂಗಾರ ಪ್ರಿಯತೆಯನ್ನು ವ್ಯಕ್ತಪಡಿಸುತ್ತಿದ್ದುವು. ಆಗತಾನೆ ನಾನು ಕನ್ನಡ ನುಡಿಯ ಸೇವೆಗಾಗಿ ಹಂಬಲಿಸಿ ನನ್ನ ಒಂದೆರಡು ಲೇಖನಗಳೂ ಪತ್ರಿಕೆಯಲ್ಲಿ ಪ್ರಕಟವಾಗಿದ್ದುವು. ಅಂಥಾ ಸಮಯದಲ್ಲಿ ವ್ಯಕ್ತಿ ಪರಿಚಯ ಮಾಡಿಸಿದವರು, ಇವರೇ “ಧಾರವಾಡದ ‘ಕರ್ನಾಟಕ ವೃತ್ತ’ ಮತ್ತು ‘ಧನಂಜಯ’ ಪತ್ರಿಕೆಯ ಸಂಪಾದಕರು ಮಿಸ್ಟರ್ ಮುದವೀಡು ಕೃಷ್ಣರಾಯರು” ಎಂದು ಹೇಳಿ, ನನ್ನ ಪರಿಚಯವನ್ನೂ ಅವರಿಗೆ ಹೇಳಿದರು. ಆಗ ಅವರು, “ನೀವೇನೋ ಮಿಸ್ಟರ್ ಭಾರದ್ವಾಜರು” ಎಂದು ಅವರ ಸ್ವಭಾವ ಸಹಜವಾದ ಸಿಂಹನಾದದಲ್ಲಿ ನುಡಿದರು. ನಾನು, ‘ದ. ಕೃ. ಭಾರದ್ವಾಜನೆಂದು ನನ್ನನ್ನು ಕರೆಯುತ್ತಾರೆ’ ಎಂದೆನು. ಆಗ ಅವರು ಕನ್ನಡ ನುಡಿ ನಾಡಿನ ವಿಚಾರದಲ್ಲಿ ಧಾರವಾಡದವರು ಮಾಡುತ್ತಿರುವ ಕೆಲಸದ ವಿಚಾರವನ್ನು ಹೇಳಿದರು. ಹೀಗೆ ಮುದವೀಡರ ಪರಿಚಯಕ್ಕೆ ಮೊದಲಾಯಿತು.



ಅನಂತರ ೧೯೧೮-೧೯ ನೆಯ ಸಾಲಿನಲ್ಲಿ ನಾನು ಮಂಗಳೂರಿನಲ್ಲಿದ್ದ ರಾಷ್ಟ್ರೀಯ ಶಿಕ್ಷಕಿಯರ ಕಾಲೇಜಿನಲ್ಲಿ ಅಧ್ಯಾಪಕನಾಗಿದ್ದಾಗ ಶ್ರೀ ಮುದವೀಡು ಕೃಷ್ಣರಾಯರೂ ದಿವಂಗತ ಕಡಪಾ ರಾಘವೇಂದ್ರರಾಯರೂ ನಾಗಪುರದ ಕಾಂಗ್ರೆಸಿನಲ್ಲಿ ಭಾಷಾವಾರು ಪ್ರಾಂತ ರಚನೆಗನುಸಾರವಾಗಿ ಕರ್ನಾಟಕ ಪ್ರಾಂತವನ್ನೂ ರಚಿಸಬೇಕೆಂಬ ಧೋರಣೆಯನ್ನು ಕಾಂಗ್ರೆಸಿನ ಮುಂದೆ ಮಂಡಿಸಬೇಕೆಂದು ಸಂಕಲ್ಪಿಸಿ, ಅದಕ್ಕಾಗಿ ನಾವು ಕನ್ನಡ ನಾಡಿನವರ ಅಭಿಪ್ರಾಯವನ್ನರಿಯಲು ಬಂದಿದ್ದೇವೆ ಎಂದರು. ಆಗ ಅವರನ್ನು ‘ಸ್ವದೇಶಾಭಿಮಾನಿ’ ಮತ್ತು ‘ಕಂಠೀರವ’ ಪತ್ರಿಕೆಗಳ ಸಂಪಾಕದರ ಬಳಿಗೆ ಕರೆದುಕೊಂಡು ಹೋಗಿ, ಅವರಿಗಾಗಿ ಅಂದು ಸಂಜೆಗೆ ಒಂದು ಬಹಿರಂಗಸಭೆಯನ್ನೂ ಏರ್ಪಡಿಸಲಾಯಿತು. ಅದರಲ್ಲಿ ಇಬ್ಬರು ಮಹನೀಯರೂ ಕನ್ನಡ ನಾಡಿನ ಅಂದಿನ ಸ್ಥಿತಿ, ಅದರಿಂದ ಆಗಿರುವ ಕನ್ನಡನುಡಿಯ ಸ್ಥಿತಿ, ಅದಕ್ಕಾಗಿ ಆಗಬೇಕಾಗಿರುವ ಕರ್ನಾಟಕದ ಏಕೀಕರಣ, ಕರ್ನಾಟಕ ಪ್ರಾಂತ ರಚನೆಯ ಆವಶ್ಯಕತೆ ಇತ್ಯಾದಿ ವಿಷಯವಾಗಿ ಭಾಷಣಮಾಡಿದರು. ಅನಂತರ ಅವರು ಅದೇ ಉದ್ದೇಶದಿಂದ ಉಡುಪಿಗೂ ಹೋಗಿ ಭಾಷಣ ಮಾಡಿ ಬಂದು, ಮುಂದೆ ನೀಲಗಿರಿ ಸೇಲಂ ಕಡೆಗೆ ಹೊರಡುತ್ತೇವೆಂದು ಹೊರಟರು. ಅಂದಿನಿಂದ ಅವರ ನನ್ನ ಪರಿಚಯವು ದಿನದಿನಕ್ಕೆ ಹೆಚ್ಚುತ್ತ ಹೋಯಿತು. ಅಂದಿನಿಂದ ಇಂದಿನವರೆಗೆ ನಡೆದಿರುವ ಕರ್ನಾಟಕದ ಏಕೀಕರಣ ವಿಚಾರದಲ್ಲಿ ಬೀಜವನ್ನು ನೆಟ್ಟವರಲ್ಲಿ ಶ್ರೀ|| ಆಲೂರ ವೆಂಕಟರಾಯರು, ಕಡಪಾ ರಾಘವೇಂದ್ರರಾಯರು ಮತ್ತು ಮುದವೀಡು ಕೃಷ್ಣರಾಯರು ಇವರುಗಳ ಹೆಸರನ್ನು ಕನ್ನಡಿಗರು ಮರೆಯುವಂತಿಲ್ಲ. ಆಗ ಈ ಮೂವರು ಮಹನೀಯರಿಗೆ ಬೆಂಬಲವಾಗಿ ಧಾರವಾಡದ ಗೆಳೆಯರ ಗುಂಪಿನವರೂ, ಬೆಳಗಾವಿಯ ಡಾ|| ಸವಣೂರ ಹಣಮಂತರಾಯರೂ ವಿಶೇಷ ಸೇವೆಯನ್ನು ಸಲ್ಲಿಸಿರುವರು. ಕರ್ನಾಟಕ ಸಾಹಿತ್ಯ ಪರಿಷತ್ತಿನ ವ್ಯಾಪಕತ್ವವು ಈಗಿನಷ್ಟಿಲ್ಲದಿದ್ದ ಆ ಸಮಯದಲ್ಲಿ ಈ ಮಹನೀಯರು ಕನ್ನಡನಾಡಿನ ಏಕೀಕರಣಕ್ಕಾಗಿ ಸಲ್ಲಿಸಿರುವ ಸೇವೆ ಅಮೋಘವಾದುದಾಗಿದೆ. ಆ ಸಮಯದಲ್ಲಿ ಇದೇ ಕಾರ್ಯಸಾಧನೆಗಾಗಿ “ಜಯ ಕರ್ನಾಟಕ” ಜನ್ಮ ತಳೆಯಿತು. ಮತ್ತೆ ಅದಕ್ಕೆ ಮುಂಚೆ ಮುದವೀಡು ಕೃಷ್ಣರಾಯರ ಪತ್ರಿಕೆಯಂತೂ ಇದೇ ವಿಷಯಕ್ಕೆ ಮೀಸಲಾಯಿತು. ಧಾರವಾಡದಲ್ಲಿ ದಿವಂಗತ ಶ್ರೀ ಕೆರೂರ ವಾಸುದೇವಾಚಾರ್ಯರೂ ಒಂದು ಪತ್ರಿಕೆಯನ್ನು ಹೊರಡಿಸಿದರು. ಮತ್ತೆ ಡಾ|| ಸವಣೂರ ಹಣಮಂತರಾಯರ ‘ಕರ್ನಾಟಕ ಮಿತ್ರ’ ಪತ್ರಿಕೆಯೂ ಇದೇ ಕೆಲಸವನ್ನು ಮಾಡಲಾರಂಭಿಸಿತು. ಆದರೆ ಬೆಳಗಾವಿ ಕನ್ನಡಿಗರ ಹೆಚ್ಚಿನ ಸಹಕಾರವಿಲ್ಲದೆ ಕೆಲವು ಮರಾಠಿ ಮಿತ್ರರ ಉಪಟಳದಿಂದ ಅದು ಹೆಚ್ಚುಕಾಲ ಬಾಳಲಾರದೆ ಹೋಯಿತು. ಈ ಕಾರ್ಯಗಳಿಗೆಲ್ಲ ಆಲೂರ ವೆಂಕಟರಾಯರು ಮೂಲಋಷಿಗಳಾದರೆ ಮುದವೀಡು ಕೃಷ್ಣರಾಯರು ಪ್ರಚಾರಕರಾದರು.

ಒಂದು ದಿನ ಮದ್ರಾಸ ಬೀಚಿನಲ್ಲಿ ದಿವಂಗತ ಶ್ರೀ ವಿಪಿನ ಚಂದ್ರಪಾಲರು ಸಿಂಹನಾದದಿಂದ ಭಾಷಣ ಮಾಡುವಾಗ ಪ್ರೇಕ್ಷಕರೊಲ್ಲಬ್ಬರು ‘ಗಟ್ಟಿಯಾಗಿ ಹೇಳಿ’ ಎಂದರು. ಆಗ ಪಾಲರು ಸಮುದ್ರದ ತೆರೆಗಳ ನಾದವನ್ನು ತಮ್ಮ ನಾದದಲ್ಲಿ ಮುಳುಗಿಸುವಂತೆ ಮಾತನಾಡುತ್ತಾ “ಈಗ ನಿಮಗೆ ಕೇಳಿಸುವುದೋ” ಎಂದರು. ಆದರೆ ಕರ್ನಾಟಕದ ಮುದವೀಡು ಕೃಷ್ಣರಾಯರು ಭಾಷಣ ಮಾಡಲಾರಂಭಿಸುವಾಗ ಮೆತ್ತಗೆ ಆರಂಭಿಸಿದರೂ, ಸ್ವಲ್ಪ ಹೊತ್ತಿಗಾಗಲೇ ಅವರೂ ಆವೇಶಗೊಂಡರು. ಪ್ರೇಕ್ಷಕರನ್ನೂ ಆವೇಶದಲ್ಲಿ ಮುಳುಗಿಸುವ ಸಿಂಹ ಗರ್ಜನೆಯಂಥ ಧ್ವನಿ ಅವರದು. “ಲೌಡರ್ ಪ್ಲೀಸ್!” ಎಂದು ಅವರಿಗಾರೂ ಅನ್ನುವಂತೆಯೇ ಇಲ್ಲ. ಕೃಷ್ಣರಾಯರ ಬರಹದ ಶೈಲಿಯೂ ಅವರು ಮಾತಾಡಿದಂತೆಯೆ. ಅವರ ಮಾತಿನಲ್ಲಿ ವಕ್ತೃತ್ವ ಶೈಲಿಯಿದೆ. ಕೃಷ್ಣರಾಯರ ಪತ್ರಿಕೆಯನ್ನೋದದಿರುವವರಿಗೆ ಅವರ ಲೇಖನ ಪರಿಚಯವಾಗುವಂತಿಲ್ಲ. ಏಕೆಂದರೆ ಕೆಲವು ಪತ್ರಿಕೆಗಳ ವಿಶೇಷ ಸಂಚಿಕೆಗಳಿಗೆ ಅವರು ಬರೆದ ಲೇಖನಗಳು ಬೇರೆಯಾಗಿಲ್ಲ. ಅವರು ಕರ್ನಾಟಕ ಏಕೀಕರಣ, ಕರ್ನಾಟಕ ಪ್ರಾಂತನಿರ್ಮಾಣಕ್ಕಾಗಿ ಅಲ್ಲಲ್ಲಿ ಸುತ್ತಿ ಕನ್ನಡಿಗರನೆಚ್ಚರಿಸುವ ಕೆಲಸದಲ್ಲಿ ಒಂದು ಕಡೆ ನೆಲೆಯಾಗಿ ನಿಂತು ಸಾಹಿತ್ಯ ರಚನೆಯನ್ನು ಮಾಡಲು ಅವರಿಗೆ ಅವಕಾಶ ದೊರೆಯಲಿಲ್ಲ. ಅದರಿಂದಲೆ ಅವರ ಪತ್ರಿಕೆಗಾಗಿ ಕೆಲಸ ಮಾಡಲವಕಾಶವಾಗಲಿಲ್ಲ. ಮತ್ತೆ ಆ ಕಾರಣದಿಂದ ಅವರ ಪತ್ರಿಕೆ ವರ್ತಮಾನ ಪತ್ರಿಕೆ (ನ್ಯೂಸ್ ಪೇಪರ್) ಆಗಿರದೆ ಕೇವಲ ಅಭಿಪ್ರಾಯದ ಪತ್ರಿಕೆ (ವ್ಯೂಸ್ ಪೇಪರ್) ಆಗಿತ್ತು. ಅಂಥಾ ಪತ್ರಿಕೆಗೆ ಆಗಿನ್ನೂ ಜಾಗೃದವಸ್ಥೆಗೆ ಬರುತ್ತಿದ್ದ ಕರ್ನಾಟಕದಿಂದ ಹೆಚ್ಚು ಉತ್ತೇಜನ ದೊರೆಯುವುದು ಸಾಧ್ಯವಾಗದೆ ಅದು ನಿಂತು ಹೋಯಿತು. ಇನ್ನು ರಾಜಕೀಯ ರಂಗದಲ್ಲಿ ಕೃಷ್ಣರಾಯರು ಕಾರಾಗೃಹ ಕಷ್ಟನಿಷ್ಠುರಗಳನ್ನೂ ಸಹಿಸಿರುವರು. ೧೯೨೨—೨೩ನೆಯ ಸಾಲಿನಲ್ಲಿ ನಾನು ಕಾರಾಗೃಹದಿಂದ ಹೊರಬಿದ್ದು ಮಂಗಳೂರಿಗೆ ಮರಳಿದ ಬಳಿಕ ಶ್ರೀ|| ದಿವಾಕರ ಮತ್ತು ಶ್ರೀ|| ಮುದವೀಡರನ್ನು ಉಪನ್ಯಾಸಗಳಿಗಾಗಿ ಆಹ್ವಾನಿಸಲಾಯಿತು. ಆಗ ಜಿಲ್ಲೆಯ ಅನೇಕ ಭಾಗಗಳಲ್ಲಿ ಸುತ್ತುತ್ತ ನಾವು ಕಾಸರಗೋಡಿಗೆ ಬಂದೆವು. ಅಲ್ಲಿ ಉಪನ್ಯಾಸಗಳು ಮುಗಿದ ಬಳಿಕ ರಾತ್ರಿ ಮುದವೀಡು ಕೃಷ್ಣರಾಯರು ತಮ್ಮ ‘ಕೀರ್ತನೆ’ಯನ್ನಿಟ್ಟುಕೊಂಡಿದ್ದರು. ಅದನ್ನು ಕೇಳಿ ಆಶ್ಚರ್ಯವಾಗಿ, “ನಿಮ್ಮ ಕೀರ್ತನೆ ವಿಷಯವಾವುದು?” ಎಂದೆನು. ಅದಕ್ಕೆ ಅವರು, “ಕರ್ನಾಟಕದ ಏಕೀಕರಣ, ಪ್ರಾಂತರಚನೆ” ಎಂದು ಕೀರ್ತನವನ್ನೂ ಮಾಡಿದರು. ಇದರಿಂದ ಅವರ ಜೀವನದ ಕನಸು ಏನಾಗಿದೆಯೆಂದು ತಿಳಿಯಬಹುದು. ಮುದವೀಡರು ಯಾರಿಗಾದರೂ ವಿರೋಧಿಗಳಾದರೆ ತೀವ್ರ ವಿರೋಧಿಗಳಾಗಿ, ಕನ್ನಡ ನಾಡು ನುಡಿಗಳನ್ನು ವಿರೋಧಿಸುವವರನ್ನು ಸದೆಬಡಿಯಲು ಯತ್ನಿಸುವುದು ಅವರ ಸ್ವಭಾವವಾಗಿರುವುದರಿಂದ ಇಂದಿನ ಕರ್ನಾಟಕದ ರಾಜಕೀಯರಂಗದಲ್ಲಿ ಅವರಿಗೆ ಸರಿಯಾದ ಸ್ಥಾನ ದೊರೆಯದಾಗಿದೆ. ವಿರೋಧಿಗಳೊಂದಿಗೆ ಕುಸ್ತಿಗೆ ನಿಂತು ಬಿಡುವರವರು. ಶಾಂತಿ, ಸಮಾಧಾನ, ಒಪ್ಪಂದಗಳ ರೀತಿ ಅವರ ಸ್ವಭಾವದಲ್ಲಿಲ್ಲ. ಇದು ಅವರಲ್ಲಿರುವ ಕೆಲವರಿಗೆ ದೋಷವಾಗಿ ಕಾಣಬಹುದು.

ಕಳೆದ ವಿಜಯನಗರ ಸಾಮ್ರಾಜ್ಯೋತ್ಸವ ಸಮಯದಲ್ಲಿ ಭಾಷಣ ಮಾಡಲು ಬಂಗಾಳಿಗಳು, ಆಂಧ್ರರು ಮತ್ತು ಕೇರಳೀಯರು ಇವರುಗಳಲ್ಲಿ ಒಬ್ಬೊಬ್ಬ ಪ್ರತಿನಿಧಿ ಬೇಕಾಗಿದ್ದನು. ಆಗ ಅದೇ ಸಮಯದಲ್ಲಿ ಹಂಪಿಯಲ್ಲಿ ಸೇರಿದ ನಿಖಿಲ ಭಾರತೀಯ ಆನುವಂಶಿಕ ವೈದ್ಯರ ಸಮ್ಮೇಲನವು ಸೇರಿತ್ತು. ಅದಕ್ಕಾಗಿ ಬಂದಿದ್ದ ಪ್ರತಿನಿಧಿಗಳಲ್ಲಿ ಅವರಿಗೆ ಬೇಕಾಗಿದ್ದ ಭಾಷಣಕಾರರನ್ನು ಆ ಪ್ರಾಂತಗಳವರಿಂದ ಆರಿಸಿ ತೋರಿದೆನು. ಸಭಾಕಾರ್ಯವೆಲ್ಲ ಮುಗಿದ ಬಳಿಕ, ಮುದವೀಡರು ಬಂದು ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದರು. ನಾನು, "ಏಕೆ? ಏನಾಯಿತು?" ಎಂದು ಕೇಳಲು, "ಇಂದು ಎಲ್ಲರ ಸಹಕಾರದಿಂದ ಕರ್ನಾಟಕ ಸಾಮ್ರಾಜ್ಯ ವೈಭವದ ಗುಣಗಾನವನ್ನು ಸಮಗ್ರ ಭಾರತದ ಎಲ್ಲ ಪ್ರಾಂತಗಳವರೂ ಹಾಡುವಂತಾಯಿತು! ಇದನ್ನು ಈ ಜನ್ಮದಲ್ಲಿಯೆ ನಾನು ನೋಡುವಂತಾದುದು ನನ್ನ ಸೌಭಾಗ್ಯ! ಇನ್ನು ಕರ್ನಾಟಕ ಎಂದು ಒಂದು ಸ್ವತಂತ್ರ ಪ್ರಾಂತವೆನಿಸಿಕೊಂಡು, ಎಂದು ನಾಡಿನವರೆಲ್ಲರೂ ಮೈಸೂರಿನವರು, ಮಂಗಳೂರಿನವರು, ಧಾರವಾಡದವರು ಎಂಬ ಭೇದವನ್ನು ಮರೆತು ನಾವು ಕನ್ನಡಿಗರು ಎಂದು ಎದೆ ತಟ್ಟಿ ಹೇಳಿಕೊಳ್ಳುವಂತಾಗುವುದೋ? ಅದನ್ನಷ್ಟು ನೋಡಿಬಿಟ್ಟರೆ, ನನ್ನ ಪ್ರಾಣ ಅಂದೇ ಈ ದೇಹದಿಂದ ಹಾರಿ ಹೋದರೂ ಚಿಂತೆಯಿಲ್ಲ" ಎಂದರು. ಮುದವೀಡರ ಹೃದಯ ಸಮಯಾಂತರದಲ್ಲಿ ಹೀಗೆ ಹೆಣ್ಣು ಕರುಳಾಗಿ ಬಿಡುವುದು. ಅವರಿಂದ ಶಾಶ್ವತ ಸಾಹಿತ್ಯಸೇವೆ ಆಗಿರದಿದ್ದರೂ, ಕನ್ನಡ ನಾಡು ನುಡಿಗಳಿಗಾಗಿ ಈ ಇಳಿವಯಸ್ಸಿನಲ್ಲಿಯೂ ಅವರು ಸಲ್ಲಿಸಿರುವ ಸೇವೆ ಇನ್ನು ಮುಂದಿನ ಸಾಹಿತಿಗಳ ಸೇವೆಗೆ ಅಡಿಗಲ್ಲಾಗಿರುವುದೆಂದರೆ ಅತ್ಯುಕ್ತಿಯಾಗದು. ಅವರು ಬಿತ್ತಿದ ಕರ್ನಾಟಕದ ಏಕೀಕರಣ, ಕನ್ನಡ ಪ್ರಾಂತರಚನೆ, ಕರ್ನಾಟಕ ವಿಶ್ವವಿದ್ಯಾನಿಲಯದ, ಕನ್ನಡ ನುಡಿಯ ಏಳಿಗೆಯ ವಿಚಾರಗಳು ಫಲಿಸಿ, ಅವರಿಗೆ ಆನಂದವೂ ಮನಶ್ಶಾಂತಿಯೂ ದೊರೆಯುವಂತಾಗಲಿ!

---

## ಕನ್ನಡ ಜೀವ!

ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ. ಎ., ಧಾರವಾಡ.

ಕಬ್ಬಿಗನೆನಿಸಿಕೊಳ್ಳಲು ಹಾತೊರೆಯುತ್ತಿದ್ದ ನನ್ನ ಕಾಡುಗೆಳೆಯನೊಬ್ಬನು ಕನ್ನಾಡ ಏಕೀಕರಣವನ್ನು ಕುರಿತು ಒಂದು ಕವನವನ್ನು ಕಟ್ಟಿರುವನು. ಅದರ ಪಲ್ಲವಿ:

ಆ ನಾಡು ಈ ನಾಡು,
ಸಾಕು ಸಾಕೀ ಪಾಡು.
ಹಾಡು ಒಂದೇ ಹಾಡು,
ಕನ್ನಾಡು ಕನ್ನಾಡು
ಎಲ್ಲ ಒಂದೇ ಗೂಡು!



ವಧ್ಯವಾದ ಈ ಪದ್ಯದ ಭಾವವನ್ನೇ ಹೃದ್ಯವಾದ ಗದ್ಯದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗದ ನನ್ನ ಗೆಳೆಯರು ಆಗಾಗ ಹಾಡುವುದನ್ನು ನಾನು ಕೇಳುತ್ತಲಿದ್ದೇನೆ. "ಬರಿಯ ಏಕೀಕರಣ ಏಕೀಕರಣವೆಂದು ಹೋರಾಡಿದರೆ ಪ್ರಯೋಜನವೇನು ಸ್ವಾಮಿ! ನಾನು ಧಾರವಾಡದವನು, ನಾನು ಮಂಗಳೂರಿನವನು, ನಾನು ಆ ಕಡೆಯವನು, ನಾನು ಈ ಕಡೆಯವನು ಎಂಬ ತಿಳಿವಳಿಕೆ ಕನ್ನಡಿಗರಲ್ಲಿ ಅಡಗಿ ಹೋಗಬೇಕು ನೋಡಿ. ನಾನು ಕನ್ನಡಿಗನು, ಕನ್ನಡಿಗನು, ಮತ್ತೆ ಕನ್ನಡಿಗನು ಎಂಬ ಒಂದೇ ಒಂದು ಅಭಿಮಾನ ಚಿಮ್ಮಿ ಏಳಬೇಕು. ಇದುವೆ ಕರ್ನಾಟಕದ ನೈಜ ಏಕೀಕರಣ!"

ಮುತ್ತಿನಂತಹ ಮಾತು, ರತ್ನದಂತಹ ರಹಸ್ಯ. ಆದರೆ ಇದನ್ನು ಸಾಧಿಸುವ ಬಗೆ ಯಾವುದು? ಭಾವನೆಯಿಂದಲೆ ಭವ್ಯತೆಯನ್ನು ಪಡೆಯುತ್ತಿದ್ದರೆ, ಭೂಲೋಕವೆ ವೈಕುಂಠವಾಗುತ್ತಿತ್ತು. ಕನಸಿನಿಂದಲೆ ಕೈಲಾಸ ಕೈವಶವಾಗುತ್ತಿದ್ದರೆ, ಕರ್ಮಭೂಮಿಯ ಅಗತ್ಯವೇಕಿತ್ತು? ಮಾನಸ ಸೃಷ್ಟಿಯಲ್ಲಿ ಮುಗಿಲಿಗೆ ಹಾರುವ ಭಾವನೆ ಕಾರ್ಯರಂಗಕ್ಕಿಳಿಯುವಾಗ ಅಡಿಗಡಿಗೆ ಎಡರು ತೊಡರುಗಳಲ್ಲಿ ಮುಗ್ಗರಿಸಿ ಬೀಳುವುದು. ಸತ್ಯ ಪ್ರಪಂಚದ ಈ ಮುಳ್ಳುಮರಗಳನ್ನೂ ಕಾಡು ಬೆಟ್ಟಗಳನ್ನೂ ಒಂದೇಟಿಗೆ ಕಿತ್ತು ಹಾಕುವುದು ಎಂತಹ ಬಲವಾದ ಭಾವನೆಗೂ ಮೀರಿದ ಕೆಲಸ.

ಬೀದರ ಭಾಗದ ಒಬ್ಬ ಒಕ್ಕಲಿಗನನ್ನು ಥಕ್ಕನೆ ಮೈಸೂರ ಒಂದು ಹಳ್ಳಿಯಲ್ಲಿ ತಂದು ನಿಲ್ಲಿಸಿರಿ. ಆತನ ಪಾಲಿಗೆ ಅದೊಂದು ವಿದೇಶವಾಗಿಯೆ ಕಾಣುವುದು. ಆತನ ನಡವಳಿ ಬೇರೆ, ತಿಂಡಿ ಬೇರೆ, ಭಾಷೆ ಬೇರೆ, ದನಿ ಬೇರೆ, ಉಚ್ಚಾರ ಬೇರೆ; ಹೆಚ್ಚೇನು, ಒಂದು ವಸ್ತುವಿಗೆ ಆತನೂ ಇಲ್ಲಿಯವರೂ ಹೇಳುವ ಶಬ್ದಗಳೂ ಬೇರೆ! ಬಿಳಿಬಟ್ಟೆಯ ಸುಶಿಕ್ಷಿತರನ್ನು ಕುರಿತು ನಾನು ಮಾತನಾಡುತ್ತಾ ಇಲ್ಲ. ಇದೇ ಸಮಸ್ಯೆಯನ್ನು ಮೊನ್ನೆಯ ನನ್ನ ಮೈಸೂರ ಸಂಚಾರದಲ್ಲಿ ಕೆಲವರು ನನ್ನನ್ನು ಕೇಳಿಯೆ ಬಿಟ್ಟರು. "ನಿಮ್ಮ ನುಡಿಗೂ ನಮ್ಮ ನುಡಿಗೂ ಏನೂ ಅಂತರವಿಲ್ಲ ನೋಡಿ. ಆದರೆ ನಿಮ್ಮ ಕಡೆಯ ಬೇರೆ ಜನರು ಈ ಕಡೆ ಬರುತ್ತಾರೆ. ಅವರು ಆಡುವುದು ನಮಗೆ ಅರ್ಥವೇ ಆಗುವುದಿಲ್ಲ. ಒಂದೇ ಕನ್ನಡ ಮಾತನಾಡುವವರಲ್ಲಿ ಇಷ್ಟು ವ್ಯತ್ಯಾಸಕ್ಕೆ ಕಾರಣವೇನು?" ಎಂದು.

ಇಂತಹ ವೈಲಕ್ಷಣ್ಯಗಳು ಎಲ್ಲ ದೇಶಗಳಲ್ಲಿಯೂ ಉಂಟು. ಇದೇನು ಕನ್ನಡದ ಹೊಸತಲ್ಲ ಎಂದು ಉತ್ತರಿಸಬಹುದು. ಆದರೆ ಈ ಉತ್ತರ ಪೂರ್ಣ ಉತ್ತರವಾಗಲಾರದು. ಕನ್ನಡದ ಈ ವ್ಯತ್ಯಾಸಗಳಿಗೂ ಉಳಿದ ಭಾಷೆ, ಜನಾಂಗಗಳ ವ್ಯತ್ಯಾಸಗಳಿಗೂ ವ್ಯತ್ಯಾಸವಿದೆ. ದಿಲ್ಲಿ-ಲಖನೊಗಳ ಉರ್ದು ಭಾಷೆಯಲ್ಲಿ ವ್ಯತ್ಯಾಸವಿರಬಹುದು. ಪುಣೆ—ನಾಗಪುರಗಳ ಮರಾಠಿಯಲ್ಲಿ ಅಂತರವಿದೆ. ಆದರೆ ಹೈದರಾಬಾದು–ಮೈಸೂರು ಕನ್ನಡಗಳಲ್ಲಿಯ ಅಂತರ ಈ ಅಂತರಗಳನ್ನು ಮೀರಿಸುವಂತಹದಾಗಿದೆ. ಇದರ ಚರಿತ್ರೆಯೇನು? ಅಂತರಂಗವೇನು?

ಇಂದಿನ ಕರ್ನಾಟಕದಲ್ಲಿ ಸ್ಥೂಲಮಾನದಿಂದ ಎರಡು ವೈಲಕ್ಷಣ್ಯಗಳು ಒಡೆದು ಕಾಣುತ್ತವೆ. ಒಂದು ತುಂಗಭದ್ರೆಯ ಉತ್ತರದ ಉತ್ತರ ಕರ್ನಾಟಕ. ಇನ್ನೊಂದು ತುಂಗಭದ್ರೆಯ ದಕ್ಷಿಣದ ದಕ್ಷಿಣ ಕರ್ನಾಟಕ. ಈ ಎರಡು ಭಾಗಗಳ ಸಂಸ್ಕೃತಿಯಲ್ಲಿ ಧಾರಾಳವಾದ ವ್ಯತ್ಯಾಸಗಳು ಮೈದೋರುವುವು. ತುಂಗಭದ್ರೆಯ ಉತ್ತರಕ್ಕೆ ಹೋದಹೋದಂತೆ ಕನ್ನಡದ ಭಗ್ನತೆಯನ್ನು, ಕನ್ನಡದ ವಿಕಾರವನ್ನು, ಕನ್ನಡದ ವಿರೂಪವನ್ನು ಕಾಣುವಂತೆ ದಕ್ಷಿಣಕ್ಕೆ ಹೋಗುವಾಗ ಕನ್ನಡದ ಭದ್ರತೆಯನ್ನು, ಕನ್ನಡದ ಸಾಕಾರವನ್ನು, ಕನ್ನಡದ ಸುರೂಪವನ್ನು ನಿರುಕಿಸಬಹುದಾಗಿದೆ. ಮೈಸೂರಿನ ಒಕ್ಕಲಿಗನು ಆಡುವ ಕನ್ನಡ ಅಶುದ್ಧವಾಗಿರಬಹುದು, ಅಸಂಸ್ಕೃತವಾಗಿರಬಹುದು. ಆದರೂ ಅದರಲ್ಲಿ ಒಂದು ವಿಧದ ಸೊಬಗು ಇದೆ, ಶುದ್ಧತೆ ಇದೆ, ವೈವಿಧ್ಯವಿದೆ, ಶಬ್ದ ಸಂಪತ್ತಿದೆ, ಸೂಕ್ಷ್ಮತೆ ಇದೆ. ಇದಕ್ಕೆ ಪ್ರತಿಯಾಗಿ ಉತ್ತರ ಕರ್ನಾಟಕದ ಆಚೆಯ ತುದಿಗೆ ಹೋಗಿ ಸುಶಿಕ್ಷಿತರು ಕೂಡ ಆಡುವ ಮಾತುಗಳನ್ನು ಪರೀಕ್ಷಿಸಿರಿ; ಕನ್ನಡದ ಆ ಇಂಪು ಸೊಂಪು, ನಯ ಸೂಕ್ಷ್ಮಗಳ ಮಾತಂತಿರಲಿ. ಕನ್ನಡದ ಕುರೂಪವೂ ಕಟುತ್ವವೂ ದಾರಿದ್ರ್ಯವೂ ನಿಮ್ಮನ್ನು ಕಠೋರವಾಗಿ ಇದಿರಿಸಿ ಅಟ್ಟಿಕೊಂಡು ಬರುವುದು!

ಈ ವ್ಯತ್ಯಾಸವೇಕೆ? ಇಷ್ಟು ವೈಚಿತ್ರ್ಯವೇಕೆ? ಆ ನಾಡಾವುದು? ಈ ನಾಡಾವುದು? ಅದೇನು ಕನ್ನಡ ಮಲತಾಯಿಯ ಬಸುರಲ್ಲಿ ಬಿದ್ದು ಬಂದ ಭಾಗವೆ? ಕನ್ನಡದ ಬಂಜೆನೆಲವೆ? ಪುಲಕೇಶಿಯ ನಾಡಾವುದು? ನೃಪತುಂಗನು ಕನ್ನಡದ ಗುಡಿಯನ್ನು ಮೆರಸಿದುದು ಎಲ್ಲಿ? ರನ್ನ ಬಾಳಿದುದೆಲ್ಲಿ? ಪಂಪ–ನಾಗವರ್ಮರು ಬೆಳೆದುದು ಎಲ್ಲಿ? ವೀರನಾರಾಯಣನ ಕಿಂಕರ ಗುಡಗುಡಿಸಿದುದೆಲ್ಲಿ? ಕಾಲನ ಒಡಲಲ್ಲಿ ಇಣಿಕಿ ನೋಡಿ. ಶಾಸನಗಳೋ? ಉತ್ತರ ಕರ್ನಾಟಕದ ಶಿಲಾಶಾಸನಗಳೊ! ನಿಜಾಮ ಕರ್ನಾಟಕದ ಶಿಲಾಶಾಸನಗಳೋ! ಒಂದೊಂದೂ ಕಾವ್ಯ! ರಮ್ಯವಾದ ಕಾವ್ಯ! ಸರಸವಾದ ಕಾವ್ಯ! ಮಹಾಕವಿಗಳ ಕೃತಿಗಳೆನಿಸಿ ಕೀರ್ತಿತರುವಂತಹ ಕಾವ್ಯ! ಅಂತಹ ನಾಡು ಹೀಗೇಕೆ? ಈ ಬನ್ನವೇಕೆ? ಈ ಬವಣೆ ಏಕೆ?

ಕಳೆದ ವಿಜಯನಗರ ಸಾಮ್ರಾಜ್ಯೋತ್ಸವ ಸಮಯದಲ್ಲಿ ಭಾಷಣ ಮಾಡಲು ಬಂಗಾಳಿಗಳು, ಆಂಧ್ರರು ಮತ್ತು ಕೇರಳೀಯರು ಇವರುಗಳಲ್ಲಿ ಒಬ್ಬೊಬ್ಬ ಪ್ರತಿನಿಧಿ ಬೇಕಾಗಿದ್ದನು. ಆಗ ಅದೇ ಸಮಯದಲ್ಲಿ ಹಂಪಿಯಲ್ಲಿ ಸೇರಿದ ನಿಖಿಲ ಭಾರತೀಯ ಆನುವಂಶಿಕ ವೈದ್ಯರ ಸಮ್ಮೇಲನವು ಸೇರಿತ್ತು. ಅದಕ್ಕಾಗಿ ಬಂದಿದ್ದ ಪ್ರತಿನಿಧಿಗಳಲ್ಲಿ ಅವರಿಗೆ ಬೇಕಾಗಿದ್ದ ಭಾಷಣಕಾರರನ್ನು ಆ ಪ್ರಾಂತಗಳವರಿಂದ ಆರಿಸಿ ತೋರಿದೆನು. ಸಭಾಕಾರ್ಯವೆಲ್ಲ ಮುಗಿದ ಬಳಿಕ, ಮುದವೀಡರು ಬಂದು ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡು ಆನಂದಾಶ್ರುಗಳನ್ನು ಸುರಿಸಿದರು. ನಾನು, "ಏಕೆ? ಏನಾಯಿತು?" ಎಂದು ಕೇಳಲು, "ಇಂದು ಎಲ್ಲರ ಸಹಕಾರದಿಂದ ಕರ್ನಾಟಕ ಸಾಮ್ರಾಜ್ಯ ವೈಭವದ ಗುಣಗಾನವನ್ನು ಸಮಗ್ರ ಭಾರತದ ಎಲ್ಲ ಪ್ರಾಂತಗಳವರೂ ಹಾಡುವಂತಾಯಿತು! ಇದನ್ನು ಈ ಜನ್ಮದಲ್ಲಿಯೆ ನಾನು ನೋಡುವಂತಾದುದು ನನ್ನ ಸೌಭಾಗ್ಯ! ಇನ್ನು ಕರ್ನಾಟಕ ಎಂದು ಒಂದು ಸ್ವತಂತ್ರ ಪ್ರಾಂತವೆನಿಸಿಕೊಂಡು, ಎಂದು ನಾಡಿನವರೆಲ್ಲರೂ ಮೈಸೂರಿನವರು, ಮಂಗಳೂರಿನವರು, ಧಾರವಾಡದವರು ಎಂಬ ಭೇದವನ್ನು ಮರೆತು ನಾವು ಕನ್ನಡಿಗರು ಎಂದು ಎದೆ ತಟ್ಟಿ ಹೇಳಿಕೊಳ್ಳುವಂತಾಗುವುದೋ? ಅದನ್ನಷ್ಟು ನೋಡಿಬಿಟ್ಟರೆ, ನನ್ನ ಪ್ರಾಣ ಅಂದೇ ಈ ದೇಹದಿಂದ ಹಾರಿ ಹೋದರೂ ಚಿಂತೆಯಿಲ್ಲ" ಎಂದರು. ಮುದವೀಡರ ಹೃದಯ ಸಮಯಾಂತರದಲ್ಲಿ ಹೀಗೆ ಹೆಣ್ಣುಕರುಳಾಗಿ ಬಿಡುವುದು. ಅವರಿಂದ ಶಾಶ್ವತ ಸಾಹಿತ್ಯಸೇವೆ ಆಗಿರದಿದ್ದರೂ, ಕನ್ನಡ ನಾಡುನುಡಿಗಳಿಗಾಗಿ ಈ ಇಳಿವಯಸ್ಸಿನಲ್ಲಿಯೂ ಅವರು ಸಲ್ಲಿಸಿರುವ ಸೇವೆ ಇನ್ನು ಮುಂದಿನ ಸಾಹಿತಿಗಳ ಸೇವೆಗೆ ಅಡಿಗಲ್ಲಾಗಿರುವುದೆಂದರೆ ಅತ್ಯುಕ್ತಿಯಾಗದು. ಅವರು ಬಿತ್ತಿದ ಕರ್ನಾಟಕದ ಏಕೀಕರಣ, ಕನ್ನಡ ಪ್ರಾಂತರಚನೆ, ಕರ್ನಾಟಕ ವಿಶ್ವವಿದ್ಯಾನಿಲಯದ, ಕನ್ನಡ ನುಡಿಯ ಏಳಿಗೆಯ ವಿಚಾರಗಳು ಫಲಿಸಿ, ಅವರಿಗೆ ಆನಂದವೂ ಮನಶ್ಶಾಂತಿಯೂ ದೊರೆಯುವಂತಾಗಲಿ!

---

## ಕನ್ನಡ ಜೀವ!

ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ. ಎ., ಧಾರವಾಡ.

ಕಬ್ಬಿಗನೆನಿಸಿಕೊಳ್ಳಲು ಹಾತೊರೆಯುತ್ತಿದ್ದ ನನ್ನ ಕಾಡುಗೆಳೆಯನೊಬ್ಬನು ಕನ್ನಾಡ ಏಕೀಕರಣವನ್ನು ಕುರಿತು ಒಂದು ಕವನವನ್ನು ಕಟ್ಟಿರುವನು. ಅದರ ಪಲ್ಲವಿ:

ಆ ನಾಡು ಈ ನಾಡು,
ಸಾಕು ಸಾಕೀ ಪಾಡು.
ಹಾಡು ಒಂದೇ ಹಾಡು,
ಕನ್ನಾಡು ಕನ್ನಾಡು
ಎಲ್ಲ ಒಂದೇ ಗೂಡು!

ವಧ್ಯವಾದ ಈ ಪದ್ಯದ ಭಾವವನ್ನೇ ಹೃದ್ಯವಾದ ಗದ್ಯದಲ್ಲಿ ಕರ್ನಾಟಕದ ಬೇರೆ ಬೇರೆ ಭಾಗದ ನನ್ನ ಗೆಳೆಯರು ಆಗಾಗ ಹಾಡುವುದನ್ನು ನಾನು ಕೇಳುತ್ತಲಿದ್ದೇನೆ. "ಬರಿಯ ಏಕೀಕರಣ ಏಕೀಕರಣವೆಂದು ಹೋರಾಡಿದರೆ ಪ್ರಯೋಜನವೇನು ಸ್ವಾಮಿ! ನಾನು ಧಾರವಾಡದವನು, ನಾನು ಮಂಗಳೂರಿನವನು, ನಾನು ಆ ಕಡೆಯವನು, ನಾನು ಈ ಕಡೆಯವನು ಎಂಬ ತಿಳಿವಳಿಕೆ ಕನ್ನಡಿಗರಲ್ಲಿ ಅಡಗಿ ಹೋಗಬೇಕು ನೋಡಿ. ನಾನು ಕನ್ನಡಿಗನು, ಕನ್ನಡಿಗನು, ಮತ್ತೆ ಕನ್ನಡಿಗನು ಎಂಬ ಒಂದೇ ಒಂದು ಅಭಿಮಾನ ಚಿಮ್ಮಿ ಏಳಬೇಕು. ಇದುವೆ ಕರ್ನಾಟಕದ ನೈಜ ಏಕೀಕರಣ!"

ಮುತ್ತಿನಂತಹ ಮಾತು, ರತ್ನದಂತಹ ರಹಸ್ಯ. ಆದರೆ ಇದನ್ನು ಸಾಧಿಸುವ ಬಗೆ ಯಾವುದು? ಭಾವನೆಯಿಂದಲೆ ಭವ್ಯತೆಯನ್ನು ಪಡೆಯುತ್ತಿದ್ದರೆ ಭೂಲೋಕವೆ ವೈಕುಂಠವಾಗುತ್ತಿತ್ತು. ಕನಸಿನಿಂದಲೆ ಕೈಲಾಸ ಕೈವಶವಾಗುತ್ತಿದ್ದರೆ, ಕರ್ಮಭೂಮಿಯ ಅಗತ್ಯವೇಕಿತ್ತು? ಮಾನಸ ಸೃಷ್ಟಿಯಲ್ಲಿ ಮುಗಿಲಿಗೆ ಹಾರುವ ಭಾವನೆ ಕಾರ್ಯರಂಗಕ್ಕಿಳಿಯುವಾಗ ಅಡಿಗಡಿಗೆ ಎಡರು ತೊಡರುಗಳಲ್ಲಿ ಮುಗ್ಗರಿಸಿ ಬೀಳುವುದು. ಸತ್ಯ ಪ್ರಪಂಚದ ಈ ಮುಳ್ಳುಮರಗಳನ್ನೂ ಕಾಡು ಬೆಟ್ಟಗಳನ್ನೂ ಒಂದೇಟಿಗೆ ಕಿತ್ತು ಹಾಕುವುದು ಎಂತಹ ಬಲವಾದ ಭಾವನೆಗೂ ಮೀರಿದ ಕೆಲಸ.

ಬೀದರ ಭಾಗದ ಒಬ್ಬ ಒಕ್ಕಲಿಗನನ್ನು ಫಕ್ಕನೆ ಮೈಸೂರ ಒಂದು ಹಳ್ಳಿಯಲ್ಲಿ ತಂದು ನಿಲ್ಲಿಸಿರಿ. ಆತನ ಪಾಲಿಗೆ ಅದೊಂದು ವಿದೇಶವಾಗಿಯೆ ಕಾಣುವುದು. ಆತನ ನಡವಳಿ ಬೇರೆ, ತಿಂಡಿ ಬೇರೆ, ಭಾಷೆ ಬೇರೆ, ದನಿ ಬೇರೆ, ಉಚ್ಚಾರ ಬೇರೆ; ಹೆಚ್ಚೇನು, ಒಂದು ವಸ್ತುವಿಗೆ ಆತನೂ ಇಲ್ಲಿಯವರೂ ಹೇಳುವ ಶಬ್ದಗಳೂ ಬೇರೆ! ಬಿಳಿಬಟ್ಟೆಯ ಸುಶಿಕ್ಷಿತರನ್ನು ಕುರಿತು ನಾನು ಮಾತನಾಡುತ್ತಾ ಇಲ್ಲ. ಇದೇ ಸಮಸ್ಯೆಯನ್ನು ಮೊನ್ನೆಯ ನನ್ನ ಮೈಸೂರ ಸಂಚಾರದಲ್ಲಿ ಕೆಲವರು ನನ್ನನ್ನು ಕೇಳಿಯೆ ಬಿಟ್ಟರು. "ನಿಮ್ಮ ನುಡಿಗೂ ನಮ್ಮ ನುಡಿಗೂ ಏನೂ ಅಂತರವಿಲ್ಲ ನೋಡಿ. ಆದರೆ ನಿಮ್ಮ ಕಡೆಯ ಬೇರೆ ಜನರು ಈ ಕಡೆ ಬರುತ್ತಾರೆ. ಅವರು ಆಡುವುದು ನಮಗೆ ಅರ್ಥವೇ ಆಗುವುದಿಲ್ಲ. ಒಂದೇ ಕನ್ನಡ ಮಾತನಾಡುವವರಲ್ಲಿ ಇಷ್ಟು ವ್ಯತ್ಯಾಸಕ್ಕೆ ಕಾರಣವೇನು?" ಎಂದು.

ಇಂತಹ ವೈಲಕ್ಷಣ್ಯಗಳು ಎಲ್ಲ ದೇಶಗಳಲ್ಲಿಯೂ ಉಂಟು. ಇದೇನು ಕನ್ನಡದ ಹೊಸತಲ್ಲ ಎಂದು ಉತ್ತರಿಸಬಹುದು. ಆದರೆ ಈ ಉತ್ತರ ಪೂರ್ಣ ಉತ್ತರವಾಗಲಾರದು. ಕನ್ನಡದ ಈ ವ್ಯತ್ಯಾಸಗಳಿಗೂ ಉಳಿದ ಭಾಷೆ, ಜನಾಂಗಗಳ ವ್ಯತ್ಯಾಸಗಳಿಗೂ ವ್ಯತ್ಯಾಸವಿದೆ. ದಿಲ್ಲಿ-ಲಖನೊಗಳ ಉರ್ದು ಭಾಷೆಯಲ್ಲಿ ವ್ಯತ್ಯಾಸವಿರಬಹುದು. ಪುಣೆ—ನಾಗಪುರಗಳ ಮರಾಠಿಯಲ್ಲಿ ಅಂತರವಿದೆ. ಆದರೆ ಹೈದರಾಬಾದು-ಮೈಸೂರು ಕನ್ನಡಗಳಲ್ಲಿಯ ಅಂತರ ಈ ಅಂತರಗಳನ್ನು ಮೀರಿಸುವಂತಹದಾಗಿದೆ. ಇದರ ಚರಿತ್ರೆಯೇನು? ಅಂತರಂಗವೇನು?

ಇಂದಿನ ಕರ್ನಾಟಕದಲ್ಲಿ ಸ್ಥೂಲಮಾನದಿಂದ ಎರಡು ವೈಲಕ್ಷಣ್ಯಗಳು ಒಡೆದು ಕಾಣುತ್ತವೆ. ಒಂದು ತುಂಗಭದ್ರೆಯ ಉತ್ತರದ ಉತ್ತರ ಕರ್ನಾಟಕ. ಇನ್ನೊಂದು ತುಂಗಭದ್ರೆಯ ದಕ್ಷಿಣದ ದಕ್ಷಿಣ ಕರ್ನಾಟಕ. ಈ ಎರಡು ಭಾಗಗಳ ಸಂಸ್ಕೃತಿಯಲ್ಲಿ ಧಾರಾಳವಾದ ವ್ಯತ್ಯಾಸಗಳು ಮೈದೋರುವುವು. ತುಂಗಭದ್ರೆಯ ಉತ್ತರಕ್ಕೆ ಹೋದಹೋದಂತೆ ಕನ್ನಡದ ಭಗ್ನತೆಯನ್ನು, ಕನ್ನಡದ ವಿಕಾರವನ್ನು, ಕನ್ನಡದ ವಿರೂಪವನ್ನು ಕಾಣುವಂತೆ ದಕ್ಷಿಣಕ್ಕೆ ಹೋಗುವಾಗ ಕನ್ನಡದ ಭದ್ರತೆಯನ್ನು, ಕನ್ನಡದ ಸಾಕಾರವನ್ನು, ಕನ್ನಡದ ಸುರೂಪವನ್ನು ನಿರುಕಿಸಬಹುದಾಗಿದೆ. ಮೈಸೂರಿನ ಒಕ್ಕಲಿಗನು ಆಡುವ ಕನ್ನಡ ಅಶುದ್ಧವಾಗಿರಬಹುದು, ಅಸಂಸ್ಕೃತವಾಗಿರಬಹುದು. ಆದರೂ ಅದರಲ್ಲಿ ಒಂದು ವಿಧದ ಸೊಬಗು ಇದೆ, ಶುದ್ಧತೆ ಇದೆ, ವೈವಿಧ್ಯವಿದೆ, ಶಬ್ದ ಸಂಪತ್ತಿ ಇದೆ, ಸೂಕ್ಷ್ಮತೆ ಇದೆ. ಇದಕ್ಕೆ ಪ್ರತಿಯಾಗಿ ಉತ್ತರ ಕರ್ನಾಟಕದ ಆಚೆಯ ತುದಿಗೆ ಹೋಗಿ ಸುಶಿಕ್ಷಿತರು ಕೂಡ ಆಡುವ ಮಾತುಗಳನ್ನು ಪರೀಕ್ಷಿಸಿರಿ; ಕನ್ನಡದ ಆ ಇಂಪು ಸೊಂಪು, ನಯ ಸೂಕ್ಷ್ಮಗಳ ಮಾತಂತಿರಲಿ. ಕನ್ನಡದ ಕುರೂಪವೂ ಕಟುತ್ವವೂ ದಾರಿದ್ರ್ಯವೂ ನಿಮ್ಮನ್ನು ಕಠೋರವಾಗಿ ಇದಿರಿಸಿ ಅಟ್ಟಿಕೊಂಡು ಬರುವುದು!

ಈ ವ್ಯತ್ಯಾಸವೇಕೆ? ಇಷ್ಟು ವೈಚಿತ್ರ್ಯವೇಕೆ? ಆ ನಾಡಾವುದು? ಈ ನಾಡಾವುದು? ಅದೇನು ಕನ್ನಡ ಮಲತಾಯಿಯ ಬಸುರಲ್ಲಿ ಬಿದ್ದು ಬಂದ ಭಾಗವೆ? ಕನ್ನಡದ ಬಂಜೆನೆಲವೆ? ಪುಲಕೇಶಿಯ ನಾಡಾವುದು? ನೃಪತುಂಗನು ಕನ್ನಡದ ಗುಡಿಯನ್ನು ಮೆರಸಿದುದು ಎಲ್ಲಿ? ರನ್ನ ಬಾಳಿದುದೆಲ್ಲಿ? ಪಂಪ—ನಾಗವರ್ಮರು ಬೆಳೆದುದು ಎಲ್ಲಿ? ವೀರನಾರಾಯಣನ ಕಿಂಕರ ಗುಡಗುಡಿಸಿದುದೆಲ್ಲಿ? ಕಾಲನ ಒಡಲಲ್ಲಿ ಇಣಿಕಿ ನೋಡಿ. ಶಾಸನಗಳೋ? ಉತ್ತರ ಕರ್ನಾಟಕದ ಶಿಲಾಶಾಸನಗಳೊ! ನಿಜಾಮ ಕರ್ನಾಟಕದ ಶಿಲಾಶಾಸನಗಳೋ! ಒಂದೊಂದೂ ಕಾವ್ಯ! ರಮ್ಯವಾದ ಕಾವ್ಯ! ಸರಸವಾದ ಕಾವ್ಯ! ಮಹಾಕವಿಗಳ ಕೃತಿಗಳೆನಿಸಿ ಕೀರ್ತಿತರುವಂತಹ ಕಾವ್ಯ! ಅಂತಹ ನಾಡು ಹೀಗೇಕೆ? ಈ ಬನ್ನವೇಕೆ? ಈ ಬವಣೆ ಏಕೆ?

ದಕ್ಷಿಣೋತ್ತರ ಕರ್ನಾಟಕಗಳ ಈ ಸಾಂಸ್ಕೃತಿಕ ವ್ಯತ್ಯಾಸಗಳನ್ನು, ಘೋರವಾದ ವ್ಯತ್ಯಾಸಗಳನ್ನು ಸಮರ್ಪಕವಾಗಿ ಸ್ಪಷ್ಟೀಕರಿಸಲು ಚರಿತ್ರೆಯಲ್ಲದೆ ಬೇರಾವ ಸಾಧನವೂ ಸಹಾಯಕಾರಿಯಾಗಲಾರದು. ಹನ್ನೊಂದು ನೂರು ವರ್ಷಗಳ ಹಿಂದೆ ಕಾವೇರಿಯಿಂದ ಗೋದಾವರಿಯ ವರೆಗೆ ಅಖಂಡವಾಗಿ ಚಾಚಿದ ಕನ್ನಡನಾಡು, ಆರೇಳು ಶತಮಾನಗಳ ಆಚೆಯವರೆಗೆ ಒಂದು ಜೀವ, ಒಂದು ಉಸಿರು, ಒಂದು ಮಿಡಿತ ಎಂಬುದಾಗಿ ಅಭಿನ್ನವಾದ ಕನ್ನಡ ಭಿನ್ನವಾದುದೆಂತು? ಭಿನ್ನಭಿನ್ನ ವಾದುದು ಹೇಗೆ?

ವಿಜಯನಗರ ಸಾಮ್ರಾಜ್ಯ ಕರ್ನಾಟಕ ಚರಿತ್ರೆಯ ಒಂದು ಹೆಗ್ಗುರುತು. ಕರ್ನಾಟಕ ಸಂಸ್ಕೃತಿಯ ಪರಮಾವಧಿ. ಕನ್ನಡ ವೈಭವದ ವಿಜೃಂಭಣೆ. ಆದರೆ ಇದೆಲ್ಲವೂ ಯಾರಿಗೆ? ದಕ್ಷಿಣ ಕರ್ನಾಟಕಸ್ಥರಿಗೆ. ತುಂಗಭದ್ರೆಯ ಈಚೆಯ ಕನ್ನಡಿಗರಿಗೆ. ಆಚೆಯ ವರಿಗೆ? ತೆಂಕಣ ಕನ್ನಡಿಗರು ಈ ಹಬ್ಬವನ್ನು ಅಬ್ಬರಿಸುತ್ತಿರುವಾಗ ಬಡಗಣವರು ಪಾರತಂತ್ರ್ಯದ ದೇಶದಲ್ಲಿ ಸ್ವಸಂಸ್ಕೃತಿಗೆ ಎರವಾಗುತ್ತ ದಾಸ್ಯದಲ್ಲಿ ಕುದಿಯುತ್ತಿದ್ದರು! ಕನ್ನಡ ಜೀವ ಒಂದಿದ್ದುದು ಎರಡಾಯಿತು. ಎರಡು ನಾಲ್ಕಾಯಿತು. ಕನ್ನಡದ ಎರಡು ಕಣ್ಣುಗಳು ಒಂದರಲ್ಲಿ ಆನಂದಕಣ. ಇನ್ನೊಂದರಲ್ಲಿ ಕಂಬನಿ!

ಮುಂದೆ ಮೂರು ನೂರು ವರ್ಷಗಳು ಕಳೆದವು. ಮೇಲು ಮನೆಯ ನಂದಾದೀಪ ಮೊದಲೇ ನಂದಿತ್ತು. ಕೆಳ ಮನೆಯದು ಅದನ್ನೇ ಹಿಂಬಾಲಿಸಿತು. ಇದ್ದಬದ್ದ ಚೈತನ್ಯವೂ ಕುಂದಿತು. ಅತ್ತ ಇತ್ತ ಎತ್ತಲೂ ಕತ್ತಲೆ. ನಿರ್ಗತಿಕತೆ, ದಿಗ್‌ಭ್ರಾಂತಿ. ಕನ್ನಡಜೀವ ಬದುಕಿದೆಯೊ? ಉಸಿರಾಡುತ್ತಿದೆಯೊ?

ಇನ್ನೊಂದು ಮೂರು ನೂರು ವರುಷಗಳು ಉರುಳಿದುವು. ಹೊಸಗಾಳಿ ಬೀಸಿತು. ಮತ್ತೆ ಚೈತನ್ಯ ಸುಳಿಯಿತು. ಭಾಷೆ, ಸಾಹಿತ್ಯ, ಸಂಸ್ಕೃತಿ, ಸಾಮ್ರಾಜ್ಯ, ತನ್ನತನದ ಅರಿವು ಮರಳಿತು; ವಿಕಲಾಂಗ ವಾದ ನಿಶ್ಚೇತನವಾದ ಉತ್ತರ ಹೆಚ್ಚು ಬಲಹೀನವಾದುದರಿಂದ ದಕ್ಷಿಣ ದಲ್ಲಿ ಈ ನವಚೈತನ್ಯಕ್ಕೆ ನೂತನ ಸ್ಫೂರ್ತಿಗೆ ಹೆಚ್ಚು ಅವಕಾಶವಿದ್ದಂತೆ ಭಾಸವಾಯಿತು. ಭಾಷೆ, ಸಂಸ್ಕೃತಿ, ಪರಂಪರೆ, ರಾಜ್ಯಾಧಿಕಾರಿಗಳ ಭದ್ರಾಧಾರವುಳ್ಳ ದಕ್ಷಿಣಕ್ಕೆ ಅಭಿಮುಖವಾಗಿ ಎಲ್ಲರ ದೃಷ್ಟಿಗಳು ಕೆಲ ಕಾಲ ಹೊರಳಿ ನಿಂತುವು. ಕನ್ನಡ ಜೀವವೆಲ್ಲಿ? ಆಶೋತ್ತರವೆಲ್ಲಿ? ಉದ್ಧಾರವೆಲ್ಲಿ?

ಅಖಿಲ ಕರ್ನಾಟಕದಲ್ಲಿ ಕನ್ನಡ ಚಳವಳಿಯನ್ನು ಮಾಡಬೇಕಾಗಿದೆ! ಅದಕ್ಕೋಸುಗ ಅಖಂಡವಾಗಿ ಹೋರಾಡಬೇಕಾಗಿದೆ. ಉತ್ತರವಾಗಲಿ ದಕ್ಷಿಣವಾಗಲಿ ಇಂದಿನ ಕನ್ನಡ ಚಳವಳಿ ಊರಿ ನಿಂತುದು ಅಲ್ಲಲ್ಲಿಯ ಕೆಲವು ಧ್ಯೇಯವಾದಿಗಳ, ಸಾಹಸಿಗರ, ದಿಟ್ಟರ ಭುಜಗಳ ಮೇಲೆ. ಪ್ರಪಂಚ ಪಂಡಿತರ, ವ್ಯವಹಾರ ಚತುರರ ಧುರಂಧರ ಜೀವನ ಗತಿಯಲ್ಲಿ ಕನ್ನಡಕ್ಕೆ ಇನ್ನೂ ತನ್ನದಾದ ಸ್ಥಾನ ದೊರೆತಿರುವುದಿಲ್ಲ. ಇಂದಿನ ಜನಜಂಗುಳಿಯ ಸಂತೆಯಲ್ಲಿ ನಮ್ಮ ನೆಲದಲ್ಲಿ ಹುಟ್ಟಿ ಬೆಳೆದು ನಮ್ಮ ಜೀವನಾಧಾರವಾದ ವಸ್ತುವಾಗಿರದೆ ಎಲ್ಲಿಂದಲೊ ಕಡ ತಂದು ಮಾರಾಟಕ್ಕೆ ಇಟ್ಟ ಒಡವೆಯಾಗಿದೆ ಈ ಕನ್ನಡ! ಅಂತೆಯೆ ಅದು ಎಲ್ಲರ ಮನಸ್ಸನ್ನು ತತ್ಕಾಲ ಎಳೆದುಕೊಳ್ಳುತ್ತಿಲ್ಲ. ಅದಕ್ಕೋಸುಗ ಪ್ರಚಾರಕಾರ್ಯ ಆವಶ್ಯಕವಾಗಿದೆ. ಕನ್ನಡನಾಡಿನವರಾಗಿ ಕನ್ನಡಿಗರೆನಿಸಿಕೊಳ್ಳುವವರ ಉಸಿರು ಕನ್ನಡವಾಗಿಲ್ಲ! ಕರ್ನಾಟಕರ ಎದೆಗಳನ್ನು ಮೀಟುತ್ತಿರುವುದು ಕನ್ನಡ ಜೀವವಲ್ಲ!

ಕನ್ನಡ ಜೀವವಿಲ್ಲದೆ ಏಸು ಸಂಘಗಳನ್ನು ನಿರ್ಮಿಸಿದರೇನು, ಏಸು ಸಂಸ್ಥೆಗಳನ್ನು ಕಟ್ಟಿದರೇನು? ಇದೆಲ್ಲವೂ ಬಹಿರಂಗ ಶೃಂಗಾರ ವಾಯಿತಲ್ಲದೆ ಅಂತರಂಗ ಸಂಸ್ಕಾರವಲ್ಲ. ಕನ್ನಡಿಗರ ಹೃದಯ ಪರಿವರ್ತನೆಯಾಗಬೇಕು. ಕನ್ನಡ ಅವರ ಜೀವನದ ಮುಡಿಪು ಮೀಸಲಾಗಬೇಕು. ಅದೀಗ ಆಗಿದೆಯೆ?

ಮೈಸೂರಲ್ಲಿ, ಕನ್ನಡದ ಅರಸುತನವನ್ನು ಉಪಭೋಗಿಸುವ ಮೈಸೂರಲ್ಲಿಯೂ ಮಿಕ್ಕೆಡೆಯಂತೆ ಕನ್ನಡ ಚಳವಳಿ ನಡೆಯಬೇಕಾಗಿದೆ! ಅಲ್ಲಿಯ ಕನ್ನಡ ಚಳವಳಿ ಕೆಲವು ಧ್ಯೇಯವಾದಿಗಳಲ್ಲದೆ ಜನಸಾಮಾನ್ಯರ ಅಂತರಾಳಕ್ಕೆ ಇನ್ನೂ ಇಳಿದಿಲ್ಲ! ಮೈಸೂರ ಜನರೆಲ್ಲರೂ ಕನ್ನಡವನ್ನು ಮಾತನಾಡುತ್ತಿರಬಹುದು, ಬೇರೆಯವರಿಗಿಂತ ನಯವಾದ ಸಂಸ್ಕೃತವಾದ ಮಾತನಾಡುತ್ತಿರಬಹುದು. ಆದರೆ ನಾಲಗೆಯನ್ನು ಕುಣಿಸುತ್ತಿರುವಂತೆ ಕನ್ನಡ ಅವರೆಲ್ಲರ ಒಳಬಗೆಯನ್ನು ಕುಣಿಸುತ್ತಿದೆಯೆ? ಮೈಸೂರಲ್ಲಿ ವಿಶ್ವವಿದ್ಯಾನಿಲಯವಿದ್ದರೂ ಅಲ್ಲಿ ಕನ್ನಡಕ್ಕೆ ಸ್ಥಾನವೆಷ್ಟು? ಪ್ರಮಾಣವೆಷ್ಟು?

ಭೀಮೆಯಿಂದ ಕಾವೇರಿಯವರೆಗೆ, ಹೈದರಾಬಾದಿನಿಂದ ಮೈಸೂರ ವರೆಗೆ ಅಸ್ತವ್ಯಸ್ತವಾಗಿ ಹಬ್ಬಿದ ಕನ್ನಡ ವಿಶಾಲವಾದ ಒಂದು ಪಾಳು ದೇಗುಲ; ಕೆಲಭಾಗ ಉಧ್ವಸ್ತವಾಗಿದೆ, ಕೆಲಭಾಗ ಮುಕ್ಕಾಗಿದೆ, ಕೆಲಭಾಗ ಭದ್ರವಾಗಿದೆ. ಅತ್ತಿತ್ತಲು ಗುಂಪು ಗುಂಪಾಗಿ ಉತ್ಸಾಹಿಗಳು ಕೂಡುತ್ತಿರುವರು. ಅಲ್ಲಿ ಕಟ್ಟಬೇಕು, ಇಲ್ಲಿ ಜೀರ್ಣೋದ್ಧಾರ ಮಾಡಬೇಕು ಎಂದು ಹವಣಿಸುತ್ತಿರುವರು. ಕೆಲವೆಡೆ ಜಾತ್ರೆಗಳೂ ನೆರೆಯುತ್ತಿರುವುವು. ಉತ್ಸವ ಮೂರ್ತಿಯ ಮೆರವಣಿಗೆಯೂ ನಡೆದಿದೆ. ಆದರೆ ಗರ್ಭಗೃಹ ಇನ್ನೂ ಬರಿದೇ ಬರಿದು. ಅಲ್ಲಿಂದ ಸ್ಥಾನಚ್ಯುತಳಾದ ದೇವಿಯನ್ನು ಕೆಲವರು ಹುಡುಕುತ್ತಲಿದ್ದಾರೆ. ಇನ್ನೂ ಆ ವಿಗ್ರಹದ ಸುಳಿವೆ ಸಿಕ್ಕಲೊಲ್ಲದು. ಮೂರ್ತಿಯಿಲ್ಲದೆ ಮಂದಿರದ ಪ್ರಾಣವೆಲ್ಲಿ?

ಕನ್ನಡದ ದೇವಿಯ ಪ್ರಾಣಪ್ರತಿಷ್ಠೆಯಾಗದೆ ಕರ್ನಾಟಕದಲ್ಲಿ ಕನ್ನಡ ಜೀವ ಬಾಳಿ ಬೆಳಗದು. ದಿವ್ಯವಾದ, ಭವ್ಯವಾದ, ತೇಜೋಮಯವಾದ ಕನ್ನಡ ಸಂಸ್ಕೃತಿ ಜ್ಯೋತಿ ಈ ದೇವಿ. ಪಾಳು ದೇಗುಲ ವಾಗಬಲ್ಲ ಕಲ್ಲುಮಣ್ಣಿನ ಗುಡಿಗಳಲ್ಲಿ ನೆಲಸಲೊಲ್ಲಳು ಇವಳು, ಅಪಾರ ಭಕ್ತಿ ಪ್ರವಣದಿಂದ ಬಹಿರ್ಮುಖವಾಗಿ ಕಠೋರ ಕಾರ್ಯ ನಿಷ್ಠೆಯಿಂದ ಅಂತರ ಭೇದ್ಯವಾದ ಕನ್ನಡ ಕರ್ಮಯೋಗಿಗಳ ವಜ್ರಶಾಲೆಗಳಿಂದ ರಚಿಸಲಾದ ಅಮರ ಮಂದಿರವೆ ಇವಳ ಅಚಲ ವಾಸಸ್ಥಳ. ಇಂತಹ ನಿವಾಸ ತನಗಾಗಿ ನಿರ್ಮಾಣವಾಗುವುದೆ, ಇಂತಹ ಕರ್ಮಯೋಗಿಗಳು ತನಗೆ ಸಿಕ್ಕುವರೆ ಎಂದು ಆ ದೇವಿ ಹಂಬಲಿಸುತ್ತಿರುವಳು, ಹಾತೊರೆಯುತ್ತಿರುವಳು.

ಕನ್ನಡಜೀವ ಇಂತಹ ಕರ್ಮಯೋಗಿಗಳ ಕೈಯಲ್ಲಿದೆ, ಕನ್ನಡದ ಏಳುಬೀಳುಗಳು ಇವರ ಬಲಾಬಲವನ್ನು ಅವಲಂಬಿಸಿವೆ. ಕನ್ನಡಕ್ಕಾಗಿ ಸರ್ವಸ್ವವನ್ನು ಧಾರೆಯೆರೆದು ದುಡಿಯಲು ಸಿದ್ಧರಾದ ಇಂತಹ ಕನ್ನಡ ಕರ್ಮಯೋಗಿಗಳ ಅಮರ ಸಂಘವೊಂದು ಉದಯಿಸಲಿದೆ, ಉದಯಿಸಬೇಕಾಗಿದೆ. ಇಂತಹ ಬಳಗವೊಂದು ಬೆಳೆಯಬೇಕಾಗಿದೆ. ಅಂದು, ಅಂದೇ ಅಂದು 'ಬದುಕಿತೆಲೆ ಕನ್ನಡ ಜೀವ' ಎಂದು ಒಕ್ಕೊರಲ ವಿಜಯರಾಗವನ್ನು ಕನ್ನಡಿಗರೆಲ್ಲರೂ ಹಾಡಬಲ್ಲರು. ಅದುವೆ ಕನ್ನಡದ ನೈಜ ಏಕೀಕರಣ. ಇಂದಿನ ಕಲ್ಪನೆಯ ಸತ್ಯಸಂಕಲ್ಪವದು, ಈಗಿನ ಭಾವಲೋಕದ ಅನುಭಾವ ಸೃಷ್ಟಿಯದು!

---

## ಕನ್ನಡ ಸುದ್ದಿ

### ಕರ್ನಾಟಕ ಶಿಕ್ಷಣ ಪರಿಷತ್ತು

ಇದೇ ಡಿಸೆಂಬರ್ ೭ ಮತ್ತು ೮ನೆಯ ತಾರೀಖುಗಳಲ್ಲಿ ಮೇಲೆ ಕಂಡ ಪರಿಷತ್ತು ಅಹಮ್ಮದಾಬಾದ್ ಕಲಾಶಾಲೆಯ ಪ್ರಿನ್ಸಿಪಾಲರವರಾದ ಡಾ| ಕೂರ್ಕೆ. ಆರ್. ವಿ. ರಾವ್. ಎಂ.ಎ., ಪಿಎಚ್.ಡಿ. ಅವರ ಅಧ್ಯಕ್ಷತೆಯಲ್ಲಿ ಸೇರುವುದಾಗಿಯೂ ಬೊಂಬಾಯಿ ಸರ್ಕಾರದ ಮುಖ್ಯಮಂತ್ರಿಗಳಾದ ಶ್ರೀ. ಬಿ. ಜಿ. ಖೇರರವರು ಪರಿಷತ್ತಿನ ಪ್ರಾರಂಭೋತ್ಸವ ನೆರವೇರಿಸುವುದಾಗಿಯೂ ತಿಳಿಯಬರುತ್ತದೆ.

### ಸೆನೆಟ್ಟಿನಲ್ಲಿ ಕನ್ನಡ ಭಾಷಣ

ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ಟಿನ ಸಭೆ ಬೆಂಗಳೂರಿನಲ್ಲಿ ನವೆಂಬರ್ ೨೬ನೆಯ ತಾರೀಖು ನಡೆಯಿತು. ಶಿವಮೊಗ್ಗದ ಶ್ರೀ. ಭೂಪಾಳಂ ಚಂದ್ರಶೇಖರಯ್ಯನವರು ಕನ್ನಡದಲ್ಲಿ ಭಾಷಣ ಮಾಡಿದರೆಂದು ತಿಳಿಯಬರುತ್ತದೆ.

### 'ಕುಮಾರವ್ಯಾಸ ಬಳಗ': ಸಂಘ ಸ್ಥಾಪನೆ

ಈ ಸಂಘ ನವೆಂಬರ್ ೨೮ರಲ್ಲಿ ಗದುಗಿನಲ್ಲಿ ಸ್ಥಾಪಿತವಾಯಿತು. 'ಕನ್ನಡ ನುಡಿ'ಯ ಸಂಪಾದಕರಾದ ಶ್ರೀ. ಅ. ನ. ಕೃಷ್ಣರಾಯರು ಪ್ರಾರಂಭ ಭಾಷಣ ಮಾಡಿದರು.

---

ದಕ್ಷಿಣೋತ್ತರ ಕರ್ನಾಟಕಗಳ ಈ ಸಾಂಸ್ಕೃತಿಕ ವ್ಯತ್ಯಾಸಗಳನ್ನು, ಘೋರವಾದ ವ್ಯತ್ಯಾಸಗಳನ್ನು ಸಮರ್ಪಕವಾಗಿ ಸ್ಪಷ್ಟೀಕರಿಸಲು ಚರಿತ್ರೆಯಲ್ಲದೆ ಬೇರಾವ ಸಾಧನವೂ ಸಹಾಯಕಾರಿಯಾಗಲಾರದು. ಹನ್ನೊಂದು ನೂರು ವರ್ಷಗಳ ಹಿಂದೆ ಕಾವೇರಿಯಿಂದ ಗೋದಾವರಿಯ ವರೆಗೆ ಅಖಂಡವಾಗಿ ಚಾಚಿದ ಕನ್ನಡನಾಡು, ಆರೇಳು ಶತಮಾನಗಳ ಆಚೆಯವರೆಗೆ ಒಂದು ಜೀವ, ಒಂದು ಉಸಿರು, ಒಂದು ಮಿಡಿತ ಎಂಬುದಾಗಿ ಅಭಿನ್ನವಾದ ಕನ್ನಡ ಭಿನ್ನವಾದುದೆಂತು? ಛಿನ್ನಭಿನ್ನ ವಾದುದು ಹೇಗೆ?

ವಿಜಯನಗರ ಸಾಮ್ರಾಜ್ಯ ಕರ್ನಾಟಕ ಚರಿತ್ರೆಯ ಒಂದು ಹೆಗ್ಗುರುತು. ಕರ್ನಾಟಕ ಸಂಸ್ಕೃತಿಯ ಪರಮಾವಧಿ. ಕನ್ನಡ ವೈಭವದ ವಿಜೃಂಭಣೆ. ಆದರೆ ಇದೆಲ್ಲವೂ ಯಾರಿಗೆ? ದಕ್ಷಿಣ ಕರ್ನಾಟಕಸ್ಥರಿಗೆ. ತುಂಗಭದ್ರೆಯ ಈಚೆಯ ಕನ್ನಡಿಗರಿಗೆ. ಆಚೆಯ ವರಿಗೆ? ತೆಂಕಣ ಕನ್ನಡಿಗರು ಈ ಹಬ್ಬವನ್ನು ಅಬ್ಬರಿಸುತ್ತಿರುವಾಗ ಬಡಗಣವರು ಪಾರತಂತ್ರ್ಯದ ದೇಶದಲ್ಲಿ ಸ್ವಸಂಸ್ಕೃತಿಗೆ ಎರವಾಗುತ್ತ ದಾಸ್ಯದಲ್ಲಿ ಕುದಿಯುತ್ತಿದ್ದರು! ಕನ್ನಡ ಜೀವ ಒಂದಿದ್ದುದು ಎರಡಾ ಯಿತು. ಎರಡು ನಾಲ್ಕಾಯಿತು. ಕನ್ನಡದ ಎರಡು ಕಣ್ಣುಗಳು ಒಂದರಲ್ಲಿ ಆನಂದಕಣ. ಇನ್ನೊಂದರಲ್ಲಿ ಕಂಬನಿ!

ಮುಂದೆ ಮೂರು ನೂರು ವರ್ಷಗಳು ಕಳೆದವು. ಮೇಲು ಮನೆಯ ನಂದಾದೀಪ ಮೊದಲೇ ನಂದಿತ್ತು. ಕೆಳ ಮನೆಯದು ಅದನ್ನೇ ಹಿಂಬಾಲಿಸಿತು. ಇದ್ದಬದ್ದ ಚೈತನ್ಯವೂ ಕುಂದಿತು. ಅತ್ತ ಇತ್ತ ಎತ್ತಲೂ ಕತ್ತಲೆ. ನಿರ್ಗತಿಕತೆ, ದಿಗ್ಭ್ರಾಂತಿ. ಕನ್ನಡಜೀವ ಬದುಕಿದೆಯೊ? ಉಸಿರಾಡುತ್ತಿದೆಯೊ?

ಇನ್ನೊಂದು ಮೂರು ನೂರು ವರುಷಗಳು ಉರುಳಿದುವು. ಹೊಸಗಾಳಿ ಬೀಸಿತು. ಮತ್ತೆ ಚೈತನ್ಯ ಸುಳಿಯಿತು. ಭಾಷೆ, ಸಾಹಿತ್ಯ, ಸಂಸ್ಕೃತಿ, ಸಾಮ್ರಾಜ್ಯ, ತನ್ನತನದ ಅರಿವು ಮರಳಿತು; ವಿಕಲಾಂಗ ವಾದ ನಿಶ್ಚೇತನವಾದ ಉತ್ತರ ಹೆಚ್ಚು ಬಲಹೀನವಾದುದರಿಂದ ದಕ್ಷಿಣ ದಲ್ಲಿ ಈ ನವಚೈತನ್ಯಕ್ಕೆ ನೂತನ ಸ್ಫೂರ್ತಿಗೆ ಹೆಚ್ಚು ಅವಕಾಶವಿದ್ದಂತೆ ಭಾಸವಾಯಿತು. ಭಾಷೆ, ಸಂಸ್ಕೃತಿ, ಪರಂಪರೆ, ರಾಜ್ಯಾಧಿಕಾರಿಗಳ ಭದ್ರಾಧಾರವುಳ್ಳ ದಕ್ಷಿಣಕ್ಕೆ ಅಭಿಮುಖವಾಗಿ ಎಲ್ಲರ ದೃಷ್ಟಿಗಳು ಕೆಲ ಕಾಲ ಹೊರಳಿ ನಿಂತುವು. ಕನ್ನಡ ಜೀವವೆಲ್ಲಿ? ಆಶೋತ್ತರವೆಲ್ಲಿ? ಉದ್ಧಾರವೆಲ್ಲಿ?

ಅಖಿಲ ಕರ್ನಾಟಕದಲ್ಲಿ ಕನ್ನಡ ಚಳವಳಿಯನ್ನು ಮಾಡಬೇಕಾ ಗಿದೆ! ಅದಕ್ಕೋಸುಗ ಅಖಂಡವಾಗಿ ಹೋರಾಡಬೇಕಾಗಿದೆ. ಉತ್ತರ ವಾಗಲಿ ದಕ್ಷಿಣವಾಗಲಿ ಇಂದಿನ ಕನ್ನಡ ಚಳವಳಿ ಊರಿ ನಿಂತುದು ಅಲ್ಲಲ್ಲಿಯ ಕೆಲವು ಧ್ಯೇಯವಾದಿಗಳ, ಸಾಹಸಿಗರ, ದಿಟ್ಟರ ಭುಜಗಳ ಮೇಲೆ. ಪ್ರಪಂಚ ಪಂಡಿತರ, ವ್ಯವಹಾರ ಚತುರರ ಧುರಂಧರ ಜೀವನ ಗತಿಯಲ್ಲಿ ಕನ್ನಡಕ್ಕೆ ಇನ್ನೂ ತನ್ನದಾದ ಸ್ಥಾನ ದೊರೆತಿರುವುದಿಲ್ಲ. ಇಂದಿನ ಜನಜಂಗುಳಿಯ ಸಂತೆಯಲ್ಲಿ ನಮ್ಮ ನೆಲದಲ್ಲಿ ಹುಟ್ಟಿ ಬೆಳೆದು ನಮ್ಮ ಜೀವನಾಧಾರವಾದ ವಸ್ತುವಾಗಿರದೆ ಎಲ್ಲಿಂದಲೊ ಕಡ ತಂದು ಮಾರಾಟಕ್ಕೆ ಇಟ್ಟ ಒಡವೆಯಾಗಿದೆ ಈ ಕನ್ನಡ! ಅಂತೆಯೆ ಅದು ಎಲ್ಲರ ಮನಸ್ಸನ್ನು ತತ್ಕಾಲ ಎಳೆದುಕೊಳ್ಳುತ್ತಿಲ್ಲ. ಅದಕ್ಕೋಸುಗ ಪ್ರಚಾರಕಾರ್ಯ ಆವಶ್ಯಕವಾಗಿದೆ. ಕನ್ನಡನಾಡಿನವರಾಗಿ ಕನ್ನಡಿ ಗರೆನಿಸಿಕೊಳ್ಳುವವರ ಉಸಿರು ಕನ್ನಡವಾಗಿಲ್ಲ! ಕರ್ನಾಟಕರ ಎದೆ ಗಳನ್ನು ಮೀಟುತ್ತಿರುವುದು ಕನ್ನಡ ಜೀವವಲ್ಲ!

ಕನ್ನಡ ಜೀವವಿಲ್ಲದೆ ಏಸು ಸಂಘಗಳನ್ನು ನಿರ್ಮಿಸಿದರೇನು, ಏಸು ಸಂಸ್ಥೆಗಳನ್ನು ಕಟ್ಟಿದರೇನು? ಇದೆಲ್ಲವೂ ಬಹಿರಂಗ ಶೃಂಗಾರ ವಾಯಿತಲ್ಲದೆ ಅಂತರಂಗ ಸಂಸ್ಕಾರವಲ್ಲ. ಕನ್ನಡಿಗರ ಹೃದಯ ಪರಿವರ್ತನೆಯಾಗಬೇಕು. ಕನ್ನಡ ಅವರ ಜೀವನದ ಮುಡಿಪು ಮೀಸ ಲಾಗಬೇಕು. ಅದೀಗ ಆಗಿದೆಯೆ?

ಮೈಸೂರಲ್ಲಿ, ಕನ್ನಡದ ಅರಸುತನವನ್ನು ಉಪಭೋಗಿಸುವ ಮೈಸೂರಲ್ಲಿಯೂ ಮಿಕ್ಕೆಡೆಯಂತೆ ಕನ್ನಡ ಚಳವಳಿ ನಡೆಯಬೇಕಾಗಿದೆ! ಅಲ್ಲಿಯ ಕನ್ನಡ ಚಳವಳಿ ಕೆಲವು ಧ್ಯೇಯವಾದಿಗಳಲ್ಲದೆ ಜನ ಸಾಮಾನ್ಯರ ಅಂತರಾಳಕ್ಕೆ ಇನ್ನೂ ಇಳಿದಿಲ್ಲ! ಮೈಸೂರ ಜನರೆಲ್ಲರೂ ಕನ್ನಡವನ್ನು ಮಾತನಾಡುತ್ತಿರಬಹುದು, ಬೇರೆಯವರಿಗಿಂತ ನಯವಾದ ಸಂಸ್ಕೃತವಾದ ಮಾತನಾಡುತ್ತಿರಬಹುದು. ಆದರೆ ನಾಲಗೆಯನ್ನು ಕುಣಿಸುತ್ತಿರುವಂತೆ ಕನ್ನಡ ಅವರೆಲ್ಲರ ಒಳಬಗೆಯನ್ನು ಕುಣಿಸುತ್ತಿ ದೆಯೆ? ಮೈಸೂರಲ್ಲಿ ವಿಶ್ವವಿದ್ಯಾನಿಲಯವಿದ್ದರೂ ಅಲ್ಲಿ ಕನ್ನಡಕ್ಕೆ ಸ್ಥಾನವೆಷ್ಟು? ಪ್ರಮಾಣವೆಷ್ಟು?

ಭೀಮೆಯಿಂದ ಕಾವೇರಿಯವರೆಗೆ, ಹೈದರಾಬಾದಿನಿಂದ ಮೈಸೂರ ವರೆಗೆ ಅಸ್ತವ್ಯಸ್ತವಾಗಿ ಹಬ್ಬಿದ ಕನ್ನಡ ವಿಶಾಲವಾದ ಒಂದು ಪಾಳು ದೇಗುಲ; ಕೆಲಭಾಗ ಉಧ್ವಸ್ತವಾಗಿದೆ, ಕೆಲಭಾಗ ಮುಕ್ಕಾಗಿದೆ, ಕೆಲಭಾಗ ಭದ್ರವಾಗಿದೆ. ಅತ್ತಿತ್ತಲು ಗುಂಪು ಗುಂಪಾಗಿ ಉತ್ಸಾಹಿಗಳು ಕೂಡುತ್ತಿರುವರು. ಅಲ್ಲಿ ಕಟ್ಟಬೇಕು, ಇಲ್ಲಿ ಜೀರ್ಣೋದ್ಧಾರ ಮಾಡ ಬೇಕು ಎಂದು ಹವಣಿಸುತ್ತಿರುವರು. ಕೆಲವೆಡೆ ಜಾತ್ರೆಗಳೂ ನೆರೆಯು ತ್ತಿರುವುವು. ಉತ್ಸವ ಮೂರ್ತಿಯ ಮೆರವಣಿಗೆಯೂ ನಡೆದಿದೆ. ಆದರೆ ಗರ್ಭಗೃಹ ಇನ್ನೂ ಬರಿದೇ ಬರಿದು. ಅಲ್ಲಿಂದ ಸ್ಥಾನಚ್ಯುತ ಳಾದ ದೇವಿಯನ್ನು ಕೆಲವರು ಹುಡುಕುತ್ತಲಿದ್ದಾರೆ. ಇನ್ನೂ ಆ ವಿಗ್ರಹದ ಸುಳಿವೆ ಸಿಕ್ಕಲೊಲ್ಲದು. ಮೂರ್ತಿಯಿಲ್ಲದೆ ಮಂದಿರದ ಪ್ರಾಣವೆಲ್ಲಿ?

ಕನ್ನಡದ ದೇವಿಯ ಪ್ರಾಣಪ್ರತಿಷ್ಠೆಯಾಗದೆ ಕರ್ನಾಟಕದಲ್ಲಿ ಕನ್ನಡ ಜೀವ ಬಾಳಿ ಬೆಳಗದು. ದಿವ್ಯವಾದ, ಭವ್ಯವಾದ, ತೇಜೋ ಮಯವಾದ ಕನ್ನಡ ಸಂಸ್ಕೃತಿ ಜ್ಯೋತಿ ಈ ದೇವಿ. ಪಾಳು ದೇಗುಲ ವಾಗಬಲ್ಲ ಕಲ್ಲುಮಣ್ಣಿನ ಗುಡಿಗಳಲ್ಲಿ ನೆಲಸಲೊಲ್ಲಳು ಇವಳು, ಅಪಾರ ಭಕ್ತಿ ಪ್ರವಣದಿಂದ ಬಹಿರ್ಮುಖವಾಗಿ ಕಠೋರ ಕಾರ್ಯ ನಿಷ್ಠೆಯಿಂದ ಅಂತರ ಭೇದ್ಯವಾದ ಕನ್ನಡ ಕರ್ಮಯೋಗಿಗಳ ವಜ್ರಶಾಲೆಗಳಿಂದ ರಚಿಸಲಾದ ಅಮರ ಮಂದಿರವೆ ಇವಳ ಅಚಲ ವಾಸಸ್ಥಳ. ಇಂತಹ ನಿವಾಸ ತನಗಾಗಿ ನಿರ್ಮಾಣವಾಗುವುದೆ, ಇಂತಹ ಕರ್ಮಯೋಗಿಗಳು ತನಗೆ ಸಿಕ್ಕುವರೆ ಎಂದು ಆ ದೇವಿ ಹಂಬಲಿಸುತ್ತಿರುವಳು, ಹಾತೊರೆ ಯುತ್ತಿರುವಳು.

ಕನ್ನಡಜೀವ ಇಂತಹ ಕರ್ಮಯೋಗಿಗಳ ಕೈಯಲ್ಲಿದೆ, ಕನ್ನಡದ ಏಳುಬೀಳುಗಳು ಇವರ ಬಲಾಬಲವನ್ನು ಅವಲಂಬಿಸಿವೆ. ಕನ್ನಡಕ್ಕಾಗಿ ಸರ್ವಸ್ವವನ್ನು ಧಾರೆಯೆರೆದು ದುಡಿಯಲು ಸಿದ್ಧರಾದ ಇಂತಹ ಕನ್ನಡ ಕರ್ಮಯೋಗಿಗಳ ಅಮರ ಸಂಘವೊಂದು ಉದಯಿಸಲಿದೆ, ಉದಯಿಸ ಬೇಕಾಗಿದೆ. ಇಂತಹ ಬಳಗವೊಂದು ಬೆಳೆಯಬೇಕಾಗಿದೆ. ಅಂದು, ಅಂದೇ ಅಂದು 'ಬದುಕಿತೆಲೆ ಕನ್ನಡ ಜೀವ' ಎಂದು ಒಕ್ಕೊರಲ ವಿಜಯರಾಗವನ್ನು ಕನ್ನಡಿಗರೆಲ್ಲರೂ ಹಾಡಬಲ್ಲರು. ಅದುವೆ ಕನ್ನಡದ ನೈಜ ಏಕೀಕರಣ. ಇಂದಿನ ಕಲ್ಪನೆಯ ಸತ್ಯಸಂಕಲ್ಪವದು, ಈಗಿನ ಭಾವಲೋಕದ ಅನುಭಾವ ಸೃಷ್ಟಿಯದು!

---

## ಕನ್ನಡ ಸುದ್ದಿ



### ಕರ್ನಾಟಕ ಶಿಕ್ಷಣ ಪರಿಷತ್ತು

ಇದೇ ಡಿಸೆಂಬರ್ ೭ ಮತ್ತು ೮ನೆಯ ತಾರೀಖುಗಳಲ್ಲಿ ಮೇಲೆ ಕಂಡ ಪರಿಷತ್ತು ಅಹಮ್ಮದಾಬಾದ ಕಲಾಶಾಲೆಯ ಪ್ರಿನ್ಸಿಪಾಲರವರಾದ ಡಾ। ಕಾರಕೆ. ಆರ. ವಿ. ರಾವ. ಎಂ.ಎ., ಪಿಎಚ್.ಡಿ. ಅವರ ಅಧ್ಯಕ್ಷತೆಯಲ್ಲಿ ಸೇರುವುದಾಗಿಯೂ ಬೊಂಬಾಯಿ ಸರ್ಕಾರದ ಮುಖ್ಯಮಂತ್ರಿಗಳಾದ ಶ್ರೀ. ಬಿ. ಜಿ. ಖೇರರವರು ಪರಿಷತ್ತಿನ ಪ್ರಾರಂಭೋತ್ಸವ ನೆರವೇರಿಸುವುದಾಗಿಯೂ ತಿಳಿಯಬರುತ್ತದೆ.

### ಸೆನೆಟ್ಟಿನಲ್ಲಿ ಕನ್ನಡ ಭಾಷಣ

ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ಟಿನ ಸಭೆ ಬೆಂಗಳೂರಿನಲ್ಲಿ ನವೆಂಬರ್ ೨೬ನೆಯ ತಾರೀಖು ನಡೆಯಿತು. ಶಿವಮೊಗ್ಗದ ಶ್ರೀ. ಭೂಪಾಳಂ ಚಂದ್ರಶೇಖರ ಯ್ಯನವರು ಕನ್ನಡದಲ್ಲಿ ಭಾಷಣ ಮಾಡಿದರೆಂದು ತಿಳಿಯಬರುತ್ತದೆ.

### 'ಕುಮಾರವ್ಯಾಸ ಬಳಗ': ಸಂಘ ಸ್ಥಾಪನೆ

ಈ ಸಂಘ ನವೆಂಬರ್ ೨೮ರಲ್ಲಿ ಗದುಗಿನಲ್ಲಿ ಸ್ಥಾಪಿತವಾಯಿತು. 'ಕನ್ನಡ ನುಡಿ'ಯ ಸಂಪಾದಕರಾದ ಶ್ರೀ. ಅ. ನ. ಕೃಷ್ಣರಾಯರು ಪ್ರಾರಂಭ ಭಾಷಣ ಮಾಡಿದರು.

---

# ಆಧುನಿಕ ನೃತ್ಯ

ಶ್ರೀ. ಶ್ರೀನಿವಾಸ ಕುಲಕರ್ಣಿ, ಬಿ. ಎ., ಧಾರವಾಡ.

ನಮ್ಮ ಆಧುನಿಕಸಾಹಿತ್ಯವು ವಿವಿಧಮಾರ್ಗಗಳಲ್ಲಿ, ಹೊಸ ಬಗೆಯಲ್ಲಿ, ಸ್ವತಂತ್ರ ರೀತಿಯಲ್ಲಿ ಚಲಿಸುತ್ತಿರುವಂತೆ ನರ್ತನದ ಗತಿಗಮ್ಯಗಳೂ ನಮ್ಮ ಜನಜೀವನದಷ್ಟೇ ವಿಶಾಲವಾಗಬೇಕು ಎಂಬ ಮಾತನ್ನನುಸರಿಸಿ ಎರಡು ಮಾತು ಬರೆಯಬೇಕೆಂದಿದ್ದೇನೆ.

ಸುಮಾರು ೫ ವರ್ಷಗಳ ಹಿಂದೆ ಮದ್ರಾಸಿನಲ್ಲಿ ಭಾರತೀಯ್ಯ ನೃತ್ಯ ಕಲಾ ಪ್ರವೀಣರಾದ ಉದಯಶಂಕರರ ನರ್ತನವಾಯಿತು. ಆ ಕಾಲಕ್ಕೆ ಅವರ ನರ್ತನಗಳಲ್ಲಿಯ ಸ್ವಾತಂತ್ರ್ಯವನ್ನು ಕಂಡು ಕೆಲವರಿಗೆ ವ್ಯಥೆಯಾಯಿತು. ತನ್ನ ಊಹಾಪೋಹಗಳಿಂದ ಕಲ್ಪಿಸಿಕೊಂಡ ನರ್ತನಗಳನ್ನು ಭಾರತೀಯ ನೃತ್ಯವೆಂದು ಪರರಾಷ್ಟ್ರಗಳಲ್ಲಿ ಹೇಳುವುದು ಭಾರತೀಯ ನೃತ್ಯಕಲೆಯ ಅಪಪ್ರಚಾರವೆಂದೂ ಕೆಲವರು ಅವರನ್ನು ಕಟುತರವಾಗಿ ಟೀಕಿಸಿದರು. ಅಂದಿನ ಟೀಕೆಯ ಒಂದು ತುಣುಕನ್ನು ತಮ್ಮೆದುರಿನಲ್ಲಿ ಇಡಬೇಕೆಂದಿದ್ದೇನೆ.

'It will be clear that Indian Dances have an elaborate technique and that nothing is left to chance or the whim of the performer and that every movement and gesture from the simplest to the most complex is predetermined. It is the duty of the dancer to learn and train himself to execute these with grace and fidelity. A dancer could no more guess a movement or gesture or invent his own than a musician could guess or invent Raga and Tala.'

ನರ್ತನದಂತಹ ಪರಂಪರಾಗತವಾಗಿ ಬಂದ ಶಾಸ್ತ್ರಗಳ ಬಗ್ಗೆ ಸ್ವಾತಂತ್ರ್ಯವನ್ನು ವಹಿಸುವುದು ತುಂಬಾ ವಿಘಾತುಕವಾದುದು ಎಂದು ಇವರ ಅಭಿಪ್ರಾಯ. ನರ್ತನದ ಪ್ರತಿಯೊಂದು ಹಾವಭಾವವೂ, ನಿಲುವು ಭಂಗಿಯೂ ಭರತನ ನಾಟ್ಯಶಾಸ್ತ್ರದಂತಹ ಗ್ರಂಥಗಳಲ್ಲಿ ವಿಸ್ತೃತವಾಗಿ, ವಿವರವಾಗಿ, ಅಷ್ಟೇ ಸೂಕ್ಷ್ಮವಾಗಿ ವಿವರಿಸಲ್ಪಟ್ಟಿರುವಾಗ ಹೊಸ ರೀತಿಯ ಚಲನವಲನಗಳನ್ನು ಅಂಗವಿನ್ಯಾಸಗಳನ್ನು ಕಲ್ಪಿಸಿಕೊಳ್ಳುವ ಆವಶ್ಯಕತೆಯೇ ಇಲ್ಲ; ನರ್ತಕನ ಕೆಲಸವೆಂದರೆ ನಾಟ್ಯಶಾಸ್ತ್ರಗಳನ್ನು ಓದಿಕೊಂಡು ಆ ಭಾವಭಂಗಿಗಳಲ್ಲಿ ನಯ ಹಾಗು ಮಾರ್ದವಗಳನ್ನು ತರಲು ಯತ್ನಿಸುವುದು ಮಾತ್ರ ಎಂದು ಇವರ ಮತ.

ಇದೂ ಒಂದು ರೀತಿ. ಹೊಸದನ್ನು ಹುಟ್ಟಿಸುವ ಹುಮ್ಮಸ್ಸಿನಲ್ಲಿ ನಮ್ಮಲ್ಲಿದ್ದುದನ್ನು ಕಳೆದುಕೊಳ್ಳುವುದು ಬೇಡ. ನಮ್ಮಲ್ಲಿ ಏನಿದೆ ಎಂಬುದನ್ನು ನಾವು ತಿಳಿದುಕೊಳ್ಳೋಣ, ಅರಗಿಸಿಕೊಳ್ಳೋಣ ಎಂಬ ಮಾತು ಸರಿಯಾದುದೇ. ಆದರೆ ಮನುಷ್ಯನಲ್ಲಿಯ ಕರ್ತೃತ್ವಶಕ್ತಿಯನ್ನೇ ಅಲ್ಲಗಳೆದರೆ ಹೇಗೆ ?

ಕನ್ನಡಕಾವ್ಯ ಸಾಮ್ರಾಜ್ಯದಲ್ಲಿ ಕನ್ನಡಕವಿಗಳು ಮಾಡುತ್ತಿರುವ ಕ್ರಾಂತಿಯನ್ನೇ ಉದಯಶಂಕರರೂ ಹಾಗೂ ಇತರ ಆಧುನಿಕನರ್ತಕರೂ ನರ್ತನ ಪ್ರಪಂಚದಲ್ಲಿ ಮಾಡುತ್ತಲಿದ್ದಾರೆ. ಕನ್ನಡಕವಿಗಳು ಸಿಕ್ಕಾಪಟ್ಟೆಯಾಗಿ ಕವಿತೆಗಳನ್ನು ಬರೆಯುತ್ತಲಿದ್ದಾರೆ ಎಂಬ ಸೊಲ್ಲು ಈಗೀಗ ಅಡಗುತ್ತಲಿದೆ. 'ಅಯ್ಯೋ ಪದ್ಯವೇ! ಗದ್ಯವನ್ನೇ ತುಂಡು ತುಂಡಾಗಿ ಅಚ್ಚುಹಾಕಿಸಿ ಪದ್ಯವೆಂದು ಕರೆದಿದ್ದಾರೆ. ಒಂದು ಛಂದಸ್ಸೇ, ಒಂದು ಅಲಂಕಾರವೇ, ಒಂದು ಉಪಮೆಯೇ, ಏನಿದೆಯೆಂದು ಇದಕ್ಕೆ ಕವಿತೆ ಎನ್ನಬೇಕು ? ಎಂದು ಮೂಗುಮುರಿಯುತ್ತಲಿದ್ದ ಮಹನೀಯರು ಕನ್ನಡ ಕವನಗಳಿಗೆ ಮನ್ನಣೆ ಕೊಡುವ ಕಾಲ ಬಂದಿದೆ. ಇಂದಿನ ಕವಿತೆಗಳಲ್ಲಿಯೂ ಒಂದು ತಾಳವಿದೆ, ಒಂದು ಲಯುವಿದೆ, ಒಂದು ಛಂದಸ್ಸಿದೆ, ಬಿಗುವು ಇದೆ ಎಂದು ಒಪ್ಪಿಕೊಳ್ಳುತ್ತಲಿದ್ದಾರೆ. ಕನ್ನಡ ಕವಿಗಳಿಗೆ ಸಿಗುತ್ತಲಿದ್ದ ಮನ್ನಣೆ ಕನ್ನಡ ನರ್ತಕರಿಗೂ ದೊರೆಯಬೇಕು.

ನನ್ನಮಿತ್ರರಾದ ಶ್ರೀ. ಮೇವುಂಡಿ ಮಲ್ಲಾರಿಯವರು ಈಗ ಕೆಲವು ವರ್ಷಗಳ ಹಿಂದೆ ಜಯಕರ್ನಾಟಕದಲ್ಲಿ 'ನವೀನ ವೃತ್ತಗಳು' ಎಂಬ ಲೇಖನ ಮಾಲೆಯೊಂದನ್ನು ಪ್ರಕಟಿಸುತ್ತಲಿದ್ದರು. ಅದು ಇನ್ನೂ ಅಪೂರ್ಣವಾಗಿಯೇ ಉಳಿದಿದೆ. ಅದರಲ್ಲಿ ನಮ್ಮ ಆಧುನಿಕ ಕವನಗಳನ್ನು ಷಟ್ಪದಿ ಹಾಗು ವೃತ್ತಗಳ ರೀತಿಯಲ್ಲಿ ವಿಭಾಗಿಸಿದ್ದಾರೆ. ಯಾವುದೇ ಒಂದು ಆಧುನಿಕ ಕವನವನ್ನು ತೆಗೆದುಕೊಂಡು ವಿಭಜಿಸಿ ನೋಡಿದರೆ ಕುಸುಮ ಷಟ್ಪದಿಯ ಲಘುಚರಣ, ಶರಷಟ್ಪದಿಯ ದೀರ್ಘ ಚರಣ, ಪರಿವರ್ಧಿನಿಯ ಕೆಲವು ಗಣಗಳು ಕೂಡಿ ಹೊಸ ಛಂದಸ್ಸೇ ಸಿದ್ಧವಾದದ್ದು ನಮಗೆ ಕಂಡುಬರುವುದು. ಹೊಸದೆಂದು ತೋರಿಕೆಗೆ ಕಂಡುಬಂದರೂ ಹಳೆಯದನ್ನು ಅದು ಸಂಪೂರ್ಣವಾಗಿ ಬಿಟ್ಟು ಕೊಟ್ಟಿಲ್ಲ. ಹಳೆಯದರ ತಳಹದಿಯ ಮೇಲೆ ಹೊಸ ಮಂದಿರ ಕಟ್ಟಿದೆ ಎಂದು ನಮಗೆ ಮನವರಿಕೆಯಾಗುವುದು. ಅದೇ ಮೇರೆಗೆ ನೃತ್ಯದಲ್ಲಿ ಕೂಡ ನಾಟ್ಯ ಶಾಸ್ತ್ರಗಳನ್ನು ಓದಿಕೊಂಡು ದೇಗುಲದಲ್ಲಿಯ ವಿಗ್ರಹಗಳನ್ನು ಮನನಮಾಡಿಕೊಂಡು ಪುರಾಣ ಇತಿಹಾಸ ಪರಂಪರೆಗಳನ್ನು ಅನುಲಕ್ಷಿಸಿ, ನಮ್ಮ ಜನಜೀವನವನ್ನು ಪರಿಶೀಲಿಸಿ, ನರ್ತನಗಳನ್ನು ಸಿದ್ಧಪಡಿಸಿಕೊಂಡರೆ ಅವು ಭಾರತೀಯ ನೃತ್ಯಗಳಲ್ಲವೇನು? ಅವುಗಳನ್ನು ಭಾರತೀಯ ನೃತ್ಯಗಳೆಂದು ಪರ ರಾಷ್ಟ್ರಗಳಲ್ಲಿ ಪ್ರದರ್ಶಿಸಿದರೆ ಭಾರತೀಯ ನೃತ್ಯದ ಅಪಪ್ರಚಾರಮಾಡಿದಂತಾಯಿತೇನು ?

ಹೊಸ ಹೊಸ ನರ್ತಕರು ಜನಿಸುತ್ತಲಿದ್ದಾರೆ. ಹೊಸ ಹೊಸ ನರ್ತನದ ರೀತಿಗಳು ಕಂಡು ಬರುತ್ತಲಿವೆ. ತಮಗೆ ಹೊಳೆದ ರೀತಿಯಲ್ಲಿ ನೃತ್ಯಗಳನ್ನು ಹೊಂದಿಸಿಕೊಳ್ಳುತ್ತಲಿದ್ದಾರೆ. ಹೀಗೆ ಕೈಕಾಲುಗಳನ್ನು ಆಡಿಸಿದರೆ, ಮೋರೆಯನ್ನು ಹೊರಳಿಸಿದರೆ ಏನು ಅಂದ ಹಾಗಾಯಿತು, ಅರ್ಥವಿಲ್ಲದ ಹುಡುಗಾಟಿಕೆ ಎಂದು ತಿರಸ್ಕರಿಸಬೇಡಿ. ನರ್ತನದ ಎಲ್ಲ ಬಗೆಯ ಪ್ರಯೋಗಗಳನ್ನು ಸೌಹಾರ್ದದಿಂದ ನೋಡಿ ನಿಮ್ಮ ಸರಳ ಹೃದಯದ ಅಭಿಪ್ರಾಯವನ್ನು ಕೊಡಿರಿ. ಹೊಸದು ಎಂದು ಹೊಗಳುವುದೂ ಬೇಡ; ತೆಗಳುವುದೂ ಬೇಡ. ಪ್ರಗತಿಯ ದೃಷ್ಟಿಯಲ್ಲಿ ಎರಡೂ ಅಷ್ಟೇ ವಿಘಾತುಕ.

ನಮ್ಮ ನೃತ್ಯಪರಂಪರೆಗೆ ನಾವು ಹೊಸ ರೂಪು ಕೊಡಬೇಕಾಗಿದೆ, ಹೊಸ ಚೈತನ್ಯವನ್ನು ತರಬೇಕಾಗಿದೆ, ಹೊಸ ಜೀವನವನ್ನೇ ತುಂಬಿ ಹೊಸದನ್ನಾಗಿಯೇ ಮಾಡಬೇಕಾಗಿದೆ. ಅಂತೆಯೇ ಅದನ್ನು ಬೆಳೆಯಗೊಡಿ. ಈ ಸಂದರ್ಭದಲ್ಲಿ ಗುರುವರ್ಯ ಬೇಂದ್ರೆಯವರು ಕವಿತೆಯ ವಿಷಯವಾಗಿ ಹೇಳುತ್ತಲಿದ್ದ ಮಾತು ನೆನಪಿಗೆ ಬರುತ್ತದೆ. ಮಗು ಬೀಳುವುದಲ್ಲ ಎಂದು ಹಿಡಿದು ಹಾಕಿದರೆ ಅದು ನಡೆದಾಡಲು ಕಲಿಯುವುದಾದರೂ ಹೇಗೆ? ಅದರ ಪಾಡಿಗೆ ಅದನ್ನು ಕೆಲವು ಕಾಲ ಬಿಟ್ಟು ಬಿಡಿರಿ. ಬಿದ್ದು ಎದ್ದು ತನ್ನದೊಂದು ನಡೆಗೆಯ ರೀತಿಯನ್ನ ತಾನು ಕಂಡು ಕೊಳ್ಳುವುದು. ನಡುನಡುವೆ ನೀವು ಅದರ ಎದುರಿನಲ್ಲಿ ನಡೆದಾಡಿ ತೋರಿಸಿರಿ. ಇಲ್ಲವೆ "ಬಿದ್ದೀಯಾ ಮೆಲ್ಲಗೆ" ಎಂದು ಎಚ್ಚರಿಕೆ ಕೊಡಿರಿ. ಮಗು ಮುಗ್ಗರಿಸಿದ ಮೇಲೆ ನಡೆದಾಡಲು ಕಲಿಯುವುದು. ನರ್ತನವೂ ಬೆಳೆಯಲಿ ; ವಿವಿಧವಾಗಿ, ವಿಪುಲವಾಗಿ ಬೆಳೆಯಲಿ; ಪ್ರತಿ ಉತ್ಸವದಲ್ಲಿಯೂ ಪ್ರತಿಯೊಂದು ಸಂತೋಷ ಕೂಟದಲ್ಲಿಯೂ ನರ್ತನದ ಸ್ಪರ್ಧೆಯಾಗಲಿ. ಗುಡಿಯಲ್ಲಿಯ "ನರ್ತನಸೇವಾಮುವಧಾರಯ' ಎಂಬ ಪೂಜಾರಿಯ ಮಾತು ವಾಡಿಕೆಯ ಮಾತಾಗದೆ ನಿತ್ಯದ ಮಾತಾಗಬೇಕು; ಸತ್ಯವಾದ ಮಾತಾಗಬೇಕು. ಆಗ ಮಾತ್ರ ಆಧುನಿಕ ನೃತ್ಯದ ರೀತಿನೀತಿಗಳನ್ನು ನಿಷ್ಕರ್ಷಿಸಲು ಸಾಧ್ಯವಾಗುವುದು. ಮೊದಲು ಭಾಷೆಯ ಬೆಳವಣಿಗೆಯಾಗಬೇಕು; ಆಮೇಲೆ ವ್ಯಾಕರಣದ ಉಗಮವಾಗುವುದು.

---

### ಕೃತಜ್ಞತೆ

ಕಳೆದ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ಪಿ. ಜಿ. ಹಳಕಟ್ಟಿ ಅವರ ಚಿತ್ರದ ಪಡಿಯಚ್ಚು ಕೀರ್ತನ ಕೇಸರಿ ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳ ಕೃಪೆಯಿಂದ ದೊರೆತದ್ದು.

ಶ್ರೀ. ಮುದವೀಡು ಕೃಷ್ಣರಾಯರ ಚಿತ್ರದ ಪಡಿಯಚ್ಚನ್ನು ಶ್ರೀ ಗುರುನಾಥ ಜೋಶಿಯವರು ಕೊಟ್ಟು ಉಪಕಾರಮಾಡಿದ್ದಾರೆ.

# ಆಧುನಿಕ ನೃತ್ಯ

ಶ್ರೀ. ಶ್ರೀನಿವಾಸ ಕುಲಕರ್ಣಿ, ಬಿ. ಎ., ಧಾರವಾಡ.

ನಮ್ಮ ಆಧುನಿಕಸಾಹಿತ್ಯವು ವಿವಿಧಮಾರ್ಗಗಳಲ್ಲಿ, ಹೊಸ ಬಗೆಯಲ್ಲಿ, ಸ್ವತಂತ್ರ ರೀತಿಯಲ್ಲಿ ಚಲಿಸುತ್ತಿರುವಂತೆ ನರ್ತನದ ಗತಿಗಮ್ಯಗಳೂ ನಮ್ಮ ಜನಜೀವನದಷ್ಟೇ ವಿಶಾಲವಾಗಬೇಕು ಎಂಬ ಮಾತನ್ನನುಸರಿಸಿ ಎರಡು ಮಾತು ಬರೆಯಬೇಕೆಂದಿದ್ದೇನೆ.

ಸುಮಾರು ೫ ವರ್ಷಗಳ ಹಿಂದೆ ಮದ್ರಾಸಿನಲ್ಲಿ ಭಾರತೀಯ ನೃತ್ಯ ಕಲಾ ಪ್ರವೀಣರಾದ ಉದಯಶಂಕರರ ನರ್ತನವಾಯಿತು. ಆ ಕಾಲಕ್ಕೆ ಅವರ ನರ್ತನಗಳಲ್ಲಿಯ ಸ್ವಾತಂತ್ರ್ಯವನ್ನು ಕಂಡು ಕೆಲವರಿಗೆ ವ್ಯಥೆಯಾಯಿತು. ತನ್ನ ಊಹಾಪೋಹಗಳಿಂದ ಕಲ್ಪಿಸಿಕೊಂಡ ನರ್ತನಗಳನ್ನು ಭಾರತೀಯ ನೃತ್ಯವೆಂದು ಪರರಾಷ್ಟ್ರಗಳಲ್ಲಿ ಹೇಳುವುದು ಭಾರತೀಯ ನೃತ್ಯಕಲೆಯ ಅಪಪ್ರಚಾರವೆಂದೂ ಕೆಲವರು ಅವರನ್ನು ಕಟುತರವಾಗಿ ಟೀಕಿಸಿದರು. ಅಂದಿನ ಟೀಕೆಯ ಒಂದು ತುಣುಕನ್ನು ತಮ್ಮೆದುರಿನಲ್ಲಿ ಇಡಬೇಕೆಂದಿದ್ದೇನೆ.

'It will be clear that Indian Dances have an elaborate technique and that nothing is left to chance or the whim of the performer and that every movement and gesture from the simplest to the most complex is predetermined. It is the duty of the dancer to learn and train himself to execute these with grace and fidelity. A dancer could no more guess a movement or gesture or invent his own than a musician could guess or invent Raga and Tala.'

ನರ್ತನದಂತಹ ಪರಂಪರಾಗತವಾಗಿ ಬಂದ ಶಾಸ್ತ್ರಗಳ ಬಗ್ಗೆ ಸ್ವಾತಂತ್ರ್ಯವನ್ನು ವಹಿಸುವುದು ತುಂಬಾ ವಿಘಾತುಕವಾದುದು ಎಂದು ಇವರ ಅಭಿಪ್ರಾಯ. ನರ್ತನದ ಪ್ರತಿಯೊಂದು ಹಾವಭಾವವೂ, ನಿಲುವು ಭಂಗಿಯೂ ಭರತನ ನಾಟ್ಯಶಾಸ್ತ್ರದಂತಹ ಗ್ರಂಥಗಳಲ್ಲಿ ವಿಸ್ತೃತವಾಗಿ, ವಿವರವಾಗಿ, ಅಷ್ಟೇ ಸೂಕ್ಷ್ಮವಾಗಿ ವಿವರಿಸಲ್ಪಟ್ಟಿರುವಾಗ ಹೊಸ ರೀತಿಯ ಚಲನವಲನಗಳನ್ನು ಅಂಗವಿನ್ಯಾಸಗಳನ್ನು ಕಲ್ಪಿಸಿಕೊಳ್ಳುವ ಆವಶ್ಯಕತೆಯೇ ಇಲ್ಲ; ನರ್ತಕನ ಕೆಲಸವೆಂದರೆ ನಾಟ್ಯಶಾಶ್ತ್ರಗಳನ್ನು ಓದಿಕೊಂಡು ಆ ಭಾವಭಂಗಿಗಳಲ್ಲಿ ನಯ ಹಾಗು ಮಾರ್ದವಗಳನ್ನು ತರಲು ಯತ್ನಿಸುವುದು ಮಾತ್ರ ಎಂದು ಇವರ ಮತ.

ಇದೂ ಒಂದು ರೀತಿ. ಹೊಸದನ್ನು ಹುಟ್ಟಿಸುವ ಹುಮ್ಮಸ್ಸಿನಲ್ಲಿ ನಮ್ಮಲ್ಲಿದ್ದುದನ್ನು ಕಳೆದುಕೊಳ್ಳುವುದು ಬೇಡ. ನಮ್ಮಲ್ಲಿ ಏನಿದೆ ಎಂಬುದನ್ನು ನಾವು ತಿಳಿದುಕೊಳ್ಳೋಣ, ಅರಗಿಸಿಕೊಳ್ಳೋಣ ಎಂಬ ಮಾತು ಸರಿಯಾದುದೇ. ಆದರೆ ಮನುಷ್ಯನಲ್ಲಿಯ ಕರ್ತೃತ್ವಶಕ್ತಿಯನ್ನೇ ಅಲ್ಲಗಳೆದರೆ ಹೇಗೆ ?

ಕನ್ನಡಕಾವ್ಯ ಸಾಮ್ರಾಜ್ಯದಲ್ಲಿ ಕನ್ನಡಕವಿಗಳು ಮಾಡುತ್ತಿರುವ ಕ್ರಾಂತಿಯನ್ನೇ ಉದಯಶಂಕರರೂ ಹಾಗೂ ಇತರ ಆಧುನಿಕನರ್ತಕರೂ ನರ್ತನ ಪ್ರಪಂಚದಲ್ಲಿ ಮಾಡುತ್ತಲಿದ್ದಾರೆ. ಕನ್ನಡಕವಿಗಳು ಸಿಕ್ಕಾಪಟ್ಟೆಯಾಗಿ ಕವಿತೆಗಳನ್ನು ಬರೆಯುತ್ತಲಿದ್ದಾರೆ ಎಂಬ ಸೊಲ್ಲು ಈಗೀಗ ಅಡಗುತ್ತಲಿದೆ. 'ಅಯ್ಯೋ ಪದ್ಯವೇ! ಗದ್ಯವನ್ನೇ ತುಂಡು ತುಂಡಾಗಿ ಅಚ್ಚುಹಾಕಿಸಿ ಪದ್ಯವೆಂದು ಕರೆದಿದ್ದಾರೆ. ಒಂದು ಛಂದಸ್ಸೇ, ಒಂದು ಅಲಂಕಾರವೇ, ಒಂದು ಉಪಮೆಯೇ, ಏನಿದೆಯೆಂದು ಇದಕ್ಕೆ ಕವಿತೆ ಎನ್ನಬೇಕು ? ಎಂದು ಮೂಗುಮುರಿಯುತ್ತಲಿದ್ದ ಮಹನೀಯರು ಕನ್ನಡ ಕವನಗಳಿಗೆ ಮನ್ನಣೆ ಕೊಡುವ ಕಾಲ ಬಂದಿದೆ. ಇಂದಿನ ಕವಿತೆಗಳಲ್ಲಿಯೂ ಒಂದು ತಾಳವಿದೆ, ಒಂದು ಲಯವಿದೆ, ಒಂದು ಛಂದಸ್ಸಿದೆ, ಬಿಗುವು ಇದೆ ಎಂದು ಒಪ್ಪಿಕೊಳ್ಳುತ್ತಲಿದ್ದಾರೆ. ಕನ್ನಡ ಕವಿಗಳಿಗೆ ಸಿಗುತ್ತಲಿದ್ದ ಮನ್ನಣೆ ಕನ್ನಡ ನರ್ತಕರಿಗೂ ದೊರೆಯಬೇಕು.

ನನ್ನಮಿತ್ರರಾದ ಶ್ರೀ. ಮೇವುಂಡಿ ಮಲ್ಲಾರಿಯವರು ಈಗ ಕೆಲವು ವರ್ಷಗಳ ಹಿಂದೆ ಜಯಕರ್ನಾಟಕದಲ್ಲಿ 'ನವೀನ ವೃತ್ತಗಳು' ಎಂಬ ಲೇಖನ ಮಾಲೆಯೊಂದನ್ನು ಪ್ರಕಟಿಸುತ್ತಲಿದ್ದರು. ಅದು ಇನ್ನೂ ಅಪೂರ್ಣವಾಗಿಯೇ ಉಳಿದಿದೆ. ಅದರಲ್ಲಿ ನಮ್ಮ ಆಧುನಿಕ ಕವನಗಳನ್ನು ಷಟ್ಪದಿ ಹಾಗು ವೃತ್ತಗಳ ರೀತಿಯಲ್ಲಿ ವಿಭಾಗಿಸಿದ್ದಾರೆ. ಯಾವುದೇ ಒಂದು ಆಧುನಿಕ ಕವನವನ್ನು ತೆಗೆದುಕೊಂಡು ವಿಭಜಿಸಿ ನೋಡಿದರೆ ಕುಸುಮ ಷಟ್ಪದಿಯ ಲಘುಚರಣ, ಶರಷಟ್ಪದಿಯ ದೀರ್ಘಚರಣ, ಪರಿವರ್ಧಿನಿಯ ಕೆಲವು ಗಣಗಳು ಕೂಡಿ ಹೊಸ ಛಂದಸ್ಸೇ ಸಿದ್ಧವಾದದ್ದು ನಮಗೆ ಕಂಡುಬರುವುದು. ಹೊಸದೆಂದು ತೋರಿಕೆಗೆ ಕಂಡುಬಂದರೂ ಹಳೆಯದನ್ನು ಅದು ಸಂಪೂರ್ಣವಾಗಿ ಬಿಟ್ಟುಕೊಟ್ಟಿಲ್ಲ. ಹಳೆಯದರ ತಳಹದಿಯ ಮೇಲೆ ಹೊಸ ಮಂದಿರ ಕಟ್ಟಿದೆ ಎಂದು ನಮಗೆ ಮನವರಿಕೆಯಾಗುವುದು. ಅದೇ ಮೇರೆಗೆ ನೃತ್ಯದಲ್ಲಿ ಕೂಡ ನಾಟ್ಯ ಶಾಸ್ತ್ರಗಳನ್ನು ಓದಿಕೊಂಡು ದೇಗುಲದಲ್ಲಿಯ ವಿಗ್ರಹಗಳನ್ನು ಮನನಮಾಡಿಕೊಂಡು ಪುರಾಣ ಇತಿಹಾಸ ಪರಂಪರೆಗಳನ್ನು ಅನುಲಕ್ಷಿಸಿ, ನಮ್ಮ ಜನಜೀವನವನ್ನು ಪರಿಶೀಲಿಸಿ, ನರ್ತನಗಳನ್ನು ಸಿದ್ಧಪಡಿಸಿಕೊಂಡರೆ ಅವು ಭಾರತೀಯ ನೃತ್ಯಗಳಲ್ಲವೇನು? ಅವುಗಳನ್ನು ಭಾರತೀಯ ನೃತ್ಯಗಳೆಂದು ಪರ ರಾಷ್ಟ್ರಗಳಲ್ಲಿ ಪ್ರದರ್ಶಿಸಿದರೆ ಭಾರತೀಯ ನೃತ್ಯದ ಅಪಪ್ರಚಾರಮಾಡಿದಂತಾಯಿತೇನು ?

ಹೊಸ ಹೊಸ ನರ್ತಕರು ಜನಿಸುತ್ತಲಿದ್ದಾರೆ. ಹೊಸ ಹೊಸ ನರ್ತನದ ರೀತಿಗಳು ಕಂಡು ಬರುತ್ತಲಿವೆ. ತಮಗೆ ಹೊಳೆದ ರೀತಿಯಲ್ಲಿ ನೃತ್ಯಗಳನ್ನು ಹೊಂದಿಸಿಕೊಳ್ಳುತ್ತಲಿದ್ದಾರೆ. ಹೀಗೆ ಕೈಕಾಲುಗಳನ್ನು ಆಡಿಸಿದರೆ, ಮೋರೆಯನ್ನು ಹೊರಳಿಸಿದರೆ ಏನು ಅಂದ ಹಾಗಾಯಿತು, ಅರ್ಥವಿಲ್ಲದ ಹುಡುಗಾಟಿಕೆ ಎಂದು ತಿರಸ್ಕರಿಸಬೇಡಿ. ನರ್ತನದ ಎಲ್ಲ ಬಗೆಯ ಪ್ರಯೋಗಗಳನ್ನು ಸೌಹಾರ್ದದಿಂದ ನೋಡಿ ನಿಮ್ಮ ಸರಳ ಹೃದಯದ ಅಭಿಪ್ರಾಯವನ್ನು ಕೊಡಿರಿ. ಹೊಸದು ಎಂದು ಹೊಗಳುವುದೂ ಬೇಡ; ತೆಗಳುವುದೂ ಬೇಡ. ಪ್ರಗತಿಯ ದೃಷ್ಟಿಯಲ್ಲಿ ಎರಡೂ ಅಷ್ಟೇ ವಿಘಾತುಕ.

ನಮ್ಮ ನೃತ್ಯಪರಂಪರೆಗೆ ನಾವು ಹೊಸ ರೂಪು ಕೊಡಬೇಕಾಗಿದೆ, ಹೊಸ ಚೈತನ್ಯವನ್ನು ತರಬೇಕಾಗದೆ, ಹೊಸ ಜೀವನವನ್ನೇ ತುಂಬಿ ಹೊಸದನ್ನಾಗಿಯೇ ಮಾಡಬೇಕಾಗಿದೆ. ಅಂತೆಯೇ ಅದನ್ನು ಬೆಳೆಯಗೊಡಿ. ಈ ಸಂದರ್ಭದಲ್ಲಿ ಗುರುವರ್ಯ ಬೇಂದ್ರೆಯವರು ಕವಿತೆಯ ವಿಷಯವಾಗಿ ಹೇಳುತ್ತಲಿದ್ದ ಮಾತು ನೆನಪಿಗೆ ಬರುತ್ತದೆ. ಮಗು ಬೀಳುವುದಲ್ಲ ಎಂದು ಹಿಡಿದು ಹಾಕಿದರೆ ಅದು ನಡೆದಾಡಲು ಕಲಿಯುವುದಾದರೂ ಹೇಗೆ? ಅದರ ಪಾಡಿಗೆ ಅದನ್ನು ಕೆಲವು ಕಾಲ ಬಿಟ್ಟುಬಿಡಿರಿ. ಬಿದ್ದು ಎದ್ದು ತನ್ನದೊಂದು ನಡೆಗೆಯ ರೀತಿಯನ್ನ ತಾನು ಕಂಡು ಕೊಳ್ಳುವುದು. ನಡುನಡುವೆ ನೀವು ಅದರ ಎದುರಿನಲ್ಲಿ ನಡೆದಾಡಿ ತೋರಿಸಿರಿ. ಇಲ್ಲವೆ "ಬಿದ್ದೀಯಾ ಮೆಲ್ಲಗೆ" ಎಂದು ಎಚ್ಚರಿಕೆ ಕೊಡಿರಿ. ಮಗು ಮುಗ್ಗರಿಸಿದ ಮೇಲೆ ನಡೆದಾಡಲು ಕಲಿಯುವುದು. ನರ್ತನವೂ ಬೆಳೆಯಲಿ; ವಿವಿಧವಾಗಿ, ವಿಪುಲವಾಗಿ ಬೆಳೆಯಲಿ; ಪ್ರತಿ ಉತ್ಸವದಲ್ಲಿಯೂ ಪ್ರತಿಯೊಂದು ಸಂತೋಷ ಕೂಟದಲ್ಲಿಯೂ ನರ್ತನದ ಸ್ಪರ್ಧೆಯಾಗಲಿ. ಗುಡಿಯಲ್ಲಿಯ "ನರ್ತನಸೇವಾಮವಧಾರಯ' ಎಂಬ ಪೂಜಾರಿಯ ಮಾತು ವಾಡಿಕೆಯ ಮಾತಾಗದೆ ನಿತ್ಯದ ಮಾತಾಗಬೇಕು; ಸತ್ಯವಾದ ಮಾತಾಗಬೇಕು. ಆಗ ಮಾತ್ರ ಆಧುನಿಕ ನೃತ್ಯದ ರೀತಿನೀತಿಗಳನ್ನು ನಿಷ್ಕರ್ಷಿಸಲು ಸಾಧ್ಯವಾಗುವುದು. ಮೊದಲು ಭಾಷೆಯ ಬೆಳವಣಿಗೆಯಾಗಬೇಕು; ಆಮೇಲೆ ವ್ಯಾಕರಣದ ಉಗಮವಾಗುವುದು.

---

## ಕೃತಜ್ಞತೆ

ಕಳೆದ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ಪಿ. ಜಿ. ಹಳಕಟ್ಟಿ ಅವರ ಚಿತ್ರದ ಪಡಿಯಚ್ಚು ಕೀರ್ತನ ಕೇಸರಿ ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳ ಕೃಪೆಯಿಂದ ದೊರೆತದ್ದು.

ಶ್ರೀ. ಮುದವೀಡು ಕೃಷ್ಣರಾಯರ ಚಿತ್ರದ ಪಡಿಯಚ್ಚನ್ನು ಶ್ರೀ ಗುರುನಾಥ ಜೋಶಿಯವರು ಕೊಟ್ಟು ಉಪಕಾರಮಾಡಿದ್ದಾರೆ.

# ಅಖಿಲ ಕರ್ನಾಟಕ ಮಕ್ಕಳ ಕೂಟ

## (ಮಕ್ಕಳ ಎರಡನೆಯ ಮಹಾಸಭೆ)

### ಕಂಠಪಾಠ ಮತ್ತು ಬರವಣಿಗೆ ಸ್ಪರ್ಧೆಗಳು

ಅಖಿಲ ಕರ್ನಾಟಕ ಮಕ್ಕಳ ಕೂಟದ ಎರಡನೆಯ ಮಹಾಸಭೆಯ ಪ್ರಯುಕ್ತ ಕಳೆದ ವರ್ಷದಂತೆಯೇ ಈ ವರ್ಷವೂ ಡಿಸೆಂಬರ್ ೩ನೆಯ ವಾರದಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿವೆ. ಹೆಚ್ಚು ಹೆಚ್ಚು ಮಕ್ಕಳು ಸ್ಪರ್ಧೆಗಳಲ್ಲಿ ಭಾಗವಹಿಸಿ ಅದರ ಉಪಯೋಗವನ್ನು ಹೊಂದುವಂತೆ ಮಕ್ಕಳನ್ನು ಪ್ರೋತ್ಸಾಹಿಸಬೇಕೆಂದು ತಾಯಿ-ತಂದೆಗಳಲ್ಲೂ, ಉಪಾಧ್ಯಾಯರಲ್ಲೂ ವಿನಂತಿ.

ಕಣಜದ ಮೆಂಬರಲ್ಲದವರಿಗೆ **ಸ್ಪರ್ಧೆಗೆ ಒಂದಾಣೆ**ಯಂತೆ ಪ್ರವೇಶ ಧನ. **ಡಿಸೆಂಬರ್ ೮ ರೊಳಗಾಗಿ** ಪ್ರಾರ್ಥನ ಪತ್ರಿಕೆ, ಬರವಣಿಗೆ ಕಾಗದ, ಹಣ ಇವು ವ್ಯವಸ್ಥಾಪಕರಿಗೆ ತಲಪಬೇಕು.

### ಕಂಠಪಾಠ ಸ್ಪರ್ಧೆ

#### ೧ನೆಯ ಭಾಗ—೮ ವರ್ಷಗಳ ಒಳಗಿನ ಪ್ರೈ॥ ಸ್ಕೂಲು ಮಕ್ಕಳಿಗೆ

೧. ಚಂದು ಮಾಮ ಅಥವಾ ಹುಣ್ಣಿಮೆ ಹಪ್ಪಳ (ಶ್ರೀ. ರಾಜರತ್ನಂ ಅವರ 'ಕಂದನ ಕಾವ್ಯಮಾಲೆ' ಯಿಂದ); ೨. ಕುಂಟೆ (ಶ್ರೀ. ರಾಜರತ್ನಂ ಅವರ 'ತುತ್ತೂರಿ'ಯಿಂದ); ೩. ಅಂಬಾಲ್ ಅಥವಾ ಈ ಕತೆ (ಶ್ರೀ. ರಾಜರತ್ನಂ ಅವರ 'ಚುಟುಕ'ದಿಂದ); ೪. ಬೆಳಗಾಯಿತು ಅಥವಾ ಮೋಟಪ್ಪ (ಕನ್ನಡಿಗರ ಕಣಜದ 'ಉಗಾದಿ ಉಡುಗೊರೆ'ಯಿಂದ); ೫. ಅಜ್ಜಿ—ಅಜ್ಜ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಕೂಸುಮರಿ'ಯಿಂದ); ೬. ಮೊಸರು ಮಾರುವವಳು, ಉಪ್ಪಿಟ್ಟು ಅಥವಾ ಕಳ್ಳಿಪುರಿ (ಶ್ರೀ. ಟಿ. ಎಂ. ಆರ್. ಸ್ವಾಮಿಯವರ 'ಹಾವಾಡಿಗ'ದಿಂದ).

#### ೨ನೆಯ ಭಾಗ—೮ ವರ್ಷಕ್ಕೆ ಮೇಲ್ಪಟ್ಟ ಪ್ರೈ॥ ಸ್ಕೂಲು ಮಕ್ಕಳಿಗೆ

೧. ಕಾಳಗದ ಪದ ಅಥವಾ ರಂಗಸೆಟ್ಟಿಯಲ್ಲಿ ಯಾವುದಾದರೂ ಹತ್ತು ಪದ್ಯಗಳು (ಇಲಾಖೆಯ ಹೊಸ ಮೂರನೆಯ ರೀಡರಿನಿಂದ); ೨. ಚಿಣ್ಣ ತಮ್ಮಣ್ಣ ಅಥವಾ ಹಾವಿನ ಹಾಡು (ಇಲಾಖೆಯ ಎರಡನೆಯ ರೀಡರಿನಿಂದ); ೩. ಶುದ್ಧ ಪೋಲಿ ಸುಬ್ಬಣ್ಣ (ಶ್ರೀ॥ ರಾಜರತ್ನಂ ಅವರ 'ತುತ್ತೂರಿ'ಯಿಂದ); ೪. ತುಂಟ ತಿಮ್ಮ; ಕುರುಡು ಚೆನ್ನಿ ಅಥವಾ ಸಾಜಿ ಶಾಸ್ತ್ರಿ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಕೂಸುಮರಿ'ಯಿಂದ); ೫. ಹೊಗೆ ಬಂಡಿ ಅಥವಾ ಮುತ್ತಿನಸೆಟ್ಟಿ (ಕನ್ನಡಿಗರ ಕಣಜದ 'ಉಗಾದಿ ಉಡುಗೊರೆ'ಯಿಂದ); ೬. ಬಣ್ಣದ ಬುಗರಿ (ಕನ್ನಡಿಗರ ಕಣಜದ 'ಬಣ್ಣದ ಬುಗರಿ'ಯಿಂದ); ೭. ತಂಬೂರಿ, ಬ್ಲೋರೇಗೌಡ ಅಥವಾ ಹಣ್‌ಕಾಯೊಡಸ್ತೀನ್ಗಂಗಮ್ಮಾ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಹಾವಾಡಿಗ'ದಿಂದ).

#### ೩ನೆಯ ಭಾಗ—ಮಿಡಲ್ ಸ್ಕೂಲ್ ಮಕ್ಕಳಿಗೆ

೧. ಶ್ರೀ॥ ಕೆ. ವಿ. ಪುಟ್ಟಪ್ಪನವರ 'ಕುಮಾರವ್ಯಾಸ' (ಇಲಾಖೆಯ ಹೊಸ ಕನ್ನಡ ಆರನೆಯ ಪುಸ್ತಕದಿಂದ); ೨. ಶ್ರೀ॥ ವಿ. ಸೀ. ಅವರ 'ಭಾರತ ಜಗದಾಂಬ' (ಇಲಾಖೆಯ ಹೊಸ ಕನ್ನಡ ಐದನೆಯ ಪುಸ್ತಕದಿಂದ); ೩. ಶ್ರೀ॥ ಪಂಜೆಯವರ 'ಹೊಲೆಯನ ಹಾಡು' (ಇಲಾಖೆಯ ಹೊಸ ಕನ್ನಡ ನಾಲ್ಕನೆಯ ಪುಸ್ತಕದಿಂದ); ೪. ಸಾವಿತ್ರಿ ಚರಿತ್ರೆಯ ೫ನೆಯ ಆಶ್ವಾಸದಲ್ಲಿಯ ಯಾವುದಾದರೂ ನಾಲ್ಕು ಪದ್ಯಗಳು [ಮೇಲ್ಕಂಡ ಪದ್ಯಗಳಲ್ಲಿ ಪ್ರತಿ ಸ್ಪರ್ಧೆಗೂ ಯಾವುದಾದರೂ ಒಂದು ಪದ್ಯ ಮಾತ್ರ ಆರಿಸಿಕೊಳ್ಳತಕ್ಕದ್ದು.]

### ಬರವಣಿಗೆ ಸ್ಪರ್ಧೆ

೧. 'ವೀರ ಅಭಿಮನ್ಯು'—ಕೊನೆಯ ಎರಡು ಪ್ಯಾರಾ (ಇಲಾಖೆಯ ಹೊಸ ಕನ್ನಡ ಮೂರನೆಯ ರೀಡರಿನಿಂದ); ೨. 'ನಮ್ಮ ಮಹಾರಾಜರು'—ಕೊನೆಯ ನಾಲ್ಕು ಪ್ಯಾರಾ (ಇಲಾಖೆಯ ಹೊಸ ಕನ್ನಡ ಎರಡನೆಯ ರೀಡರಿಂದ); ೩. 'ಪ್ರಾಮಾಣಿಕನಾದ ಹುಡುಗ'; ಜೋಸೆಫ್ ಕತೆ—ಯಾವುದಾದರೂ ಒಂದು ಪ್ಯಾರಾ (ಇಲಾಖೆಯ ಹಳೆಯ ಮೂರನೆಯ ರೀಡರಿನಿಂದ).

**ಆರ್. ಕಲ್ಯಾಣಮ್ಮ,**
ಅಧ್ಯಕ್ಷರು.

**ಟಿ. ಎಂ. ಆರ್. ಸ್ವಾಮಿ,**
ಗೌ॥ ಕಾರ್ಯದರ್ಶಿ.

**ಜೆ. ಆನಂದವಲ್ಲಿಯಮ್ಮ ಸಾಧು,**
ವ್ಯವಸ್ಥಾಪಕರು,
ಅ॥ ಕ॥ ಮಕ್ಕಳ ಕೂಟದ ಸ್ಪರ್ಧೆಗಳು.

---

# ಸಂಗೀತ

## (ವಿದ್ವಾನ್ ವಾಸುದೇವಾಚಾರ್ಯರ ಉಪನ್ಯಾಸ)

[೨೭—೧೧—೧೯೩೮ರಂದು ಸಂಜೆ ಬೆಂಗಳೂರಿನ ಸಾಹಿತ್ಯ ಪರಿಷನ್ ಮಂದಿರದಲ್ಲಿ ಸಂಗೀತಶಾಸ್ತ್ರರತ್ನ ಸಂಗೀತ ವಿದ್ವಾನ್ ಶ್ರೀಮಾನ್ ಕಾನಕಾನಹಳ್ಳಿ ವಾಸುದೇವಾಚಾರ್ಯರು ಪ್ರೊಫೆಸರ್ ಎಲ್. ರಾಮರಾವ್, ಎಂ.ಎ, ಎಫ್.ಜಿ.ಎಸ್. ಅವರ ಅಧ್ಯಕ್ಷತೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರೋಪನ್ಯಾಸವಾಗಿ ಸಂಗೀತದ ಮೇಲೆ ಮಾಡಿದ ಭಾಷಣದ ಸಾರಾಂಶ]

ಈಗಿನ ನವನಾಗರಿಕತೆಯ ಫಲವಾಗಿ ಬೀದಿಬೀದಿಯಲ್ಲೂ ಮನೆಮನೆಯಲ್ಲೂ ಗ್ರಾಮಫೋನೂ ರೇಡಿಯೋವೂ ಇದ್ದು ಪ್ರತಿಯೊಬ್ಬರ ಕಿವಿಯಲ್ಲೂ ದೇಶವಿದೇಶಗಳ ಎಲ್ಲ ಬಗೆಯ ಸಂಗೀತವೂ ಬೀಳುತ್ತಿದೆ. ಮಕ್ಕಳ ಬಾಯಲ್ಲಿ ಕೂಡ ಸಂಗೀತಗಾರರ ಹೆಸರೂ ರೇಡಿಯೋ ಪ್ರೋಗ್ರಾಮೂ ಕೇಳಬರುತ್ತದೆ. ಸಂಗೀತದ ಇಷ್ಟು ಮಟ್ಟಿನ ವ್ಯಾಪ್ತಿಯಿಂದ ಅದಕ್ಕೆ ಕೊಂಚ ಕುಂದೂ ಆಗಿದೆಯೆನ್ನಬೇಕು. ಏಕೆಂದರೆ ಸುಬದ್ಧವೋ ಅಬದ್ಧವೋ ಆದ ಸಂಗೀತ ಎಲ್ಲರ ಬಾಯಲ್ಲೂ ಇದ್ದು ಎಲ್ಲರಿಗೂ ಪರಿಚಯವಾಗಿ ಅದರ ವಿಷಯದಲ್ಲಿ ಇರಬೇಕಾದ ಒಂದು ಉಚ್ಚಭಾವ ಹೋಗಿಬಿಟ್ಟಿದೆ. ಸಂಗೀತವೂ ಒಂದು ಶಾಸ್ತ್ರವೆ! ಅದಕ್ಕೆ ಲಕ್ಷ್ಯವೊಂದುಂಟೆ? ಅದನ್ನು ಕೃಷಿಮಾಡಿ ಸಾಧಿಸಬೇಕೇ ಎಂದು ಕೇಳುವವರೂ ಇದ್ದಾರೆ.

ತಂತಮ್ಮ ಬೇಸರವನ್ನೂ ಬಳಲಿಕೆಯನ್ನೂ ಕಳೆದುಕೊಳ್ಳುವುದಕ್ಕಾಗಿ ಪ್ರತಿಯೊಬ್ಬರೂ ತಮ್ಮ ಮನಬಂದ ರಾಗದಲ್ಲಿ ಹಾಡಿಕೊಳ್ಳುವುದು ಎಲ್ಲರಿಗೂ ತಿಳಿದ ವಿಷಯವೇ! ತಿಳಿದವರು ತಿಳಿಯದವರು, ಹಿರಿಯರು ಕಿರಿಯರು, ಮುದುಕರು ಮಕ್ಕಳು, ಹೆಂಗಸರು ಗಂಡಸರು—ಎಲ್ಲರೂ ಹಾಡಿನಿಂದ ನಲಿಯುತ್ತಾರೆ, ತಣಿಯುತ್ತಾರೆ. ಕಣದಲ್ಲಿ ಕಾಳೊಕ್ಕುವ ಬೇಸಾಯಗಾರ, ಕಲ್ಲೆತ್ತುವ ಕಲ್ಲೊಡ್ಡ-ಎಲ್ಲರೂ ತಂತಮ್ಮ ದುಡಿತವನ್ನು ಹಾಡಿಕೊಂಡು ಹಗುರಮಾಡಿಕೊಳ್ಳುತ್ತಾರೆ. ಕಾಳಸರ್ಪವೂ ಸಂಗೀತಕ್ಕೆ ತಲೆದೂಗುತ್ತದೆ. ಸಂಗೀತ ಶ್ರವಣದಿಂದ ಹಸು ಹಾಲು ಹೆಚ್ಚಾಗಿ ಕರೆಯುವುದೂ, ರೋಗ ಗುಣವಾಗುವುದೂ ಈಚಿನ ಪರಿಶೋಧನೆಯಿಂದ ತಿಳಿದುಬಂದ ಅಂಶಗಳಾಗಿವೆ. ಸೈನಿಕನೊಬ್ಬನು ಹೊಸ ಹೆಂಡತಿಯನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ ಯುದ್ಧಕ್ಕೆ ಬರಲು ತಪ್ಪಿಸಿಕೊಂಡನಂತೆ. ದಳಪತಿ ಅವನಿಗೆ ಶಿಕ್ಷೆ ಮಾಡುವುದಕ್ಕೆ ಬದಲಾಗಿ ಯುದ್ಧಕ್ಕೆ ಹೊರಡಬೇಕಾದ ದಿನ ಆ ಸೈನಿಕನ ಮನೆಯ ಮುಂದೆ ಯುದ್ಧ ಪ್ರಯಾಣದ ಗೀತವನ್ನು ನುಡಿಸಿದನಂತೆ. ಆ ಕಾಳಗದ ಕರೆ ಕೇಳಿದೊಡನೆಯೆ ಒಳಗಿದ್ದ ಸೈನಿಕ ಕೈದುತೊಟ್ಟು ಹೊರಟನಂತೆ. ಅಷ್ಟೇಕೆ! ನಮ್ಮವರ ಪ್ರಕಾರ ನಾದವೇ ಪರಬ್ರಹ್ಮ; ಪರಬ್ರಹ್ಮವೇ ನಾದ. ಶ್ರೀಕೃಷ್ಣ ವೇಣುಗಾನಲೋಲ; ಪರಮೇಶ್ವರ ನೃತ್ಯಲೋಲ, ನಟರಾಜ; ಬ್ರಹ್ಮ ಸಾಮಗಾನ ಪ್ರಿಯ. ನಮ್ಮ ಎಷ್ಟೋ ಸಂಸ್ಕಾರಗಳಲ್ಲಿ ಸಂಗೀತಕ್ಕೆ ಪ್ರಧಾನ ಸ್ಥಾನವಿದೆ. ವೇದಗಳನ್ನೆಲ್ಲ ಹಾಡುತ್ತಿದ್ದರು; ಋಗ್ವೇದವನ್ನು ಮೂರು ಸ್ವರಗಳಿಂದಲೂ, ಯಜುರ್ವೇದವನ್ನು ನಾಲ್ಕು ಸ್ವರಗಳಿಂದಲೂ, ಸಾಮವೇದವನ್ನು ಏಳು ಸ್ವರಗಳಿಂದಲೂ ಪಠಿಸುತ್ತಾರೆ. ಶತಪಥ ಬ್ರಾಹ್ಮಣ ತೈತ್ತರೀಯೋಪನಿಷತ್ತು ಮೊದಲಾದುವಗಳಲ್ಲಿ ವೀಣೆ, ದುಂದುಭಿ ಮೊದಲಾದ ವಾದ್ಯಗಳನ್ನು ಹೇಳಿದೆ; ನೂರು ತಂತಿಯ ವೀಣೆಯ ಪ್ರಸಂಗವಿದೆ.

ಪಶುಪಕ್ಷಿಗಳಲ್ಲಿ ಒಂದೊಂದರಲ್ಲಿ ಒಂದೊಂದು ಸ್ವರ ಮಾತ್ರ ನುಡಿಯುತ್ತದೆ. ಮನುಷ್ಯನಲ್ಲಿ ಎಲ್ಲ ಸ್ವರಗಳೂ ನುಡಿಯುತ್ತವೆ. ಈ ಸ್ವರಗಳ ಬಗೆ ಬಗೆಯ ವಿನ್ಯಾಸದಿಂದ ಸಂಗೀತ ಹುಟ್ಟುತ್ತದೆ. ಸಂಗೀತವೆಂದರೆ ಚೆನ್ನಾಗಿ ಹಾಡುವುದು ಎಂದರ್ಥವಲ್ಲ. ಗಾನ ವಾದನ ನರ್ತನಗಳ ಸಮ್ಮೇಳನಕ್ಕೆ ಸಂಗೀತವೆಂದು ಹೆಸರು. ತಾಳ ಅಥವಾ ಕಾಲವೇ ಸಂಗೀತಕ್ಕೆ ಮೂಲಾಧಾರ. ಭರತ ಶಾಸ್ತ್ರವೆಂದರೆ ಭಾವ ರಾಗ ತಾಳಗಳ ಶಾಸ್ತ್ರ. ಸಂಗೀತಗಾರನಿಗೆ ತಾಳಜ್ಞಾನ ರಾಗಜ್ಞಾನಗಳ ಜತೆಗೆ ಶಾಸ್ತ್ರಜ್ಞಾನವೂ ಸಾಹಿತ್ಯಜ್ಞಾನವೂ ಚೆನ್ನಾಗಿರಬೇಕು. ಸಾಹಿತ್ಯಜ್ಞಾನವಿಲ್ಲದೇ ಹಾಡಿದರೆ ಅಪಾರ್ಥವಾಗಿ ರಸಾಭಾಸವಾಗುತ್ತದೆ.

ನಮ್ಮ ಮೈಸೂರು ರಾಜಮನೆತನದವರು ಸಂಗೀತಕಲೆಗೆ ಅಪಾರ ಸಹಾಯ ಮಾಡಿದ್ದಾರೆ. ಅವರ ಔದಾರ್ಯ ಆಶ್ರಯಗಳಿಂದಲೇ ಕರ್ನಾಟಕ ಸಂಗೀತ ಇನ್ನೂ ಬದುಕಿದೆ. ಮುಮ್ಮಡಿ ಕೃಷ್ಣರಾಜ ವೊಡೆಯರೂ, ಚಾಮರಾಜ ವೊಡೆಯರೂ, ನಮ್ಮನ್ನಾಳುವ ಶ್ರೀ ನಾಲ್ಮಡಿ ಕೃಷ್ಣರಾಜ ವೊಡೆಯರೂ ಸಾವಿರಾರು ಸಂಗೀತಗಾರರಿಗೆ ಆಶ್ರಯವಿತ್ತು ಸಂಗೀತ ಕಲೆಯ ಬದುಕು ಬೆಳವಳಿಗೆಗಳಿಗೆ ಕಾರಣರಾಗಿ ಎಲ್ಲರ ಮೆಚ್ಚಿಕೆ ಕೊಂಡಾಟಗಳಿಗೆ ಪಾತ್ರರಾಗಿದ್ದಾರೆ.

# ಅಖಿಲ ಕರ್ನಾಟಕ ಮಕ್ಕಳ ಕೂಟ

## (ಮಕ್ಕಳ ಎರಡನೆಯ ಮಹಾಸಭೆ)

### ಕಂಠಪಾಠ ಮತ್ತು ಬರವಣಿಗೆ ಸ್ಪರ್ಧೆಗಳು

ಅಖಿಲ ಕರ್ನಾಟಕ ಮಕ್ಕಳ ಕೂಟದ ಎರಡನೆಯ ಮಹಾಸಭೆಯ ಪ್ರಯುಕ್ತ ಕಳೆದ ವರ್ಷದಂತೆಯೇ ಈ ವರ್ಷವೂ ಡಿಸೆಂಬರ್ ೩ನೆಯ ವಾರದಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿದೆ. ಹೆಚ್ಚು ಹೆಚ್ಚು ಮಕ್ಕಳು ಸ್ಪರ್ಧೆಗಳಲ್ಲಿ ಭಾಗವಹಿಸಿ ಅದರ ಉಪಯೋಗವನ್ನು ಹೊಂದುವಂತೆ ಮಕ್ಕಳನ್ನು ಪ್ರೋತ್ಸಾಹಿಸಬೇಕೆಂದು ತಾಯಿ-ತಂದೆಗಳಲ್ಲೂ, ಉಪಾಧ್ಯಾಯರಲ್ಲೂ ವಿನಂತಿ.

ಕಣಜದ ಮೆಂಬರಲ್ಲದವರಿಗೆ **ಸ್ಪರ್ಧೆಗೆ ಒಂದಾಣೆಯಂತೆ** ಪ್ರವೇಶ ಧನ. **ಡಿಸೆಂಬರ್ ೮ ರೊಳಗಾಗಿ** ಪ್ರಾರ್ಥನ ಪತ್ರಿಕೆ, ಬರವಣಿಗೆ ಕಾಗದ, ಹಣ ಇವು ವ್ಯವಸ್ಥಾಪಕರಿಗೆ ತಲಪಬೇಕು.

### ಕಂಠಪಾಠ ಸ್ಪರ್ಧೆ

**೧ನೆಯ ಭಾಗ—೮ ವರ್ಷಗಳ ಒಳಗಿನ ಪ್ರೈ॥ ಸ್ಕೂಲು ಮಕ್ಕಳಿಗೆ**

೧. ಚಂದು ಮಾಮ ಅಥವಾ ಹುಣ್ಣಿಮೆ ಹಪ್ಪಳ (ಶ್ರೀ. ರಾಜರತ್ನಂ ಅವರ 'ಕಂದನ ಕಾವ್ಯಮಾಲೆ' ಯಿಂದ); ೨. ಕುಂಟೆ (ಶ್ರೀ. ರಾಜರತ್ನಂ ಅವರ 'ತುತ್ತೂರಿ'ಯಿಂದ); ೩. ಅಂಬಾಲ್ ಅಥವಾ ಈ ಕತೆ (ಶ್ರೀ. ರಾಜರತ್ನಂ ಅವರ 'ಚುಟುಕ'ದಿಂದ); ೪. ಬೆಳಗಾಯಿತು ಅಥವಾ ಮೋಟಪ್ಪ (ಕನ್ನಡಿಗರ ಕಣಜದ 'ಉಗಾದಿ ಉಡುಗೊರೆ'ಯಿಂದ); ೫. ಅಜ್ಜಿ—ಅಜ್ಜ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಕೂಸುಮರಿ'ಯಿಂದ); ೬. ಮೊಸರು ಮಾರುವವಳು, ಉಪ್ಪಿಟ್ಟು ಅಥವಾ ಕಳ್ಳೆಪುರಿ (ಶ್ರೀ. ಟಿ. ಎಂ. ಆರ್. ಸ್ವಾಮಿಯವರ 'ಹಾವಾಡಿಗ'ದಿಂದ).

**೨ನೆಯ ಭಾಗ—೮ ವರ್ಷಕ್ಕೆ ಮೇಲ್ಪಟ್ಟ ಪ್ರೈ॥ ಸ್ಕೂಲು ಮಕ್ಕಳಿಗೆ**

೧. ಕಾಳಗದ ಪಹ ಅಥವಾ ರಂಗಸೆಟ್ಟಿಯಲ್ಲಿ ಯಾವುದಾದರೂ ಹತ್ತು ಪದ್ಯಗಳು (ಇಲಾಖೆಯ ಹೊಸ ಮೂರನೆಯ ರೀಡರಿನಿಂದ); ೨. ಸಣ್ಣ ತಮ್ಮಣ್ಣ ಅಥವಾ ಹಾವಿನ ಹಾಡು (ಇಲಾಖೆಯ ಎರಡನೆಯ ರೀಡರಿನಿಂದ); ೩. ಶುದ್ಧ ಪೋಲಿ ಸುಬ್ಬಣ್ಣ (ಶ್ರೀ॥ ರಾಜರತ್ನಂ ಅವರ 'ತುತ್ತೂರಿ'ಯಿಂದ); ೪. ತುಂಟ ತಿಮ್ಮ; ಕುರುಡು ಚೆನ್ನಿ ಅಥವಾ ಸಾಜಿ ಶಾಸ್ತ್ರಿ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಕೂಸುಮರಿ'ಯಿಂದ); ೫. ಹೊಗೆ ಬಂಡಿ ಅಥವಾ ಮುತ್ತಿನಸೆಟ್ಟಿ (ಕನ್ನಡಿಗರ ಕಣಜದ 'ಉಗಾದಿ ಉಡುಗೊರೆ'ಯಿಂದ); ೬. ಬಣ್ಣದ ಬುಗರಿ (ಕನ್ನಡಿಗರ ಕಣಜದ 'ಬಣ್ಣದ ಬುಗರಿ'ಯಿಂದ); ೭. ತಂಬೂರಿ, ಬೋರೇಗೌಡ ಅಥವಾ ಹಣ್ಕಾಯೊಡಸ್ತೀನ್ಗಂಗಮ್ಮಾ (ಶ್ರೀ॥ ಟಿ. ಎಂ. ಆರ್. ಸ್ವಾಮಿಯವರ 'ಹಾವಾಡಿಗ'ದಿಂದ).

**೩ನೆಯ ಭಾಗ—ಮಿಡಲ್ ಸ್ಕೂಲ್ ಮಕ್ಕಳಿಗೆ**

೧. ಶ್ರೀ॥ ಕೆ. ವಿ. ಪುಟ್ಟಪ್ಪನವರ 'ಕುಮಾರವ್ಯಾಸ' (ಇಲಾಖೆಯ ಹೊಸ ಕನ್ನಡ ಆರನೆಯ ಪುಸ್ತಕದಿಂದ); ೨. ಶ್ರೀ॥ ವಿ. ಸೀ. ಅವರ 'ಭಾರತ ಜಗದಾಂಬ' (ಇಲಾಖೆಯ ಹೊಸ ಕನ್ನಡ ಐದನೆಯ ಪುಸ್ತಕದಿಂದ); ೩. ಶ್ರೀ॥ ಪಂಜೆಯವರ 'ಹೊಲೆಯನ ಹಾಡು' (ಇಲಾಖೆಯ ಹೊಸ ಕನ್ನಡ ನಾಲ್ಕನೆಯ ಪುಸ್ತಕದಿಂದ); ೪. ಸಾವಿತ್ರಿ ಚರಿತ್ರೆಯ ೫ನೆಯ ಆಶ್ವಾಸದಲ್ಲಿಯ ಯಾವುದಾದರೂ ನಾಲ್ಕು ಪದ್ಯಗಳು [ಮೇಲ್ಕಂಡ ಪದ್ಯಗಳಲ್ಲಿ ಪ್ರತಿ ಸ್ಪರ್ಧೆಗೂ ಯಾವುದಾದರೂ ಒಂದು ಪದ್ಯ ಮಾತ್ರ ಆರಿಸಿಕೊಳ್ಳತಕ್ಕದ್ದು.]

### ಬರವಣಿಗೆ ಸ್ಪರ್ಧೆ

೧. 'ವೀರ ಅಭಿಮನ್ಯು'—ಕೊನೆಯ ಎರಡು ಪ್ಯಾರಾ (ಇಲಾಖೆಯ ಹೊಸ ಕನ್ನಡ ಮೂರನೆಯ ರೀಡರಿನಿಂದ); ೨. 'ನಮ್ಮ ಮಹಾರಾಜರು'—ಕೊನೆಯ ನಾಲ್ಕು ಪ್ಯಾರಾ (ಇಲಾಖೆಯ ಹೊಸ ಕನ್ನಡ ಎರಡನೆಯ ರೀಡರಿಂದ); ೩. 'ಪ್ರಾಮಾಣಿಕನಾದ ಹುಡುಗ'; ಜೋಸೆಫ್ ಕತೆ—ಯಾವುದಾದರೂ ಒಂದು ಪ್ಯಾರಾ (ಇಲಾಖೆಯ ಹಳೆಯ ಮೂರನೆಯ ರೀಡರಿನಿಂದ).

**ಆರ್. ಕಲ್ಯಾಣಮ್ಮ,**
ಅಧ್ಯಕ್ಷರು.

**ಟಿ. ಎಂ. ಆರ್. ಸ್ವಾಮಿ,**
ಗೌ॥ ಕಾರ್ಯದರ್ಶಿ.

**ಜೆ. ಆನಂದವಲ್ಲಿಯಮ್ಮ ಸಾಧು,**
ವ್ಯವಸ್ಥಾಪಕರು,
ಅ॥ ಕ॥ ಮಕ್ಕಳ ಕೂಟದ ಸ್ಪರ್ಧೆಗಳು.

---

# ಸಂಗೀತ

## (ವಿದ್ವಾನ್ ವಾಸುದೇವಾಚಾರ್ಯರ ಉಪನ್ಯಾಸ)

[೨೭—೧೧—೧೯೩೮ನೆಯ ಸಂಜೆ ಬೆಂಗಳೂರಿನ ಸಾಹಿತ್ಯ ಪರಿಷನ್ಮಂದಿರದಲ್ಲಿ ಸಂಗೀತಶಾಸ್ತ್ರರತ್ನ ಸಂಗೀತ ವಿದ್ವಾನ್ ಶ್ರೀಮಾನ್ ಕಾನಕಾನಹಳ್ಳಿ ವಾಸುದೇವಾಚಾರ್ಯರು ಪ್ರೊಫೆಸರ್ ಎಲ್. ರಾಮರಾವ್, ಎಂ.ಎ, ಎಫ್.ಜಿ.ಎಸ್. ಅವರ ಅಧ್ಯಕ್ಷತೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಪ್ರಚಾರೋಪನ್ಯಾಸವಾಗಿ ಸಂಗೀತದ ಮೇಲೆ ಮಾಡಿದ ಭಾಷಣದ ಸಾರಾಂಶ]

ಈಗಿನ ನವನಾಗರಿಕತೆಯ ಫಲವಾಗಿ ಬೀದಿಬೀದಿಯಲ್ಲೂ ಮನೆಮನೆಯಲ್ಲೂ ಗ್ರಾಮಫೋನೂ ರೇಡಿಯೋವೂ ಇದ್ದು ಪ್ರತಿಯೊಬ್ಬರ ಕಿವಿಯಲ್ಲೂ ದೇಶವಿದೇಶಗಳ ಎಲ್ಲ ಬಗೆಯ ಸಂಗೀತವೂ ಬೀಳುತ್ತಿದೆ. ಮಕ್ಕಳ ಬಾಯಲ್ಲಿ ಕೂಡ ಸಂಗೀತಗಾರರ ಹೆಸರೂ ರೇಡಿಯೋ ಪ್ರೋಗ್ರಾಮೂ ಕೇಳಬರುತ್ತದೆ. ಸಂಗೀತದ ಇಷ್ಟು ಮಟ್ಟಿನ ವ್ಯಾಪ್ತಿಯಿಂದ ಅದಕ್ಕೆ ಕೊಂಚ ಕುಂದೂ ಆಗಿದೆಯೆನ್ನಬೇಕು. ಏಕೆಂದರೆ ಸುಬದ್ಧವೋ ಅಬದ್ಧವೋ ಆದ ಸಂಗೀತ ಎಲ್ಲರ ಬಾಯಲ್ಲೂ ಇದ್ದು ಎಲ್ಲರಿಗೂ ಪರಿಚಯವಾಗಿ ಅದರ ವಿಷಯದಲ್ಲಿ ಇರಬೇಕಾದ ಒಂದು ಉಚ್ಚಭಾವ ಹೋಗಿಬಿಟ್ಟಿದೆ. ಸಂಗೀತವೂ ಒಂದು ಶಾಸ್ತ್ರವೆ! ಅದಕ್ಕೆ ಲಕ್ಷ್ಯವೊಂದುಂಟೆ? ಅದನ್ನು ಕೃಷಿಮಾಡಿ ಸಾಧಿಸಬೇಕೇ ಎಂದು ಕೇಳುವವರೂ ಇದ್ದಾರೆ.

ತಂತಮ್ಮ ಬೇಸರವನ್ನೂ ಬಳಲಿಕೆಯನ್ನೂ ಕಳೆದುಕೊಳ್ಳುವುದಕ್ಕಾಗಿ ಪ್ರತಿಯೊಬ್ಬರೂ ತಮ್ಮ ಮನಬಂದ ರಾಗದಲ್ಲಿ ಹಾಡಿಕೊಳ್ಳುವುದು ಎಲ್ಲರಿಗೂ ತಿಳಿದ ವಿಷಯವೇ! ತಿಳಿದವರು ತಿಳಿಯದವರು, ಹಿರಿಯರು ಕಿರಿಯರು, ಮುದುಕರು ಮಕ್ಕಳು, ಹೆಂಗಸರು ಗಂಡಸರು—ಎಲ್ಲರೂ ಹಾಡಿನಿಂದ ನಲಿಯುತ್ತಾರೆ, ತಣಿಯುತ್ತಾರೆ. ಕಣದಲ್ಲಿ ಕಾಳೊಕ್ಕುವ ಬೇಸಾಯಗಾರ, ಕಲ್ಲೆತ್ತುವ ಕಲ್ಲೊಡ್ಡ-ಎಲ್ಲರೂ ತಂತಮ್ಮ ದುಡಿತವನ್ನು ಹಾಡಿಕೊಂಡು ಹಗುರಮಾಡಿಕೊಳ್ಳುತ್ತಾರೆ. ಕಾಳಸರ್ಪವೂ ಸಂಗೀತಕ್ಕೆ ತಲೆದೂಗುತ್ತದೆ. ಸಂಗೀತ ಶ್ರವಣದಿಂದ ಹಸು ಹಾಲು ಹೆಚ್ಚಾಗಿ ಕರೆಯುವುದೂ, ರೋಗ ಗುಣವಾಗುವುದೂ ಈಚಿನ ಪರಿಶೋಧನೆಯಿಂದ ತಿಳಿದುಬಂದ ಅಂಶಗಳಾಗಿವೆ. ಸೈನಿಕನೊಬ್ಬನು ಹೊಸ ಹೆಂಡತಿಯನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ ಯುದ್ಧಕ್ಕೆ ಬರಲು ತಪ್ಪಿಸಿಕೊಂಡನಂತೆ. ದಳಪತಿ ಅವನಿಗೆ ಶಿಕ್ಷೆ ಮಾಡುವುದಕ್ಕೆ ಬದಲಾಗಿ ಯುದ್ಧಕ್ಕೆ ಹೊರಡಬೇಕಾದ ದಿನ ಆ ಸೈನಿಕನ ಮನೆಯ ಮುಂದೆ ಯುದ್ಧ ಪ್ರಯಾಣದ ಗೀತವನ್ನು ನುಡಿಸಿದನಂತೆ. ಆ ಕಾಳಗದ ಕರೆ ಕೇಳಿದೊಡನೆಯೆ ಒಳಗಿದ್ದ ಸೈನಿಕ ಕೈದುತೊಟ್ಟು ಹೊರಟನಂತೆ. ಅಷ್ಟೇಕೆ! ನಮ್ಮವರ ಪ್ರಕಾರ ನಾದವೇ ಪರಬ್ರಹ್ಮ; ಪರಬ್ರಹ್ಮವೇ ನಾದ. ಶ್ರೀಕೃಷ್ಣ ವೇಣುಗಾನಲೋಲ; ಪರಮೇಶ್ವರ ನೃತ್ಯಲೋಲ, ನಟರಾಜ; ಬ್ರಹ್ಮ ಸಾಮಗಾನಪ್ರಿಯ. ನಮ್ಮ ಎಷ್ಟೋ ಸಂಸ್ಕಾರಗಳಲ್ಲಿ ಸಂಗೀತಕ್ಕೆ ಪ್ರಧಾನ ಸ್ಥಾನವಿದೆ. ವೇದಗಳನ್ನೆಲ್ಲ ಹಾಡುತ್ತಿದ್ದರು; ಋಗ್ವೇದವನ್ನು ಮೂರು ಸ್ವರಗಳಿಂದಲೂ, ಯಜುರ್ವೇದವನ್ನು ನಾಲ್ಕು ಸ್ವರಗಳಿಂದಲೂ, ಸಾಮವೇದವನ್ನು ಏಳು ಸ್ವರಗಳಿಂದಲೂ ಪಠಿಸುತ್ತಾರೆ. ಶತಪಥ ಬ್ರಾಹ್ಮಣ ತೈತ್ತರೀಯೋಪನಿಷತ್ತು ಮೊದಲಾದುವುಗಳಲ್ಲಿ ವೀಣೆ, ದುಂದುಭಿ ಮೊದಲಾದ ವಾದ್ಯಗಳನ್ನು ಹೇಳಿದೆ; ನೂರು ತಂತಿಯ ವೀಣೆಯ ಪ್ರಸಂಗವಿದೆ.

ಪಶುಪಕ್ಷಿಗಳಲ್ಲಿ ಒಂದೊಂದರಲ್ಲಿ ಒಂದೊಂದು ಸ್ವರ ಮಾತ್ರ ನುಡಿಯುತ್ತದೆ. ಮನುಷ್ಯನಲ್ಲಿ ಎಲ್ಲ ಸ್ವರಗಳೂ ನುಡಿಯುತ್ತವೆ. ಈ ಸ್ವರಗಳ ಬಗೆ ಬಗೆಯ ವಿನ್ಯಾಸದಿಂದ ಸಂಗೀತ ಹುಟ್ಟುತ್ತದೆ. ಸಂಗೀತವೆಂದರೆ ಚೆನ್ನಾಗಿ ಹಾಡುವುದು ಎಂದರ್ಥವಲ್ಲ. ಗಾನ ವಾದನ ನರ್ತನಗಳ ಸಮ್ಮೇಳನಕ್ಕೆ ಸಂಗೀತವೆಂದು ಹೆಸರು. ತಾಳ ಅಥವಾ ಕಾಲವೇ ಸಂಗೀತಕ್ಕೆ ಮೂಲಾಧಾರ. ಭರತ ಶಾಸ್ತ್ರವೆಂದರೆ ಭಾವ ರಾಗ ತಾಳಗಳ ಶಾಸ್ತ್ರ. ಸಂಗೀತಗಾರನಿಗೆ ತಾಳಜ್ಞಾನ ರಾಗಜ್ಞಾನಗಳ ಜತೆಗೆ ಶಾಸ್ತ್ರಜ್ಞಾನವೂ ಸಾಹಿತ್ಯಜ್ಞಾನವೂ ಚೆನ್ನಾಗಿರಬೇಕು. ಸಾಹಿತ್ಯಜ್ಞಾನವಿಲ್ಲದೇ ಹಾಡಿದರೆ ಅಪಾರ್ಥವಾಗಿ ರಸಾಭಾಸವಾಗುತ್ತದೆ.

ನಮ್ಮ ಮೈಸೂರು ರಾಜಮನೆತನದವರು ಸಂಗೀತಕಲೆಗೆ ಅಪಾರ ಸಹಾಯ ಮಾಡಿದ್ದಾರೆ. ಅವರ ಔದಾರ್ಯ ಆಶ್ರಯಗಳಿಂದಲೇ ಕರ್ನಾಟಕ ಸಂಗೀತ ಇನ್ನೂ ಬದುಕಿದೆ. ಮುಮ್ಮಡಿ ಕೃಷ್ಣರಾಜ ವೊಡೆಯರೂ, ಚಾಮರಾಜ ವೊಡೆಯರೂ, ನಮ್ಮನ್ನಾಳುವ ಶ್ರೀ ನಾಲ್ಮಡಿ ಕೃಷ್ಣರಾಜ ವೊಡೆಯರೂ ಸಾವಿರಾರು ಸಂಗೀತಗಾರರಿಗೆ ಆಶ್ರಯವಿತ್ತು ಸಂಗೀತ ಕಲೆಯ ಬದುಕು ಬೆಳವಳಿಗೆಗಳಿಗೆ ಕಾರಣರಾಗಿ ಎಲ್ಲರ ಮೆಚ್ಚಿಕೆ ಕೊಂಡಾಟಗಳಿಗೆ ಪಾತ್ರರಾಗಿದ್ದಾರೆ.

# ಪರಿಷತ್ತಿನ ಸುದ್ದಿ

## ಸಾಹಿತ್ಯ ಸಮ್ಮೇಳನದ ತಾರೀಖು ಬದಲಾವಣೆ

ಇದೇ ಡಿಸೆಂಬರ್ ತಿಂಗಳು ೨೬ರಿಂದ ೨೮ರವರೆಗೆ ಹುಬ್ಬಳ್ಳಿಯಲ್ಲಿ ೧೩ನೆಯ ವೀರಶೈವ ಮಹಾಸಭೆ ನಡೆಯುವುದಷ್ಟೆ. ಅದಕ್ಕೂ ಸಮ್ಮೇಳನಕ್ಕೂ ತೊಡಕು ಉಂಟಾಗಬಾರದೆಂಬ ಉದ್ದೇಶದಿಂದ ಸಮ್ಮೇಳನದ ಆರಂಭವನ್ನು ೨೮ರಿಂದ ೨೯ಕ್ಕೆ ಮುಂದುವರಿಸಿದೆ. ಸಮ್ಮೇಳನ ೨೯, ೩೦, ೩೧ನೆಯ ತಾರೀಖುಗಳಲ್ಲಿ ನಡೆಯುವುದು. ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನವನ್ನು (೨೯ರಿಂದ) ೩೦ಕ್ಕೆ ಮುಂದುವರಿಸಲಾಗಿದೆ.

## 'ಶ್ರೀ'ಯವರಿಗೆ ಅಭಿನಂದನೆ

ಬೆಂಗಳೂರಿನ 'ಮಿತ್ರ ಸಂಘ', ಬೆಳಗಾವಿಯ ಕನ್ನಡ ಸಂಘ, ಮೈಸೂರು ಮಹಾರಾಣಿ ಕಾಲೇಜಿನ ಕರ್ನಾಟಕ ಸಂಘ, ಧಾರವಾಡದ ಇತಿಹಾಸ ಸಂಶೋಧಕ ಮಂಡಲ ಈ ಸಂಸ್ಥೆಗಳು "ಶ್ರೀ" ಯವರಿಗೆ 'ರಾಜಸೇವಾಸಕ್ತ' ಎಂಬ ಬಿರುದು ಬಂದದ್ದಕ್ಕಾಗಿ ಅಭಿನಂದನ ಸೂಚಕ ನಿರ್ಣಯಗಳನ್ನು ಕಳಿಸಿವೆ. ಈ ಸಂಸ್ಥೆಗಳೆಲ್ಲಕ್ಕೂ "ಶ್ರೀ"ಯವರು ತಮ್ಮ ಕೃತಜ್ಞತೆಯ ವಂದನೆಗಳನ್ನು ಈ ಮೂಲಕ ಸಲ್ಲಿಸಬಯಸುತ್ತಾರೆ.

## ರಾಜಸೇವಾಸಕ್ತ "ಶ್ರೀ" ಯವರಿಗೆ ಪರಿಷತ್ತಿನ ಪರವಾಗಿ ಅಭಿನಂದನಾ ಸಭೆ

ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗೆ ನಮ್ಮನ್ನಾಳುವ ಮಹಾಸ್ವಾಮಿಯವರು 'ರಾಜಸೇವಾಸಕ್ತ' ಎಂಬ ಬಿರುದನ್ನು ದಯಪಾಲಿಸಿರುವುದಕ್ಕಾಗಿ ಪರಿಷತ್ತಿನ ಸಂತೋಷ ಅಭಿನಂದನೆಗಳನ್ನು ವ್ಯಕ್ತಪಡಿಸಲು ಪರಿಷತ್ತಿನ ಪರವಾಗಿ ಬಳ್ಳಾರಿಯಲ್ಲಿ ಸಮ್ಮೇಳನ ಸಮಯದಲ್ಲಿ ಅಭಿನಂದನ ಸಭೆ ಏರ್ಪಡಿಸತಕ್ಕದ್ದೆಂದು ಕಾ॥ ಸ॥ ಮಂಡಲಿ ತೀರ್ಮಾನಿಸಿದೆ; ಮತ್ತು ಸಭೆಯ ಏರ್ಪಾಟಿನ ವಿವರಗಳನ್ನು ಗೊತ್ತುಮಾಡಲು ಅಖಿಲ ಕರ್ನಾಟಕದ ಪ್ರತಿನಿಧಿಗಳನ್ನುಳ್ಳ ಒಂದು ಸಮಿತಿಯನ್ನು ನೇಮಕ ಮಾಡಿದೆ.

## ಶ್ರೀ. ಲೋಕೂರ ಅವರಿಗೆ ಅಭಿನಂದನೆ

ಪರಿಷತ್ತಿನ ಸಹಾಯಕ ವರ್ಗದ ಸದಸ್ಯರಾದ, ಬೆಳಗಾವಿಯಲ್ಲಿ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜಿಯವರಾಗಿದ್ದ ಶ್ರೀ ನಾರಾಯಣ ಸ್ವಾಮಿರಾವ್ ಲೋಕೂರ ಅವರು ಬೊಂಬಾಯಿ ಹೈಕೋರ್ಟಿನ ಜಡ್ಜರವರಾಗಿ ನೇಮಕ ಹೊಂದಿದ್ದಾರೆ. ಇದು ಕನ್ನಡಿಗರಿಗೆಲ್ಲ ಅಭಿಮಾನಾಸ್ಪದವಾದ ಸಂಗತಿ. ಶ್ರೀ ಲೋಕೂರರವರಿಗೆ ಕನ್ನಡಿಗರ ಪರವಾಗಿ ಪರಿಷತ್ತಿನ ಹೃದಯ ಪೂರ್ವಕ ಅಭಿನಂದನೆಗಳು.

# ಪರಿಷತ್ತಿನ ಕಂಠಪಾಠ ಸ್ಪರ್ಧೆಗಳು.

## ಸ್ಪರ್ಧೆಗಳ ಫಲಿತಾಂಶ.

ಪರಿಷತ್ತಿನ ಈ ವರ್ಷದ ಕಂಠಪಾಠ ಸ್ಪರ್ಧೆಗಳು ಇದೇ ನವೆಂಬರ್ ತಾ॥ ೨೩, ೨೪, ೨೫, ೨೬ ಮತ್ತು ೨೮ನೆಯ ತಾರೀಖುಗಳಲ್ಲಿ ಬಹು ಯಶಸ್ವಿಯಾಗಿ ನಡೆದುವು. ಸ್ಪರ್ಧೆಗಳು ಪ್ರತಿ ದಿನವೂ ಸಂಜೆ ೫-೩೦ಕ್ಕೆ ಪ್ರಾರಂಭವಾಗಿ ಸುಮಾರು ೮—೩೦ರ ವರೆಗೂ ನಡೆಯುತ್ತಿದ್ದುವು; ಪರಿಷತ್ತಿನ ಸದಸ್ಯರಿಂದಲೂ ಅಭಿಮಾನಿಗಳಿಂದಲೂ, ವಿದ್ಯಾರ್ಥಿಗಳಿಂದಲೂ, ಉಪಾಧ್ಯಾಯರುಗಳಿಂದಲೂ ಮತ್ತು ಬಹುಮಂದಿ ಮಹಿಳೆಯರಿಂದಲೂ ಸಭೆ ಪ್ರತಿ ದಿನವೂ ತುಂಬಿ ತುಳುಕುತ್ತಿತ್ತು. ಮೇಲಿಂದ ಮೇಲೆ ಬರುತ್ತಿದ್ದ ಜನಸಂದಣಿಯನ್ನು ತಡೆಯಲಾಗದೆ ಕಡೆಯ ದಿನ ಸದಸ್ಯರಲ್ಲದವರಿಗೆ ಪ್ರವೇಶ ಶುಲ್ಕವನ್ನು ಹಾಕಬೇಕಾಯಿತು.

ಶ್ರೀ॥ ಗಳಾದ ಎಸ್. ವಿ. ರಂಗಣ್ಣ, ಎಂ. ಎ., ವಿ. ವೆಂಕಟಾಚಾರ್, ಎಂ. ಎ., ಬಿ. ಕಾಂ., ಕೆ. ವೆಂಕಟರಾಮಪ್ಪ, ಎಂ. ಎ., ಶ್ರೀಮತಿ ಆರ್. ಕಲ್ಯಾಣಮ್ಮನವರು, ಶ್ರೀಮತಿ ಎಸ್. ನಂಜಮ್ಮನವರು, ಬಿ. ಎ., ಎಲ್. ಟಿ. ಇವರುಗಳು ಸ್ಪರ್ಧೆಗಳ ಪರೀಕ್ಷಕರಾಗಿದ್ದುಕೊಂಡು ಸಹಾಯ ಮಾಡಿದರು. ಇವರಿಗೆ ಪರಿಷತ್ತಿನ ವಂದನೆಗಳು.

ಸ್ಪರ್ಧೆಗಳಲ್ಲಿ ಗೆದ್ದ ವಿದ್ಯಾರ್ಥಿಗಳ ಹೆಸರುಗಳನ್ನು, ಬಹುಮಾನ ಪಡೆದ ಕ್ರಮದಲ್ಲಿ, ಈ ಕೆಳಗೆ ಕೊಟ್ಟಿದೆ:—

### ಪ್ರೈಮರಿ ಸ್ಕೂಲ್—ಬಾಲಕರು:

೧. ಎನ್. ನಾಗರಾಜು (ಕೋಟೆ ಪ್ರೈಮರಿ ಬಾಯ್ಸ್ ಸ್ಕೂಲು); ೨. ಚಿಟ್ಟಿಸ್ವಾಮಿ (ಕೋಟೆ ಪ್ರೈಮರಿ ಬಾಯ್ಸ್ ಸ್ಕೂಲು), ೩. ಗೋಪಿನಾಥರಾವ್ (ಸೀಗೆಬೇಲಿ ಪ್ರೈಮರಿ ಬಾಯ್ಸ್ ಸ್ಕೂಲು); ೪. ಮೋಹನ (ಬಸವನಗುಡಿ ಪ್ರೈಮರಿ ಸ್ಕೂಲು); ೫. ಗುಂಡೂರಾವ್ (ದೊಡ್ಡಮಾವಳ್ಳಿ ಪ್ರೈಮರಿ ಸ್ಕೂಲು); ೬. ಕೆಂಪಣ್ಣ (ಕೋಟೆ ಪ್ರೈಮರಿ ಸ್ಕೂಲು); ೭. ಸಿ. ಪಿ. ನಾರಾಯಣಸ್ವಾಮಿ (ಸೀಗೆಬೇಲಿ ಪ್ರೈಮರಿ ಸ್ಕೂಲು); ೮. ರುಕ್ಮಾಂಗದ (ಕೋಟೆ ಪ್ರೈಮರಿ ಸ್ಕೂಲು); ೯. ವೆಂಕಟಾಚಲ (ಬಸವನಗುಡಿ ಪ್ರೈಮರಿ ಸ್ಕೂಲು); ೧೦. ಮಲ್ಲಿಕಾರ್ಜುನಯ್ಯ (ಸೀಗೆಬೇಲಿ ಪ್ರೈಮರಿ ಸ್ಕೂಲು); ೧೧. ಭದ್ರಯ್ಯ (ಕೋಟೆ ಪ್ರೈಮರಿ ಸ್ಕೂಲು); ೧೨. ಬಸವಯ್ಯ (ಬಸವನಗುಡಿ ಪ್ರೈ॥ ಸ್ಕೂಲು).

### ಪ್ರೈಮರಿ ಸ್ಕೂಲ್—ಬಾಲಕಿಯರು:

೧. ಎನ್. ಲಲಿತಮ್ಮ (ಮಲ್ಲೇಶ್ವರಂ ಮುನಿಸಿಪಲ್ ಕನ್ನಡ ಪ್ರೈಮರಿ ಗರ್ಲ್ಸ್ ಸ್ಕೂಲು.) ೨. ಎಸ್. ಲಕ್ಷ್ಮಿ (ಪ್ರೈಮರಿ ಬಾಯ್ಸ್ ಸ್ಕೂಲ್, ಕೋಟೆ), ೩. ಬಿ. ಕೆ. ಶಾರದಮ್ಮ (ಮಲ್ಲೇಶ್ವರಂ ಮುನಿಸಿಪಲ್ ಪ್ರೈಮರಿ ಗರ್ಲ್ಸ್ ಸ್ಕೂಲು) ೪. ಅಣ್ಣಮ್ಮ (ನಾರಾಯಣಶೆಟ್ಟಿ ಪೇಟೆ ಪ್ರೈಮರಿ ಗರ್ಲ್ಸ್ ಸ್ಕೂಲು); ೫. ಎಚ್. ಆರ್. ಚೂಡಾಮಣಿ (ಸೀಗೆಬೇಲಿ ಪ್ರೈಮರಿ ಬಾಯ್ಸ್ ಸ್ಕೂಲ್) ೬. ಚೂಡಾಮಣಿ (ಮಲ್ಲೇಶ್ವರಂ ಮುನಿಸಿಪಲ್ ಕನ್ನಡ ಪ್ರೈಮರಿ, ಗರ್ಲ್ಸ್ ಸ್ಕೂಲು); ೭. ಕಮಲ ೮. ಪುಟ್ಟಮ್ಮ, (ದೊಡ್ಡಮಾವಳ್ಳಿ ಪ್ರೈಮರಿ ಬಾಯ್ಸ್ ಸ್ಕೂಲು); ೯. ಎಂ. ಎಸ್. ಸರೋಜ (ಶೇಷಾದ್ರಿಪುರಂ ಸ್ತ್ರೀ ಸಮಾಜ); ೧೦. ಡಿ. ಜಯಮ್ಮ (ಆರ್ಯ ಬಾಲಿಕಾ ಪಾಠಶಾಲೆ, ಸುಲ್ತಾನ್ ಪೇಟೆ); ೧೧. ಎಸ್. ನಾಗರತ್ನಮ್ಮ (ಪ್ರೈಮರಿ ಬಾಯ್ಸ್ ಸ್ಕೂಲ್, ಕೋಟೆ); ೧೨. ಬಿ. ಆರ್. ಪ್ರಮೀಳಾ (ಶೇಷಾದ್ರಿಪುರಂ ಸ್ತ್ರೀ ಸಮಾಜ); ೧೩. ಎಸ್. ಚಂಪಕಾಬಾಯಿ (ಶಂಕರಪುರ ಪ್ರೈಮರಿ ಬಾಯ್ಸ್ ಸ್ಕೂಲು); ೧೪. ಇಂದಿರಮ್ಮ (ಪ್ರೈಮರಿ ಬಾಯ್ಸ್ ಸ್ಕೂಲು, ಕೋಟೆ)

### ಮಿಡಲ್ ಸ್ಕೂಲ್—ಬಾಲಕರು:

೧. ಲಕ್ಷ್ಮಣರಾವ್, ೨. ಎಂ. ಪಿ. ಕೃಷ್ಣಮೂರ್ತಿ, ೩. ಬಿ. ಎಸ್. ಶ್ರೀನಿವಾಸಮೂರ್ತಿ, ೪. ಗೋಪಾಲಕೃಷ್ಣ (ಚಾಮರಾಜಪೇಟೆ ಮಿಡಲ್ ಸ್ಕೂಲ್) ೫. ಸಿ. ಕೃಷ್ಣಮೂರ್ತಿ (ಮಲ್ಲೇಶ್ವರಂ ಮಿಡಲ್ ಸ್ಕೂಲ್), ೬. ಬಿ. ಕೃಷ್ಣರಾವ್ (ಆಚಾರ್ಯ ಪಾಠಶಾಲೆ, ಬಸವನಗುಡಿ) ೭. ಎಸ್. ಶಿವನಂಜಪ್ಪ (ಎಸ್. ಎಲ್. ಎನ್. ಮಿಡಲ್ ಸ್ಕೂಲ್).

### ಮಿಡಲ್ ಸ್ಕೂಲ್—ಬಾಲಕಿಯರು:

೧. ತಾರಾಬಾಯಿ (ಶ್ರೀನಿವಾಸ ಎಜ್ಯುಕೇಷನಲ್ ಇನ್‌ಸ್ಟಿಟ್ಯೂಟ್); ೨. ಸಿ. ಎಸ್. ಲೀಲ (ಚಾಮರಾಜಪೇಟೆ ಮಿಡಲ್ ಸ್ಕೂಲು); ೩. ಎಸ್. ರಾಜಮ್ಮ (ಸೆಂಟ್ ಥೆರಿಸ ಕಾನ್ವೆಂಟ್ ಸ್ಕೂಲು); ೪. ಟಿ. ಎಸ್. ಸರೋಜಿನಿ ದೇವಿ, ೫. ಎಚ್. ರತ್ನ, ೬. ಬಿ. ಶಾಂತ (ಶ್ರೀನಿವಾಸ ಎಜ್ಯುಕೇಷನಲ್ ಇನ್‌ಸ್ಟಿಟ್ಯೂಟ್) ೭. ಲಕ್ಷ್ಮೀದೇವಮ್ಮ, ೮. ಎಂ. ಎನ್. ಅನ್ನಪೂರ್ಣ; (ಬಸವನಗುಡಿ ಮಿಡಲ್ ಸ್ಕೂಲ್). ೯. ಕೆ. ಎನ್. ಧರ್ಮಾಂಬ (ಚಾಮರಾಜಪೇಟೆ ಮಿಡಲ್ ಸ್ಕೂಲ್).

### ಹೈಸ್ಕೂಲ್—ಬಾಲಕರು:

೧. ಬದರಿನಾಥ್ (ಎಸ್. ಎಲ್. ಎನ್.); ೨. ಜಿ. ಎಸ್. ಆದಿನಾರಾಯಣ. ೩. ಬಿ. ಎಸ್. ಅಶ್ವತ್ಥನಾರಾಯಣ (ಸೆಂಟ್ರಲ್). ೪. ಎ. ಜಿ. ಜಂಬುತೀರ್ಥ, (ಎಸ್. ಎಲ್. ಎನ್.) ೫. ಜಾನ್ ವಿಲ್ಸನ್ (ಯುನೈಟೆಡ್ ಮಿಷನ್).

### ಹೈಸ್ಕೂಲ್—ಬಾಲಕಿಯರು:

೧. ಪುಟ್ಟತಾಯಮ್ಮ; ೨. ಸೀತಮ್ಮ; ೩. ರತ್ನ, ೪. ತಂಗಮ್ಮ (ವಾಣಿವಿಲಾಸ ಇನ್‌ಸ್ಟಿಟ್ಯೂಟ್).

ಬೆಂಗಳೂರು ಮಾರುತಿ ಜ್ಯೂಯೆಲರಿ ಹಾಲಿನ ಒಡೆಯರು ಶ್ರೀಮಾನ್ ಎಸ್. ಶಾಮಯ್ಯನವರ ಪರ್ಯಾಯ ಪಾರಿತೋಷಿಕ (ಬೆಳ್ಳಿಯ ಬಟ್ಟಲು) ಈ ಸಲ ಒಟ್ಟಿನಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಾಣೀವಿಲಾಸ ಇನ್‌ಸ್ಟಿಟ್ಯೂಟ್‌ಗೆ ದೊರೆತಿದೆ.

ತಾ॥ ೨೮—೧೧—೧೯೩೭ರ ಸಂಜೆ, ಸ್ಪರ್ಧೆಗಳು ಮುಗಿದ ಬಳಿಕ ಸ್ಪರ್ಧೆಗಳ ವ್ಯವಸ್ಥಾಪಕರಾಗಿದ್ದ ಶ್ರೀಮಾನ್ ವಿ. ಟಿ. ತಿರುನಾರಾಯಣಯ್ಯಂಗಾರ್, ಎಂ.ಎ., ಅವರು ಸಭಿಕರೆಲ್ಲರಿಗೂ ವಂದನೆಗಳನ್ನು ಸಮರ್ಪಿಸಿ, ಹೋದ ವರ್ಷಕ್ಕಿಂತ ಈ ವರ್ಷ ಕಂಠಪಾಠ ಸ್ಪರ್ಧೆಗಳಲ್ಲಿ ಒಂದಕ್ಕೆ ಎರಡರಷ್ಟು ಮಂದಿ ಬಾಲಕ ಬಾಲಕಿಯರು ಭಾಗವಹಿಸಿರುವುದು ಅತ್ಯಂತ ಸಂತೋಷದ ಸಂಗತಿಯೆಂದು ತಿಳಿಸಿ, ಹೀಗೆಯೇ ಇನ್ನು ಮೇಲೂ ಬಾಲಕ ಬಾಲಕಿಯರು ಸ್ಪರ್ಧೆಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸಬೇಕೆಂದೂ ಈಬಗ್ಗೆ ಉಪಾಧ್ಯಾಯರೂ ತಾಯಿತಂದೆಗಳೂ ಪ್ರೋತ್ಸಾಹ ಕೊಡಬೇಕೆಂದೂ ಕೋರಿದರು.

ಕೊನೆಯಲ್ಲಿ, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಸ್ಪರ್ಧೆಗಳನ್ನು ಯಶಸ್ವಿಯಾಗಿ ನಡೆಸಿಕೊಟ್ಟದ್ದಕ್ಕಾಗಿ ವ್ಯವಸ್ಥಾಪಕರಾದ ಶ್ರೀ॥ ವಿ. ಟಿ. ತಿರುನಾರಾಯಣಯ್ಯಂಗಾರ್ಯರವರಿಗೂ, ಪರೀಕ್ಷಕರಿಗೂ, ಮತ್ತು ಸ್ಪರ್ಧೆಗಳನ್ನು ಪ್ರೋತ್ಸಾಹಿಸಿದ ಶಾಲಾ ಉಪಾಧ್ಯಾಯರಿಗೂ ತಾಯಿತಂದೆಗಳಿಗೂ, ಮತ್ತು ಇತರ ಬಗೆಯಲ್ಲಿ ಸಹಕಾರವಿತ್ತ ಎಲ್ಲ ಮಿತ್ರರಿಗೂ ಪರಿಷತ್ತಿನ ಪರವಾಗಿ ತಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸಿದರು; ಮತ್ತು ಈ ಕಂಠಪಾಠಸ್ಪರ್ಧೆ ದಿನೇ ದಿನೇ ಹೆಚ್ಚು ಆಕರ್ಷಣೀಯವಾಗುತ್ತಿರುವುದು ತಮಗೂ ಮತ್ತು ಎಲ್ಲರಿಗೂ ಬಹು ಹರ್ಷದಾಯಕವಾಗಿದೆಯೆಂದೂ, ಮಕ್ಕಳೂ ಮಹಿಳೆಯರೂ ಹೀಗೆ ಆಗಿಂದಾಗ್ಗೆ ಸೇರಿ ಸಂತೋಷಪಡಲು ಅವಕಾಶ ಕಲ್ಪಿಸಿಕೊಡಬೇಕೆಂದು ಪರಿಷತ್ತಿನ ಉದ್ದೇಶವೆಂದೂ ಹೇಳಿದರು.

—ಪ್ರಕಟನ ಶಾಖೆಯಿಂದ.

ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ,
ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಪರಿಷತ್ತಿನ ಸುದ್ದಿ

## ಸಾಹಿತ್ಯ ಸಮ್ಮೇಳನದ ತಾರೀಖು ಬದಲಾವಣೆ

ಇದೇ ಡಿಸೆಂಬರ್ ತಿಂಗಳು ೨೬ರಿಂದ ೨೮ರವರೆಗೆ ಹುಬ್ಬಳ್ಳಿಯಲ್ಲಿ ೧೪ನೆಯ ವೀರಶೈವ ಮಹಾಸಭೆ ನಡೆಯುವುದಷ್ಟೆ. ಅದಕ್ಕೂ ಸಮ್ಮೇಳನಕ್ಕೂ ತೊಡಕು ಉಂಟಾಗಬಾರದೆಂಬ ಉದ್ದೇಶದಿಂದ ಸಮ್ಮೇಳನದ ಆರಂಭವನ್ನು ೨೮ರಿಂದ ೨೯ಕ್ಕೆ ಮುಂದುವರಿಸಿದೆ. ಸಮ್ಮೇಳನ ೨೯, ೩೦, ೩೧ನೆಯ ತಾರೀಖುಗಳಲ್ಲಿ ನಡೆಯುವುದು. ಪರಿಷತ್ತಿನ ಸಕಲ ಸದಸ್ಯರ ವಾರ್ಷಿಕಾಧಿವೇಶನವನ್ನು (೨೯ರಿಂದ) ೩೦ಕ್ಕೆ ಮುಂದುವರಿಸಲಾಗಿದೆ.

## 'ಶ್ರೀ'ಯವರಿಗೆ ಅಭಿನಂದನೆ

ಬೆಂಗಳೂರಿನ 'ಮಿತ್ರ ಸಂಘ', ಬೆಳಗಾವಿಯ ಕನ್ನಡ ಸಂಘ, ಮೈಸೂರು ಮಹಾರಾಣಿ ಕಾಲೇಜಿನ ಕರ್ನಾಟಕ ಸಂಘ, ಧಾರವಾಡದ ಇತಿಹಾಸ ಸಂಶೋಧಕ ಮಂಡಲ ಈ ಸಂಸ್ಥೆಗಳು "ಶ್ರೀ" ಯವರಿಗೆ 'ರಾಜಸೇವಾಸಕ್ತ' ಎಂಬ ಬಿರುದು ಬಂದದ್ದಕ್ಕಾಗಿ ಅಭಿನಂದನ ಸೂಚಕ ನಿರ್ಣಯಗಳನ್ನು ಕಳಿಸಿದ್ದಾರೆ. ಈ ಸಂಸ್ಥೆಗಳೆಲ್ಲಕ್ಕೂ "ಶ್ರೀ"ಯವರು ತಮ್ಮ ಕೃತಜ್ಞತೆಯ ವಂದನೆಗಳನ್ನು ಈ ಮೂಲಕ ಸಲ್ಲಿಸಲಿಚ್ಛಿಸುತ್ತಾರೆ.

## ರಾಜಸೇವಾಸಕ್ತ "ಶ್ರೀ" ಯವರಿಗೆ ಪರಿಷತ್ತಿನ ಪರವಾಗಿ ಅಭಿನಂದನಾ ಸಭೆ

ಪರಿಷತ್ತಿನ ಉಪಾಧ್ಯಕ್ಷರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರಿಗೆ ನಮ್ಮನ್ನಾಳುವ ಮಹಾಸ್ವಾಮಿಯವರು 'ರಾಜಸೇವಾಸಕ್ತ' ಎಂಬ ಬಿರುದನ್ನು ದಯಪಾಲಿಸಿರುವುದಕ್ಕಾಗಿ ಪರಿಷತ್ತಿನ ಸಂತೋಷ ಅಭಿನಂದನೆಗಳನ್ನು ವ್ಯಕ್ತಪಡಿಸಲು ಪರಿಷತ್ತಿನ ಪರವಾಗಿ ಬಳ್ಳಾರಿಯಲ್ಲಿ ಸಮ್ಮೇಳನ ಸಮಯದಲ್ಲಿ ಅಭಿನಂದನ ಸಭೆ ಏರ್ಪಡಿಸತಕ್ಕದ್ದೆಂದು ಕಾ|| ಸಮಿತಿ ಮಂಡಲಿ ತೀರ್ಮಾನಿಸಿದೆ; ಮತ್ತು ಸಭೆಯ ಏರ್ಪಾಟಿನ ವಿವರಗಳನ್ನು ಗೊತ್ತುಮಾಡಲು ಅಖಿಲ ಕರ್ನಾಟಕದ ಪ್ರತಿನಿಧಿಗಳನ್ನುಳ್ಳ ಒಂದು ಸಮಿತಿಯನ್ನು ನೇಮಕ ಮಾಡಿದೆ.

## ಶ್ರೀ. ಲೋಕೂರ ಅವರಿಗೆ ಅಭಿನಂದನೆ

ಪರಿಷತ್ತಿನ ಸಹಾಯಕ ವರ್ಗದ ಸದಸ್ಯರಾದ, ಬೆಳಗಾವಿಯಲ್ಲಿ ಡಿಸ್ಟ್ರಿಕ್ಟ್ ಮತ್ತು ಸೆಷನ್ಸ್ ಜಡ್ಜಿಯವರಾಗಿದ್ದ ಶ್ರೀ ನಾರಾಯಣ ಸ್ವಾಮಿರಾವ್ ಲೋಕೂರ ಅವರು ಬೊಂಬಾಯಿ ಹೈಕೋರ್ಟಿನ ಜಡ್ಜರವರಾಗಿ ನೇಮಕ ಹೊಂದಿದ್ದಾರೆ. ಇದು ಕನ್ನಡಿಗರಿಗೆಲ್ಲ ಅಭಿಮಾನಾಸ್ಪದವಾದ ಸಂಗತಿ. ಶ್ರೀ ಲೋಕೂರರವರಿಗೆ ಕನ್ನಡಿಗರ ಪರವಾಗಿ ಪರಿಷತ್ತಿನ ಹೃದಯ ಪೂರ್ವಕ ಅಭಿನಂದನೆಗಳು.

# ಪರಿಷತ್ತಿನ ಕಂಠಪಾಠ ಸ್ಪರ್ಧೆಗಳು.

## ಸ್ಪರ್ಧೆಗಳ ಫಲಿತಾಂಶ.

ಪರಿಷತ್ತಿನ ಈ ವರ್ಷದ ಕಂಠಪಾಠ ಸ್ಪರ್ಧೆಗಳು ಇದೇ ನವೆಂಬರ್ ತಾ|| ೨೩, ೨೪, ೨೫, ೨೬ ಮತ್ತು ೨೮ನೆಯ ತಾರೀಖುಗಳಲ್ಲಿ ಬಹು ಯಶಸ್ವಿಯಾಗಿ ನಡೆದುವು. ಸ್ಪರ್ಧೆಗಳು ಪ್ರತಿ ದಿನವೂ ಸಂಜೆ ೫-೩೦ಕ್ಕೆ ಪ್ರಾರಂಭವಾಗಿ ಸುಮಾರು ೮—೩೦ರ ವರೆಗೂ ನಡೆಯುತ್ತಿದ್ದುವು; ಪರಿಷತ್ತಿನ ಸದಸ್ಯರಿಂದಲೂ ಅಭಿಮಾನಿಗಳಿಂದಲೂ, ವಿದ್ಯಾರ್ಥಿಗಳಿಂದಲೂ, ಉಪಾಧ್ಯಾಯರುಗಳಿಂದಲೂ ಮತ್ತು ಬಹುಮಂದಿ ಮಹಿಳೆಯರಿಂದಲೂ ಸಭೆ ಪ್ರತಿ ದಿನವೂ ತುಂಬಿ ತುಳುಕುತ್ತಿತ್ತು. ಮೇಲಿಂದ ಮೇಲೆ ಬರುತ್ತಿದ್ದ ಜನಸಂದಣಿಯನ್ನು ತಡೆಯಲಾಗದೆ ಕಡೆಯ ದಿನ ಸದಸ್ಯರಲ್ಲದವರಿಗೆ ಪ್ರವೇಶ ಶುಲ್ಕವನ್ನು ಹಾಕಬೇಕಾಯಿತು.

ಶ್ರೀ|| ಗಳಾದ ಎಸ್. ವಿ. ರಂಗಣ್ಣ, ಎಂ. ಎ., ವಿ. ವೆಂಕಟಾಚಾರ್, ಎಂ. ಎ., ಬಿ. ಕಾಂ., ಕೆ. ವೆಂಕಟರಾಮಪ್ಪ, ಎಂ. ಎ., ಶ್ರೀಮತಿ ಆರ್. ಕಲ್ಯಾಣಮ್ಮನವರು, ಶ್ರೀಮತಿ ಎಸ್. ನಂಜಮ್ಮನವರು, ಬಿ. ಎ., ಎಲ್. ಟಿ. ಇವರುಗಳು ಸ್ಪರ್ಧೆಗಳ ಪರೀಕ್ಷಕರಾಗಿದ್ದುಕೊಂಡು ಸಹಾಯ ಮಾಡಿದರು. ಇವರಿಗೆ ಪರಿಷತ್ತಿನ ವಂದನೆಗಳು.

ಸ್ಪರ್ಧೆಗಳಲ್ಲಿ ಗೆದ್ದ ವಿದ್ಯಾರ್ಥಿಗಳ ಹೆಸರುಗಳನ್ನು, ಬಹುಮಾನ ಪಡೆದ ಕ್ರಮದಲ್ಲಿ, ಈ ಕೆಳಗೆ ಕೊಟ್ಟಿದೆ:—

### ಪ್ರೈಮರಿ ಸ್ಕೂಲ್—ಬಾಲಕರು:

೧. ಎಸ್. ನಾಗರಾಜು (ಕೋಟೆ ಪ್ರೈಮರಿ ಬಾಯ್ಸ್ ಸ್ಕೂಲು); ೨. ಚಿಟ್ಟಿಸ್ವಾಮಿ (ಕೋಟೆ ಪ್ರೈಮರಿ ಬಾಯ್ಸ್ ಸ್ಕೂಲು), ೩. ಗೋಪಿನಾಥರಾವ್ (ಸೀಗೆಬೇಲಿ ಪ್ರೈಮರಿ ಬಾಯ್ಸ್ ಸ್ಕೂಲು); ೪. ಮೋಹನ (ಬಸವನಗುಡಿ ಪ್ರೈಮರಿ ಸ್ಕೂಲು); ೫. ಗುಂಡೂರಾವ್ (ದೊಡ್ಡಮಾವಳ್ಳಿ ಪ್ರೈಮರಿ ಸ್ಕೂಲು); ೬. ಕೆಂಪಣ್ಣ (ಕೋಟೆ ಪ್ರೈಮರಿ ಸ್ಕೂಲು); ೭. ಸಿ. ಪಿ. ನಾರಾಯಣಸ್ವಾಮಿ (ಸೀಗೆಬೇಲಿ ಪ್ರೈಮರಿ ಸ್ಕೂಲು); ೮. ರುಕ್ಮಾಂಗದ (ಕೋಟೆ ಪ್ರೈಮರಿ ಸ್ಕೂಲು); ೯. ವೆಂಕಟಾಚಲ (ಬಸವನಗುಡಿ ಪ್ರೈಮರಿ ಸ್ಕೂಲು); ೧೦. ಮಲ್ಲಿಕಾರ್ಜುನಯ್ಯ (ಸೀಗೆಬೇಲಿ ಪ್ರೈಮರಿ ಸ್ಕೂಲು); ೧೧. ಭದ್ರಯ್ಯ (ಕೋಟೆ ಪ್ರೈಮರಿ ಸ್ಕೂಲು); ೧೨. ಬಸವಯ್ಯ (ಬಸವನಗುಡಿ ಪ್ರೈ|| ಸ್ಕೂಲು).

### ಪ್ರೈಮರಿ ಸ್ಕೂಲ್—ಬಾಲಕಿಯರು:

೧. ಎಸ್. ಲಲಿತಮ್ಮ (ಮಲ್ಲೇಶ್ವರಂ ಮುನಿಸಿಪಲ್ ಕನ್ನಡ ಪ್ರೈಮರಿ ಗರ್ಲ್ಸ್ ಸ್ಕೂಲು) ೨. ಎಸ್. ಲಕ್ಷ್ಮಿ (ಪ್ರೈಮರಿ ಬಾಯ್ಸ್ ಸ್ಕೂಲ್, ಕೋಟೆ), ೩. ಬಿ. ಕೆ. ಶಾರದಮ್ಮ (ಮಲ್ಲೇಶ್ವರಂ ಮುನಿಸಿಪಲ್ ಪ್ರೈಮರಿ ಗರ್ಲ್ಸ್ ಸ್ಕೂಲು) ೪. ಅಣ್ಣಮ್ಮ (ನಾರಾಯಣಶೆಟ್ಟಿಪೇಟೆ ಪ್ರೈಮರಿ ಗರ್ಲ್ಸ್ ಸ್ಕೂಲು); ೫. ಎಚ್. ಆರ್. ಜೂಜಾಮಣಿ (ಸೀಗೆಬೇಲಿ ಪ್ರೈಮರಿ ಬಾಯ್ಸ್ ಸ್ಕೂಲ್) ೬. ಜೂಜಾಮಣಿ (ಮಲ್ಲೇಶ್ವರಂ ಮುನಿಸಿಪಲ್ ಕನ್ನಡ ಪ್ರೈಮರಿ, ಗರ್ಲ್ಸ್ ಸ್ಕೂಲು); ೭. ಕಮಲ ೮. ಪುಟ್ಟಮ್ಮ, (ದೊಡ್ಡಮಾವಳ್ಳಿ ಪ್ರೈಮರಿ ಬಾಯ್ಸ್ ಸ್ಕೂಲು); ೯. ಎಂ. ಎಸ್. ಸರೋಜ (ಶೇಷಾದ್ರಿಪುರಂ ಸ್ತ್ರೀ ಸಮಾಜ); ೧೦. ವಿ. ಜಯಮ್ಮ (ಆರ್ಯ ಬಾಲಿಕಾ ಪಾಠಶಾಲೆ, ಸುಲ್ತಾನ್ ಪೇಟೆ); ೧೧. ಎಸ್. ನಾಗರತ್ನಮ್ಮ (ಪ್ರೈಮರಿ ಬಾಯ್ಸ್ ಸ್ಕೂಲ್, ಕೋಟೆ); ೧೨. ಜಿ. ಆರ್. ಪ್ರಮೀಳಾ (ಶೇಷಾದ್ರಿಪುರಂ ಸ್ತ್ರೀ ಸಮಾಜ); ೧೩. ಎಸ್. ಚಂಪಕಾಬಾಯಿ (ಶಂಕರಪುರ ಪ್ರೈಮರಿ ಬಾಯ್ಸ್ ಸ್ಕೂಲು); ೧೪. ಇಂದಿರಮ್ಮ (ಪ್ರೈಮರಿ ಬಾಯ್ಸ್ ಸ್ಕೂಲು, ಕೋಟೆ)

### ಮಿಡಲ್ ಸ್ಕೂಲ್—ಬಾಲಕರು:

೧. ಲಕ್ಷ್ಮಣರಾವ್, ೨. ಎಂ. ಪಿ. ಕೃಷ್ಣಮೂರ್ತಿ, ೩. ಬಿ. ಎಸ್. ಶ್ರೀನಿವಾಸಮೂರ್ತಿ, ೪. ಗೋಪಾಲಕೃಷ್ಣ (ಚಾಮರಾಜಪೇಟೆ ಮಿಡಲ್ ಸ್ಕೂಲ್) ೫. ಸಿ. ಕೃಷ್ಣಮೂರ್ತಿ (ಮಲ್ಲೇಶ್ವರಂ ಮಿಡಲ್ ಸ್ಕೂಲ್), ೬. ಬಿ. ಕೃಷ್ಣರಾವ್ (ಆಚಾರ್ಯ ಪಾಠಶಾಲೆ, ಬಸವನಗುಡಿ) ೭. ಎಸ್. ಶಿವನಂಜಪ್ಪ (ಎಸ್. ಎಲ್. ಎನ್. ಮಿಡಲ್ ಸ್ಕೂಲ್).

### ಮಿಡಲ್ ಸ್ಕೂಲ್—ಬಾಲಕಿಯರು:

೧. ತಾರಾಬಾಯಿ (ಶ್ರೀನಿವಾಸ ಎಜ್ಯುಕೇಷನಲ್ ಇನ್ಸ್ಟಿಟ್ಯೂಟ್); ೨. ಸಿ. ಎಸ್. ಲೀಲ (ಚಾಮರಾಜಪೇಟೆ ಮಿಡಲ್ ಸ್ಕೂಲು); ೩. ಎಸ್. ರಾಜಮ್ಮ (ಸೆಂಟ್ ಥೆರಿಸ ಕಾನ್ವೆಂಟ್ ಸ್ಕೂಲು); ೪. ಟಿ. ಎಸ್. ಸರೋಜಿನಿ ದೇವಿ, ೫. ಎಚ್. ರತ್ನ, ೬. ಬಿ. ಶಾಂತ (ಶ್ರೀನಿವಾಸ ಎಜ್ಯುಕೇಷನಲ್ ಇನ್ಸ್ಟಿಟ್ಯೂಟ್). ೭. ಲಕ್ಷ್ಮೀದೇವಮ್ಮ, ೮. ಎಂ. ಎನ್. ಅನ್ನಪೂರ್ಣ; (ಬಸವನಗುಡಿ ಮಿಡಲ್ ಸ್ಕೂಲ್). ೯. ಕೆ. ಎನ್. ಧರ್ಮಾಂಬ (ಚಾಮರಾಜಪೇಟೆ ಮಿಡಲ್ ಸ್ಕೂಲ್).

### ಹೈಸ್ಕೂಲ್—ಬಾಲಕರು:

೧. ಬದರಿನಾಥ್ (ಎಸ್. ಎಲ್. ಎನ್.); ೨. ಜಿ. ಎಸ್. ಆದಿನಾರಾಯಣ. ೩. ಬಿ. ಎಸ್. ಅಶ್ವತ್ಥನಾರಾಯಣ (ಸೆಂಟ್ರಲ್). ೪. ಎ. ಜಿ. ಜಂಬುತೀರ್ಥ, (ಎಸ್. ಎಲ್. ಎನ್.) ೫. ಜಾನ್ ವಿಲ್ಸನ್ (ಯುನೈಟೆಡ್ ಮಿಷನ್).

### ಹೈಸ್ಕೂಲ್—ಬಾಲಕಿಯರು:

೧. ಪುಟ್ಟತಾಯಮ್ಮ; ೨. ಸೀತಮ್ಮ; ೩. ರತ್ನ, ೪. ತಂಗಮ್ಮ (ವಾಣಿವಿಲಾಸ ಇನ್ಸ್ಟಿಟ್ಯೂಟ್).

ಬೆಂಗಳೂರು ಮಾರುತಿ ಜ್ಯುಯೆಲರಿ ಹಾಲಿನ ಒಡೆಯರು ಶ್ರೀಮಾನ್ ಎಸ್. ಶಾಮಯ್ಯನವರ ಪರ್ಯಾಯ ಪಾರಿತೋಷಿಕ (ಬೆಳ್ಳಿಯ ಬಟ್ಟಲು) ಈ ಸಲ ಒಟ್ಟಿನಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಾಣೀವಿಲಾಸ ಇನ್ಸ್ಟಿಟ್ಯೂಟ್‌ಗೆ ದೊರೆತಿದೆ.

ತಾ|| ೨೮—೧೧—೧೯೩೮ರ ಸಂಜೆ, ಸ್ಪರ್ಧೆಗಳು ಮುಗಿದ ಬಳಿಕ ಸ್ಪರ್ಧೆಗಳ ವ್ಯವಸ್ಥಾಪಕರಾಗಿದ್ದ ಶ್ರೀಮಾನ್ ವಿ. ಟಿ. ತಿರುನಾರಾಯಣಯ್ಯಂಗಾರ್, ಎಂ.ಎ., ಅವರು ಸಭಿಕರೆಲ್ಲರಿಗೂ ವಂದನೆಗಳನ್ನು ಸಮರ್ಪಿಸಿ, ಹೋದ ವರ್ಷಕ್ಕಿಂತ ಈ ವರ್ಷ ಕಂಠಪಾಠ ಸ್ಪರ್ಧೆಗಳಲ್ಲಿ ಒಂದಕ್ಕೆ ಎರಡರಷ್ಟು ಮಂದಿ ಬಾಲಕ ಬಾಲಕಿಯರು ಭಾಗವಹಿಸಿರುವುದು ಅತ್ಯಂತ ಸಂತೋಷದ ಸಂಗತಿಯೆಂದು ತಿಳಿಸಿ, ಹೀಗೆಯೇ ಇನ್ನು ಮೇಲೂ ಬಾಲಕ ಬಾಲಕಿಯರು ಸ್ಪರ್ಧೆಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸಬೇಕೆಂದೂ ಈ ಬಗ್ಗೆ ಉಪಾಧ್ಯಾಯರೂ ತಾಯಿತಂದೆಗಳೂ ಪ್ರೋತ್ಸಾಹ ಕೊಡಬೇಕೆಂದೂ ಕೋರಿದರು.

ಕೊನೆಯಲ್ಲಿ, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು, ಸ್ಪರ್ಧೆಗಳನ್ನು ಯಶಸ್ವಿಯಾಗಿ ನಡಸಿಕೊಟ್ಟದ್ದಕ್ಕಾಗಿ ವ್ಯವಸ್ಥಾಪಕರಾದ ಶ್ರೀ|| ವಿ. ಟಿ. ತಿರುನಾರಾಯಣಯ್ಯಂಗಾರ್ಯರವರಿಗೂ, ಪರೀಕ್ಷಕರಿಗೂ, ಮತ್ತು ಸ್ಪರ್ಧೆಗಳನ್ನು ಪ್ರೋತ್ಸಾಹಿಸಿದ ಶಾಲಾ ಉಪಾಧ್ಯಾಯರಿಗೂ ತಾಯಿತಂದೆಗಳಿಗೂ, ಮತ್ತು ಇತರ ಬಗೆಯಲ್ಲಿ ಸಹಕಾರವಿತ್ತ ಎಲ್ಲ ಮಿತ್ರರಿಗೂ ಪರಿಷತ್ತಿನ ಪರವಾಗಿ ತಮ್ಮ ಹೃತ್ಪೂರ್ವಕವಾದ ವಂದನೆಗಳನ್ನು ಸಮರ್ಪಿಸಿದರು; ಮತ್ತು ಈ ಕಂಠಪಾಠಸ್ಪರ್ಧೆ ದಿನೇ ದಿನೇ ಹೆಚ್ಚು ಆಕರ್ಷಣೀಯವಾಗುತ್ತಿರುವುದು ತಮಗೂ ಮತ್ತು ಎಲ್ಲರಿಗೂ ಬಹು ಹರ್ಷದಾಯಕವಾಗಿದೆಯೆಂದೂ, ಹುಡುಗರೂ ಮಹಿಳೆಯರೂ ಹೀಗೆ ಆಗಿಂದಾಗ್ಗೆ ಸೇರಿ ಸಂತೋಷಪಡಲು ಅವಕಾಶ ಕಲ್ಪಿಸಿ ಕೊಡಬೇಕೆಂದು ಪರಿಷತ್ತಿನ ಉದ್ದೇಶವೆಂದೂ ಹೇಳಿದರು.

—ಪ್ರಕಟನ ಶಾಖೆಯಿಂದ.

ಬೆಂಗಳೂರು ಸುಬೋಧ ವಿದ್ಯುಚ್ಛಕ್ತಿ ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ, ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

Reg. No. M. 3975



# ಕನ್ನಡ ನುಡಿ

ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಸಂಪಾದಕ: ಅ. ನ. ಕೃಷ್ಣರಾಯ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಡಿಸೆಂಬರ್ ೯, ೧೯೩೮ [ಸಂಚಿಕೆ ೧೦

ಕುಮಾರವ್ಯಾಸನ ಇಷ್ಟದೈವ



ಗದುಗಿನ ಶ್ರೀ ವೀರನಾರಾಯಣ ಸ್ವಾಮಿ

Reg. No. M. 3975



# ಕನ್ನಡ ನುಡಿ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಸಂಪಾದಕ: ಅ. ನ. ಕೃಷ್ಣರಾಯ

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಡಿಸೆಂಬರ್ ೯, ೧೯೩೮ [ಸಂಚಿಕೆ ೧೦

ಕುಮಾರವ್ಯಾಸನ ಇಷ್ಟದೈವ



ಗದುಗಿನ ಶ್ರೀ ವೀರನಾರಾಯಣ ಸ್ವಾಮಿ

॥ ಸಿರಿಗನ್ನಡಂ ಗೆಲ್ಗೆ ॥

ಕನ್ನಡ ನುಡಿ

ಶುಕ್ರವಾರ, ಡಿಸೆಂಬರ್ ೯, ೧೯೩೮

## ಕನ್ನಡಿಗರ ಸ್ವಾಭಿಮಾನ

ನೃಪತುಂಗ, ಪಂಪ, ರನ್ನ, ಆಂಡಯ್ಯಾದಿ ಕವಿಗಳು ಕನ್ನಡ ನಾಡಿನ ವ್ಯಾಪ್ತಿ, ಕನ್ನಡಿಗರ ಶೀಲ, ದಾನ, ಔದಾರ್ಯಗಳನ್ನು ಕುರಿತು ರಸವತ್ತಾಗಿ ನುಡಿದಿದ್ದಾರೆ. ಕನ್ನಡಿಗರು ತಮ್ಮ ನಾಡ ವೈಭವವನ್ನು ಹೇಗೆ ಕಟ್ಟಿದರು, ಬೆಳಸಿದರು ಎಂಬುದನ್ನು ಅಭಿಮಾನದಿಂದ ವರ್ಣಿಸಿದ್ದಾರೆ. ಕನ್ನಡ ನಾಡು ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿತ್ತೆಂದು ನೃಪತುಂಗ ಸಾರಿದ್ದಾನೆ; ಕನ್ನಡಿಗರು "ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದು ಹೆಮ್ಮೆಯಿಂದ ಹೇಳಿದ್ದಾನೆ. ಕನ್ನಡದೇಶದ ನಿಸರ್ಗ ವೈಭವವನ್ನು ವರ್ಣಿಸುವಾಗಂತೂ ನಮ್ಮ ಕವಿಗಳು ಮೈಮರೆತಿದ್ದಾರೆ.

ಆದರಿಂದು ಆ ಆತ್ಮವಿಶ್ವಾಸ, ಹೆಮ್ಮೆ, ಸ್ವಾಭಿಮಾನಗಳ ಕೊರತೆ ಕಾಣಬರುತ್ತಿರುವುದೇತಕ್ಕೆ? ಅಂದು ಸಾಮ್ರಾಜ್ಯವಾಗಿದ್ದ ಕನ್ನಡ ನಾಡು ಇಂದು ಹರಿದು ಹಂಚಿ ಹೋಗಿರುವುದೇತಕ್ಕೆ? ಕನ್ನಡ ಮಕ್ಕಳು ತಾವು ಕನ್ನಡಿಗರೆಂದು ಹೇಳಿಕೊಳ್ಳಲು ಹಿಂಜರಿಯುತ್ತಿರುವುದೇತಕ್ಕೆ?-ಎಂಬ ಪ್ರಶ್ನೆ ಕನ್ನಡ ಪ್ರೇಮಿಗಳ ಮನಸ್ಸಿನಲ್ಲಿ ಮೂಡುತ್ತದೆ.

, ...ಳಯಬೀಡು,

ಅಜಂತೆಯ ಚಿತ್ರಕಲಾ ವೈಭವ, ಕರ್ನಾಟಕದ ಸಂಗೀತದ ಬಾದಾಮಿ, ...ನೂರಾರು ವರ್ಷಗಳಿಂದ ಬೆಳೆದುಬಂದಿರುವ ಸಾಹಿತ್ಯ ಸಂಸ್ಕೃತಿಗಳ ವೈಭವಗಳು ಇಂದು ನಮ್ಮ ಜನತೆಗೆ ಮರೆತು ಹೋಗಿರುವುದೇತಕ್ಕೆ?

ಕನ್ನಡಿಗರು ಮೊಹೆಂಜೋ ದಾರೋ ಸಂಸ್ಕೃತಿಯ ಅವಶೇಷಗಳ ಆಧಾರದಿಂದ ಕ್ರಿ. ಪೂ. ಸಾವಿರಾರು ವರ್ಷಗಳಿಂದ ತಮ್ಮ ನಾಡ ಸಿರಿಯನ್ನು ಬೆಳಸಿದರು. ಗ್ರೀಕ್ ನಾಟಕ, ಜೀವನ, ನಾಗರಿಕತೆಗಳ ಮೇಲೆ ಕನ್ನಡ ಸಂಸ್ಕೃತಿ ತನ್ನ ಪ್ರಭಾವವನ್ನು ಮೂಡಿಸಿತು. ಜಗತ್ತಿನ ಸಾಂಸ್ಕೃತಿಕ ಉತ್ಕ್ರಾಂತಿಗೆ ತನ್ನ ಕಾಣಿಕೆಯನ್ನು ನೀಡಿತು. ಇಂದಿನ ಕನ್ನಡಿಗರು ಹೆಮ್ಮೆಪಡುವಂತಹ ಅನೇಕ ಮಹತ್ಕಾರ್ಯಗಳೂ, ವೀರ ಕೃತಿಗಳೂ ಆಗಿಹೋದವು.

ಕನ್ನಡ ನಾಡು ವೀರರ ಭೂಮಿ. ಊರು ಊರುಗಳಲ್ಲಿ, ಹಳ್ಳಿ ಹಳ್ಳಿಗಳಲ್ಲಿ ವೀರಗಲ್ಲುಗಳು, ಶಾಸನಗಳು ಇಂದಿಗೂ ಅವರ ಹುತಾತ್ಮ ಜೀವನದ ಹೆಚ್ಚಳವನ್ನು ಎತ್ತಿ ಸಾರುತ್ತಿವೆ.

ಕನ್ನಡನಾಡು ಮಹಾತಪಸ್ವಿಗಳ ನಾಡು. ತ್ರಿಮತಾಚಾರ್ಯರೂ, ಬಸವೇಶ್ವರರೂ ತಮ್ಮ ಧರ್ಮಜ್ಯೋತಿಯನ್ನು ಬೆಳಗಿಸಿದುದು ಇಲ್ಲೇ.

ಆದರೂ ಇಂದು ಕನ್ನಡಿಗರು ಹಿಂದೆ ಉಳಿದಿದ್ದಾರೆ. ತಮ್ಮ ಅಪೂರ್ವ ಭಂಡಾರವನ್ನು ಮರೆತು ತಾವು ನಿರುಪಯೋಗಿಗಳೆಂದು ಭಾವಿಸಿಕೊಳ್ಳುತ್ತಿದ್ದಾರೆ. ಕನ್ನಡ ನಾಡು ಇಂದು ಎಷ್ಟು ಮುಂದುವರಿದು, ಯಾವ ಮಹೋನ್ನತ ಸ್ಥಾನವನ್ನು ಅಲಂಕರಿಸಬೇಕಾಗಿತ್ತೋ ಅಲಂಕರಿಸದೆ ಹಿಂದೆ ಬಿದ್ದು ಅಡಗಿ ಕುಳಿತಂತಾಗಿದೆ. ಕನ್ನಡ ದೇಶದಲ್ಲಿಯೇ ಬೇರೆ ಬೇರೆ ಜನಗಳ ಪ್ರಭಾವ ಹೆಚ್ಚುಮಾಡಲು ಅವಕಾಶವಾಗುತ್ತಿದೆ. ಪರಸಂಸ್ಕೃತಿ, ಪರಭಾಷೆ, ಪರದೇಶದ ಕಲಾವಿದರು (ಅಥವಾ ಕಲಾವಿದರೆಂದೆನಿಸಿಕೊಂಡವರು) – ಇವರ ಗುಣವರ್ಣನೆ ಮಾಡಿ ಕನ್ನಡಿಗರು ತೃಪ್ತರಾಗುತ್ತಿದ್ದಾರೆ. ಕನ್ನಡ ಮಕ್ಕಳು ಪ್ರೋತ್ಸಾಹವಿಲ್ಲದೆ, ಬದುಕಿಗೆ ಮಾರ್ಗವಿಲ್ಲದೆ ತೊಳಲುತ್ತಿರುವಾಗ ಹೊರಗಿನವರು ಬಂದು ಉಂಡುಟ್ಟು ಹೋಗುತ್ತಿದ್ದಾರೆ. ಕನ್ನಡಿಗರು 'ಮನೆಯ ದೇವರು ಮಣ್ಣು ತಿನ್ನುವಾಗ ಮಾರಮ್ಮ ಮಂಡಿಗೆ ಬೇಡಿದಳು' ಎಂಬ ಮಾತನ್ನು ಮನ್ನಿಸುವಂತಾಗಿದೆ.

ಇದಕ್ಕೆ ಕನ್ನಡಿಗರ ನೈಚ್ಯಾನುಸಂಧಾನ, ಹೊರಗಣ ಮೋಹ ಇವೇ ಮುಖ್ಯ ಕಾರಣಗಳು. ಹೊರಗಿನವರು ಕನ್ನಡ ಸಾಹಿತಿ, ಕಲಾವಿದರನ್ನು ಮೆಚ್ಚುವ ವರೆಗೆ ಕನ್ನಡಿಗರೇ ಅವರ ಗುಣವನ್ನು ಕಂಡುಕೊಳ್ಳುವ ಹಾಗಿಲ್ಲ. ಫರ್ಗ್ಯೂಸನ್ ಸಾಹೇಬರು ಬೇಲೂರು ಹಳೆಯಬೀಡುಗಳನ್ನು ಹೊಗಳಿದರೆ ಆಗ ನಾವು ಹಾಸನಜಿಲ್ಲೆಯ ವಿವರವನ್ನು ಹುಡುಕುತ್ತೇವೆ. ಡಾ॥ ಕಸಿನ್ಸ್‌ರವರು ಶೇಷಣ್ಣನವರನ್ನು ಹೊಗಳಿದ ಮೇಲೆ ನಾವು ಅವರ ವೀಣೆಯನ್ನು ಕೇಳಲಿಚ್ಛಿಸುತ್ತೇವೆ. ಚಿಕಾಗೋವಿನ ಸರ್ವಧರ್ಮ ಸಮ್ಮೇಳನಾಧಿಕಾರಿಗಳಿಂದ ಪಂಡಿತ ತಾರಾನಾಥರಿಗೆ ಆಹ್ವಾನ ಬಂದಮೇಲೆ ಅವರು ಕನ್ನಡಿಗರೆಂದು ನಾವು ಅರಿಯಲಿಚ್ಛಿಸುತ್ತೇವೆ. ಕನ್ನಡಿಗರು ತಮ್ಮ ವೀರಪೂಜಾಗುಣವನ್ನು ನೀಗಿಕೊಂಡು ಇಂದು ತಮ್ಮ ನಿಷ್ಪ್ರಯೋಜಕರೆಂಬ ಭಾವನೆಯನ್ನು ಬೆಳಸಿಕೊಂಡಿದ್ದಾರೆ.

ಇಂದು ಕನ್ನಡ ನಾಡಿನಲ್ಲಿ ಪ್ರತಿಭಾಶಾಲಿಗಳಾದ ಕಲಾವಿದರು, ವಾಗ್ಮಿಗಳು, ಪಂಡಿತರು, ಜ್ಞಾನಿಗಳು ಇದ್ದಾರೆ. ಅವರ ಇರವನ್ನು ಅರಿಯಬೇಕಾದುದು, ಅವರ ಗುಣಪ್ರಕಾಶದ ಕಡೆಗೆ ಲಕ್ಷ್ಯಕೊಡಬೇಕಾದುದು ಕನ್ನಡಿಗರ ಆದ್ಯಕರ್ತವ್ಯ.

ಕನ್ನಡ ದೇಶಕ್ಕೆ ಬೆಳಕು ಬೇಕು. ಬೆಳಕು ಎಲ್ಲಿಂದ–ಯಾರಿಂದ–ಯಾವ ಕಡೆಯಿಂದ ಬಂದರೂ ಬೇಕು. ಆ ಬೆಳಕು ಕನ್ನಡ ಮನೆ ...ತ್ತಿಗಳನ್ನು ಬೆಳಗಬೇಕು. ಆದರೆ ಬೆಳಕನ್ನು ಬಳಸಿಕೊಳ್ಳುವ ಬಗೆಯನ್ನು ಕನ್ನಡಿಗರು ಮರೆಯಬಾರದು. ಕಣ್ಣು ಕಳೆದುಕೊಂಡು ಒಣ ಮೋಹಕ್ಕೆ ಪಕ್ಕಾಗಿ ತಮ್ಮ ಆತ್ಮನ ಮಹತಿಯನ್ನು ನೀಗಿಕೊಳ್ಳಬಾರದು.

ಕನ್ನಡಿಗರಲ್ಲಿ ಅಭಿಮಾನ ಬೆಳೆದು, ಕನ್ನಡ ನಾಡಿನ ಸೇವೆ ಮೊದಲು, ಮಿಕ್ಕೆಲ್ಲವೂ ಹಿಂದಿನಿಂದ ಬರಲಿ ಎಂಬ ಭಾವನೆ ಬೆಳೆದರೆ ಅಂದೇ ಕನ್ನಡ ನಾಡು ಚಿನ್ನದ ನಾಡಾಗುತ್ತದೆ.

ಕನ್ನಡ ನಾಡು ಬೆಳೆದರೆ–ಬಾಳಿದರೆ–ಬದುಕಿದರೆ–ಪುಷ್ಟವಾದರೆ ಭಾರತವೂ ಬದುಕುತ್ತದೆ. ಭಾರತ, ಕನ್ನಡ ನಾಡು ತಾಯಿಮಕ್ಕಳು ಇದ್ದಂತೆ. ಮಗಳು ಮುಂದಕ್ಕೆ ಬಂದು ಕೀರ್ತಿಗೊಂಡರೆ ತವರುಮನೆ ಕೊರಗುತ್ತದೆಯೇ? ಕನ್ನಡ ದೇಶವನ್ನು ಬಿಟ್ಟು ಭಾರತದ ಸೇವೆಯನ್ನೇ ಮಾಡುತ್ತೇವೆಂದು ಹೊರಡುವವರು ಪುನರಾಲೋಚನೆಮಾಡಬೇಕಾಗಿ ಪ್ರಾರ್ಥಿಸುತ್ತೇವೆ.

ಕನ್ನಡದ ಬಗ್ಗೆ ಅನುಪಮವಾದ ಪ್ರೇಮ ಕನ್ನಡಿಗರಲ್ಲಿ ಬೆಳೆಯುವಂತೆ ಮಾಡಬೇಕಾದುದು ಎಲ್ಲ ರಂಗಗಳಲ್ಲಿಯೂ ದುಡಿಯುತ್ತಿರುವ ಕನ್ನಡ ನಾಯಕರ ಮುಖ್ಯ ಕರ್ತವ್ಯ. ಆ ಕರ್ತವ್ಯದೃಷ್ಟಿ ನಮ್ಮ ಜನದಲ್ಲಿ ಬೆಳೆಯಲೆಂದು ನಾವು ಹಾರೈಸುತ್ತೇವೆ.

---

### ವೀರ ನಾರಾಯಣನ ಕಿಂಕರನ ಅಗ್ಗಳಿಕೆ

ಹಲಗೆ ಬಳಪ ಹಿಡಿಯದೊಂದಗ್ಗಳಿಕೆ,  
ಪದವಿಟ್ಟಳುಪದೊಂದಗ್ಗಳಿಕೆ,  
ಪೆರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ,  
ಬಳಸಿ ಬರೆಯಲು ಕಂಠಪತ್ರದ ಉಲುಹು ಗೆಡದಗ್ಗಳಿಕೆ-  
ಎಂಬೀ ಬಲುಹುಗದುಗಿನ ವೀರನಾರಾಯಣನ ಕಿಂಕರಗೆ.

॥ ಸಿರಿಗನ್ನಡಂ ಗೆಲ್ಗೆ ॥

ಕನ್ನಡನುಡಿ

ಶುಕ್ರವಾರ, ಡಿಸೆಂಬರ್ ೯, ೧೯೩೮

## ಕನ್ನಡಿಗರ ಸ್ವಾಭಿಮಾನ

ನೃಪತುಂಗ, ಪಂಪ, ರನ್ನ, ಆಂಡಯ್ಯಾದಿ ಕವಿಗಳು ಕನ್ನಡ ನಾಡಿನ ವ್ಯಾಪ್ತಿ, ಕನ್ನಡಿಗರ ಶೀಲ, ದಾನ, ಔದಾರ್ಯಗಳನ್ನು ಕುರಿತು ರಸವತ್ತಾಗಿ ನುಡಿದಿದ್ದಾರೆ. ಕನ್ನಡಿಗರು ತಮ್ಮ ನಾಡ ವೈಭವವನ್ನು ಹೇಗೆ ಕಟ್ಟಿದರು, ಬೆಳಸಿದರು ಎಂಬುದನ್ನು ಅಭಿಮಾನದಿಂದ ವರ್ಣಿಸಿದ್ದಾರೆ. ಕನ್ನಡ ನಾಡು ಕಾವೇರಿಯಿಂದ ಗೋದಾವರಿಯ ವರೆಗೆ ಹಬ್ಬಿತ್ತೆಂದು ನೃಪತುಂಗ ಸಾರಿದ್ದಾನೆ; ಕನ್ನಡಿಗರು "ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದು ಹೆಮ್ಮೆಯಿಂದ ಹೇಳಿದ್ದಾನೆ. ಕನ್ನಡದೇಶದ ನಿಸರ್ಗ ವೈಭವವನ್ನು ವರ್ಣಿಸುವಾಗಂತೂ ನಮ್ಮ ಕವಿಗಳು ಮೈಮರೆತಿದ್ದಾರೆ.

ಆದರಿಂದು ಆ ಆತ್ಮವಿಶ್ವಾಸ, ಹೆಮ್ಮೆ, ಸ್ವಾಭಿಮಾನಗಳ ಕೊರತೆ ಕಾಣಬರುತ್ತಿರುವುದೇತಕ್ಕೆ? ಅಂದು ಸಾಮ್ರಾಜ್ಯವಾಗಿದ್ದ ಕನ್ನಡ ನಾಡು ಇಂದು ಹರಿದು ಹಂಚಿ ಹೋಗಿರುವುದೇತಕ್ಕೆ? ಕನ್ನಡ ಮಕ್ಕಳು ತಾವು ಕನ್ನಡಿಗರೆಂದು ಹೇಳಿಕೊಳ್ಳಲು ಹಿಂಜರಿಯುತ್ತಿರುವುದೇತಕ್ಕೆ?-ಎಂಬ ಪ್ರಶ್ನೆ ಕನ್ನಡ ಪ್ರೇಮಿಗಳ ಮನಸ್ಸಿನಲ್ಲಿ ಮೂಡುತ್ತದೆ. ...ಳಯಬೀಡು,

ಅಜಂತೆಯ ಚಿತ್ರಕಲಾ ವೈಭವ, ಕರ್ನಾಟಕದ ಸಂಗೀತದ ಬಾದಾಮಿ, ವಿ...ಸಾವಿರಾರು ವರ್ಷಗಳಿಂದ ಬೆಳೆದುಬಂದಿರುವ ಸಾಹಿತ್ಯ ಸಂಸ್ಕೃತಿಗಳ ವೈಭವಗಳು ಇಂದು ನಮ್ಮ ಜನತೆಗೆ ಮರೆತು ಹೋಗಿರುವುದೇತಕ್ಕೆ?

ಕನ್ನಡಿಗರು ಮೊಹೆಂಜೋ ದಾರೋ ಸಂಸ್ಕೃತಿಯ ಅವಶೇಷಗಳ ಆಧಾರದಿಂದ ಕ್ರಿ. ಪೂ. ಸಾವಿರಾರು ವರ್ಷಗಳಿಂದ ತಮ್ಮ ನಾಡ ಸಿರಿಯನ್ನು ಬೆಳಸಿದರು. ಗ್ರೀಕ್ ನಾಟಕ, ಜೀವನ, ನಾಗರಿಕತೆಗಳ ಮೇಲೆ ಕನ್ನಡ ಸಂಸ್ಕೃತಿ ತನ್ನ ಪ್ರಭಾವವನ್ನು ಮೂಡಿಸಿತು. ಜಗತ್ತಿನ ಸಾಂಸ್ಕೃತಿಕ ಉತ್ಕ್ರಾಂತಿಗೆ ತನ್ನ ಕಾಣಿಕೆಯನ್ನು ನೀಡಿತು. ಇಂದಿನ ಕನ್ನಡಿಗರು ಹೆಮ್ಮೆಪಡುವಂತಹ ಅನೇಕ ಮಹತ್ಕಾರ್ಯಗಳೂ, ವೀರ ಕೃತಿಗಳೂ ಆಗಿಹೋದವು.

ಕನ್ನಡ ನಾಡು ವೀರರ ಭೂಮಿ. ಊರು ಊರುಗಳಲ್ಲಿ ಹಳ್ಳಿ ಹಳ್ಳಿಗಳಲ್ಲಿ ವೀರಗಲ್ಲುಗಳು, ಶಾಸನಗಳು ಇಂದಿಗೂ ಅವರ ಹುತಾತ್ಮ ಜೀವನದ ಹೆಚ್ಚಳವನ್ನು ಎತ್ತಿ ಸಾರುತ್ತಿವೆ.

ಕನ್ನಡನಾಡು ಮಹಾತಪಸ್ವಿಗಳ ನಾಡು. ತ್ರಿಮತಾಚಾರ್ಯರೂ, ಬಸವೇಶ್ವರರೂ ತಮ್ಮ ಧರ್ಮಜ್ಯೋತಿಯನ್ನು ಬೆಳಗಿಸಿದುದು ಇಲ್ಲೇ.

ಆದರೂ ಇಂದು ಕನ್ನಡಿಗರು ಹಿಂದೆ ಉಳಿದಿದ್ದಾರೆ. ತಮ್ಮ ಅಪೂರ್ವ ಭಂಡಾರವನ್ನು ಮರೆತು ತಾವು ನಿರುಪಯೋಗಿಗಳೆಂದು ಭಾವಿಸಿಕೊಳ್ಳುತ್ತಿದ್ದಾರೆ. ಕನ್ನಡ ನಾಡು ಇಂದು ಎಷ್ಟು ಮುಂದುವರಿದು, ಯಾವ ಮಹೋನ್ನತ ಸ್ಥಾನವನ್ನು ಅಲಂಕರಿಸಬೇಕಾಗಿತ್ತೋ ಅಲಂಕರಿಸದೆ ಹಿಂದೆ ಬಿದ್ದು ಅಡಗಿ ಕುಳಿತಂತಾಗಿದೆ. ಕನ್ನಡ ದೇಶದಲ್ಲಿಯೇ ಬೇರೆ ಬೇರೆ ಜನಗಳ ಪ್ರಭಾವ ಹೆಚ್ಚುಮಾಡಲು ಅವಕಾಶವಾಗುತ್ತಿದೆ. ಪರಸಂಸ್ಕೃತಿ, ಪರಭಾಷೆ, ಪರದೇಶದ ಕಲಾವಿದರು (ಅಥವಾ ಕಲಾವಿದರೆಂದೆನಿಸಿಕೊಂಡವರು)– ಇವರ ಗುಣವರ್ಣನೆ ಮಾಡಿ ಕನ್ನಡಿಗರು ತೃಪ್ತರಾಗುತ್ತಿದ್ದಾರೆ. ಕನ್ನಡ ಮಕ್ಕಳು ಪ್ರೋತ್ಸಾಹವಿಲ್ಲದೆ, ಬದುಕಿಗೆ ಮಾರ್ಗವಿಲ್ಲದೆ ತೊಳಲುತ್ತಿರುವಾಗ ಹೊರಗಿನವರು ಬಂದು ಉಂಡುಟ್ಟು ಹೋಗುತ್ತಿದ್ದಾರೆ. ಕನ್ನಡಿಗರು 'ಮನೆಯ ದೇವರು ಮಣ್ಣು ತಿನ್ನುವಾಗ ಮಾರಮ್ಮ ಮಂಡಿಗೆ ಬೇಡಿದಳು' ಎಂಬ ಮಾತನ್ನು ಮನ್ನಿಸುವಂತಾಗಿದೆ.

ಇದಕ್ಕೆ ಕನ್ನಡಿಗರ ನೈಚ್ಯಾನುಸಂಧಾನ, ಹೊರಗಣ ಮೋಹ ಇವೇ ಮುಖ್ಯ ಕಾರಣಗಳು. ಹೊರಗಿನವರು ಕನ್ನಡ ಸಾಹಿತಿ, ಕಲಾವಿದರನ್ನು ಮೆಚ್ಚುವ ವರೆಗೆ ಕನ್ನಡಿಗರೇ ಅವರ ಗುಣವನ್ನು ಕಂಡುಕೊಳ್ಳುವ ಹಾಗಿಲ್ಲ. ಫರ್ಗ್ಯೂಸನ್ ಸಾಹೇಬರು ಬೇಲೂರು ಹಳೆಯಬೀಡುಗಳನ್ನು ಹೊಗಳಿದರೆ ಆಗ ನಾವು ಹಾಸನಜಿಲ್ಲೆಯ ವಿವರವನ್ನು ಹುಡುಕುತ್ತೇವೆ. ಡಾ॥ ಕಸಿನ್ಸ್‌ರವರು ಶೇಷಣ್ಣನವರನ್ನು ಹೊಗಳಿದ ಮೇಲೆ ನಾವು ಅವರ ವೀಣೆಯನ್ನು ಕೇಳಲಿಚ್ಛಿಸುತ್ತೇವೆ. ಚಿಕಾಗೋವಿನ ಸರ್ವಧರ್ಮ ಸಮ್ಮೇಳನಾಧಿಕಾರಿಗಳಿಂದ ಪಂಡಿತ ತಾರಾನಾಥರಿಗೆ ಆಹ್ವಾನ ಬಂದಮೇಲೆ ಅವರು ಕನ್ನಡಿಗರೆಂದು ನಾವು ಅರಿಯಲಿಚ್ಛಿಸುತ್ತೇವೆ. ಕನ್ನಡಿಗರು ತಮ್ಮ ವೀರಪೂಜಾಗುಣವನ್ನು ನೀಗಿಕೊಂಡು ಇಂದು ತಾವು ನಿಷ್ಪ್ರಯೋಜಕರೆಂಬ ಭಾವನೆಯನ್ನು ಬೆಳಸಿಕೊಂಡಿದ್ದಾರೆ.

ಇಂದು ಕನ್ನಡ ನಾಡಿನಲ್ಲಿ ಪ್ರತಿಭಾಶಾಲಿಗಳಾದ ಕಲಾವಿದರು, ವಾಗ್ಮಿಗಳು, ಪಂಡಿತರು, ಜ್ಞಾನಿಗಳು ಇದ್ದಾರೆ. ಅವರ ಇರವನ್ನು ಅರಿಯಬೇಕಾದುದು, ಅವರ ಗುಣಪ್ರಕಾಶದ ಕಡೆಗೆ ಲಕ್ಷ್ಯಕೊಡಬೇಕಾದುದು ಕನ್ನಡಿಗರ ಆದ್ಯಕರ್ತವ್ಯ.

ಕನ್ನಡ ದೇಶಕ್ಕೆ ಬೆಳಕು ಬೇಕು. ಬೆಳಕು ಎಲ್ಲಿಂದ–ಯಾರಿಂದ–ಯಾವ ಕಡೆಗ... ಬೇಕು. ಆ ಬೆಳಕು ಕನ್ನಡ ಮನೆ ...ತ್ತಿಗಳನ್ನು ಬೆಳಗಬೇಕು. ಅವರ ಬೆಳಕನ್ನು ...ಸಿಕೊಳ್ಳುವ ಬಗೆಯನ್ನು ಕನ್ನಡಿಗರು ಮರೆಯಬಾರದು. ಕಣ್ಣು ಕಳೆದುಕೊಂಡು ಒಣ ಮೋಹಕ್ಕೆ ಪಕ್ಕಾಗಿ ತಮ್ಮ ಆತ್ಮನ ಮಹತಿಯನ್ನು ನೀಗಿಕೊಳ್ಳಬಾರದು.

ಕನ್ನಡಿಗರಲ್ಲಿ ಅಭಿಮಾನ ಬೆಳೆದು, ಕನ್ನಡ ನಾಡಿನ ಸೇವೆ ಮೊದಲು, ಮಿಕ್ಕೆಲ್ಲವೂ ಹಿಂದಿನಿಂದ ಬರಲಿ ಎಂಬ ಭಾವನೆ ಬೆಳೆದರೆ ಅಂದೇ ಕನ್ನಡ ನಾಡು ಚಿನ್ನದ ನಾಡಾಗುತ್ತದೆ.

ಕನ್ನಡ ನಾಡು ಬೆಳೆದರೆ–ಬಾಳಿದರೆ–ಬದುಕಿದರೆ–ಪುಷ್ಟವಾದರೆ ಭಾರತವೂ ಬದುಕುತ್ತದೆ. ಭಾರತ, ಕನ್ನಡ ನಾಡು ತಾಯಿಮಕ್ಕಳು ಇದ್ದಂತೆ. ಮಗಳು ಮುಂದಕ್ಕೆ ಬಂದು ಕೀರ್ತಿಗೊಂಡರೆ ತವರುಮನೆ ಕೊರಗುತ್ತದೆಯೇ? ಕನ್ನಡ ದೇಶವನ್ನು ಬಿಟ್ಟು ಭಾರತದ ಸೇವೆಯನ್ನೇ ಮಾಡುತ್ತೇವೆಂದು ಹೊರಡುವವರು ಪುನರಾಲೋಚನೆಮಾಡಬೇಕಾಗಿ ಪ್ರಾರ್ಥಿಸುತ್ತೇವೆ.

ಕನ್ನಡದ ಬಗ್ಗೆ ಅನುಪಮವಾದ ಪ್ರೇಮ ಕನ್ನಡಿಗರಲ್ಲಿ ಬೆಳೆಯುವಂತೆ ದುಡಿಯಬೇಕಾದುದು ಎಲ್ಲ ರಂಗಗಳಲ್ಲಿಯೂ ದುಡಿಯುತ್ತಿರುವ ಕನ್ನಡ ನಾಯಕರ ಮುಖ್ಯ ಕರ್ತವ್ಯ. ಆ ಕರ್ತವ್ಯದೃಷ್ಟಿ ನಮ್ಮ ಜನದಲ್ಲಿ ಬೆಳೆಯಲೆಂದು ನಾವು ಹಾರೈಸುತ್ತೇವೆ.

---

### ವೀರ ನಾರಾಯಣನ ಕಿಂಕರನ ಅಗ್ಗಳಿಕೆ

ಹಲಗೆ ಬಳಪ ಹಿಡಿಯದೊಂದಗ್ಗಳಿಕೆ,  
ಪದವಿಟ್ಟಳಿಸ ದೊಂದಗ್ಗಳಿಕೆ,  
ಪೆರರೊಡ್ಡವದ ರೀತಿಯ ಕೊಳ್ಳದಗ್ಗಳಿಕೆ,  
ಬಳಸಿ ಬರೆಯಲು ಕಂಠಪತ್ರದ ಉಲುಹು ಗೆಡದಗ್ಗಳಿಕೆ-  
ಎಂಬೀ ಬಲುಹುಗದುಗಿನ ವೀರನಾರಾಯಣನ ಕಿಂಕರಗೆ.

## ಕನ್ನಡ ಲೇಖಕರ ಪರಿಚಯ ೩

# ಸಾಮಾಜಿಕ ನಾಟಕಗಳ 'ಶ್ರೀರಂಗ'ರು

ಶ್ರೀ॥ ಎಸ್. ಎಸ್. ಮಾಳವಾಡರವರು, ಧಾರವಾಡ.

"ಕರ್ನಾಟಕ ಪ್ರಹಸನ ಪ್ರಪಿತಾಮಹ, ಗುಂಡೂ" ಎಂಬುದಾಗಿ ಶ್ರೀ॥ ಟಿ. ಪಿ. ಕೈಲಾಸಂರವರು ತಮ್ಮನ್ನು ಕರೆದುಕೊಳ್ಳುತ್ತಾರೆ. ಕೈಲಾಸಂರವರ ಅನಂತರ ಕರ್ನಾಟಕದಲ್ಲಿ ಸಾಮಾಜಿಕನಾಟಕಗಳ ಸಂಪ್ರದಾಯವನ್ನು ಸರಿಯಾಗಿ ಸಾಗಿಸಿದವರೆಂದರೆ ತಾವೇ ಎಂದು ಶ್ರೀರಂಗರು ಹೇಳುತ್ತಿರುತ್ತಾರೆ. ಈ ಆತ್ಮಪ್ರತಿಷ್ಠೆಯ ಮಾತುಗಳು ಕೆಲವರಿಗೆ ವಿಚಿತ್ರವಾಗಿ ಕಾಣುತ್ತಿರಬೇಕು. ಆದರೆ ಈ ಆತ್ಮಪ್ರತಿಷ್ಠೆಯ ಹೇಳಿಕೆ ಹಿರಿದಾದ ಆತ್ಮ ವಿಶ್ವಾಸದ ಪ್ರತೀಕವೇ ಸರಿ. ಅಂತಹ ಆತ್ಮ ವಿಶ್ವಾಸ ಶ್ರೀರಂಗರಲ್ಲಿದೆ. ಪರಂಪರಾಗತವಾದ ಧರ್ಮ, ಸಮಾಜ, ಸಾಹಿತ್ಯಗಳ ವಾತಾವರಣದಲ್ಲಿ ಹುರುಳಿಲ್ಲವೆಂಬುದನ್ನು ಮನಗಂಡ ಇವರು ತಮ್ಮ ಕಟುವಾದ ಆದರೆ ಆಕರ್ಷಕವಾದ ಶೈಲಿಯಲ್ಲಿ ತಾವು ಕಂಡ ತೋರಿಕೆಯನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುತ್ತಾರೆ.

ಕರ್ನಾಟಕ ಕಾಲೇಜಿನ ನಾಟ್ಯಸಮಿತಿಯವರು ಕೆಲವು ವರುಷಗಳ ಹಿಂದೆ 'ಸಂಶಯ ಕಲ್ಲೋಲ' ಇತ್ಯಾದಿ ಮರಾಠಿ ನಾಟಕಗಳ ಆ ಭಾಷಾಂತರಗಳನ್ನೇ ರಂಗಭೂಮಿಯ ಮೇಲೆ ತಂದು ಟೀಕೆಗೆ ಗುರಿಯಾಗಿದ್ದರು. ರಂಗಭೂಮಿಗೆ ಒಪ್ಪುವ ನವೀನ ಸಾಮಾಜಿಕ ನಾಟಕಗಳನ್ನು ಕಾಲೇಜಿನ ಯುವಕರು ಪ್ರಯೋಗಿಸಿ ಉಳಿದವರಿಗೂ ಆದರ್ಶವನ್ನು ಹಾಕುವದು ಅವಶ್ಯವಿದೆಯೆಂದು ಅರಿತ ಕೆಲವು ವಿದ್ಯಾರ್ಥಿಗಳು ಕರ್ನಾಟಕದಲ್ಲಿ ಅಂತಹ ನಾಟಕಕಾರರನ್ನು ಹುಡುಕುತ್ತಿದ್ದರು. ಈ ಸುಮಾರಿಗೆ ಇಂಗ್ಲೆಂಡಿಗೆ ಹೋಗಿ ಸಂಸ್ಕೃತದಲ್ಲಿ ಎಂ. ಎ. ಪದವಿಗಳಿಸಿದ ಒಬ್ಬ ಮೇಧಾವಿ ಕನ್ನಡಿಗರು ಕರ್ನಾಟಕ ಕಾಲೇಜಿಗೆ ಸಂಸ್ಕೃತದ ಅಧ್ಯಾಪಕರಾಗಿ ನೇಮಿಸಲ್ಪಟ್ಟರು. ಪರದೇಶದಿಂದ ಹಿಂತಿರುಗಿದ ಇವರು ಕನ್ನಡದಲ್ಲಿ ಬರೆಯಬಹುದೆಂದು ಯಾರಿಗೂ ಅನಿಸುವಂತಿರಲಿಲ್ಲ. ಆದರೆ ಅಕಸ್ಮಾತ್ತಾಗಿ ಒಂದು ಕನ್ನಡ ಪತ್ರಿಕೆಯಲ್ಲಿ ಆ ಹೊಸ ಅಧ್ಯಾಪಕರು ಕನ್ನಡದಲ್ಲಿ ಸಾಮಾಜಿಕ ನಾಟಕ ಬರೆದ ಸಂಗತಿ ಪ್ರಕಟವಾದಾಗ ನನಗೆ ಆಶ್ಚರ್ಯವೂ ಆನಂದವೂ ಆಗಿ ನಾನು ಆ ತರುಣ ಸಂಸ್ಕೃತದ ಅಧ್ಯಾಪಕರನ್ನು ಹುಡುಕಿಕೊಂಡು ಹೋಗಿ ಆ ನಾಟಕವನ್ನು ತಂದು ಓದಿ ಆನಂದಪಟ್ಟೆ. ಕೀರ್ತಿಶೇಷ ಪ್ರೊ॥ ಸಾಸನೂರರವರಂತಹ ರಸಿಕವಿಮರ್ಶಕರೂ ಕಾಲೇಜಿನವರೂ ಅದನ್ನು ಪ್ರಯೋಗಿಸಬೇಕೆಂದು ಒಪ್ಪಿದರು. ಆ ನಾಟಕ ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರಯೋಗಿಸಲ್ಪಟ್ಟಿತು. ಅದರಲ್ಲಿಯ ಹಾಸ್ಯ, ಸಾಮಾಜಿಕವಿಡಂಬನೆಗಳು ಸುಶಿಕ್ಷಿತ ಪ್ರೇಕ್ಷಕರನ್ನು ಸಂತೋಷಗೊಳಿಸಿದುವು. ಅತ್ಯಂತ ಮೇಧಾವಿಗಳಾದ ಕಾಲೇಜಿನ ಇಂಗ್ಲಿಷ್ ಪಂಡಿತರೊಬ್ಬರು, ಆ ನಾಟಕದ ತರುಣ ಲೇಖಕರನ್ನು ಬಾಯಿತುಂಬ ಹೊಗಳಹತ್ತಿದರು. ಧಾರವಾಡದಲ್ಲಿ ಅಂದಿನಿಂದ ಸಾಮಾಜಿಕ ನಾಟಕಗಳ ಹೊಸದೊಂದು ಸಂಪ್ರದಾಯ ಪ್ರಾರಂಭವಾಯಿತು. ಆ ನಾಟಕದ ಹೆಸರು 'ಉದರ ವೈರಾಗ್ಯ'; ಅದರ ತರುಣ ಲೇಖಕರಾದ ಸಂಸ್ಕೃತದ ಅಧ್ಯಾಪಕರೆಂದರೆ, ರಂಗಾಚಾರ್ಯ ವಾಸುದೇವಾಚಾರ್ಯ ಜಾಗಿರದಾರ ಇವರು. ಇವರೇ ಸಾಮಾಜಿಕ ನಾಟಕಗಳ "ಶ್ರೀರಂಗ"ರು. ಅಂದು ಪ್ರಯೋಗಿಸಿದ ಆ ನಾಟಕ ತಮ್ಮ ತೀರ ಮೊದಲಿನ ಪ್ರಯೋಗವೆಂದೂ ಅದು ಕೆಳಗಿನ ತರಗತಿಯದೆಂದೂ ಲೇಖಕರೇ ಈಗ ಒಪ್ಪುತ್ತಾರೆ.



"ಉದರ ವೈರಾಗ್ಯ" ಮೊದಲನೆಯ ಸಲ ಪ್ರಯೋಗಿಸಲ್ಪಟ್ಟದ್ದು ೧೯೩೦ನೆಯ ಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ. ಶ್ರೀರಂಗರ ನಾಟ್ಯಕಲೆಯ ಪರಿಚಯ ಧಾರವಾಡದವರಿಗೆ ಆದುದು ಹೀಗೆ. ಇನ್ನು ವಿಶಾಲ ಕರ್ನಾಟಕಕ್ಕೆ ಅವರ ನಾಟ್ಯ ಪ್ರತಿಭೆಯ ಪರಿಚಯ ಆಗಿರುವುದು, ಆಗುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಇಂದು ವಿಶಾಲ ಕರ್ನಾಟದಲ್ಲಿ, ಕರ್ನಾಟಕದ ಹೊರಗೆ ಇರುವ ಕರ್ನಾಟಕ ಸಂಘಗಳಲ್ಲೂ ಸಾಹಿತ್ಯಕೂಟ, ವಾರ್ಷಿಕೋತ್ಸವಗಳು ನಡೆಯುತ್ತಿದ್ದರೆ ಶ್ರೀರಂಗರ ನಾಟಕಪ್ರದರ್ಶನವೂ ಕಾರ್ಯಕಲಾಪಗಳ ಒಂದು ವಿಷಯವೆಂದು ಯಾರಾದರೂ ಸಹಜವಾಗಿ ಊಹಿಸುವಷ್ಟು ಇವರ ನಾಟಕಗಳ ಪ್ರಯೋಗಗಳು ನಡೆಯುತ್ತಿವೆ. ಶ್ರೀರಂಗರು ಬರೆದ ನಾಟಕಗಳು ಈಗಾಗಲೇ ಸುಮಾರು ೩೦ ಆಗಿವೆ. ಆದರೆ ಇವರು ಕೇವಲ ನಾಟಕಕಾರರಷ್ಟೇ ಅಲ್ಲ. ಚತುರರಾದ ಹಾಸ್ಯಲೇಖನಕಾರರೂ, ತೀಕ್ಷ್ಣ ವಿಡಂಬನಕಾರರೂ, ನವೀನ ವಿಚಾರ ಪ್ರವರ್ತಕರೂ, ಬಿಡಿ ಲೇಖನಗಳ ಲೇಖಕರೂ, ವೈದುಷ್ಯದಿಂದ ಕೂಡಿದ ಅಭ್ಯಾಸ ಗ್ರಂಥ ಲೇಖನಗಳ ಕರ್ತೃಗಳೂ, ಶೀಘ್ರಲೇಖಕರೂ, ಬಹುಮುಖ ಲೇಖಕರೂ ಆಗಿದ್ದಾರೆ. ಬಹುಮುಖ ಲೇಖಕರೆನ್ನುವುದಕ್ಕೆ ಕೆಳಗಿನ ಯಾದಿಯೂ, ಶೀಘ್ರಲೇಖಕರೆನ್ನುವುದಕ್ಕೆ ಇವರ ಯಾವುದೇ ದೊಡ್ಡ ನಾಟಕ ಬರೆಯಲಿಕ್ಕೆ ೧೨ ದಿನಸಕ್ಕಿಂತ ಹೆಚ್ಚು ಕಾಲ ಬೇಕಿಲ್ಲವೆಂಬ ಮಾತೂ ನಿದರ್ಶನಗಳಾಗಬಹುದು. 'ವಿಶ್ವಾಮಿತ್ರನ ಸೃಷ್ಟಿ' ಎಂಬ ಇವರ ಕಾದಂಬರಿ, 'ಶಾರದೆಯ ಸಂಸಾರ' ಎಂಬ ಭಾಷಾಶಾಸ್ತ್ರದ ಮೇಲಿನ ಗ್ರಂಥ, 'ತರುಣ ತುರ್ಕಿಸ್ತಾನ' ಎಂಬ ಜೀವನ ಚರಿತೆ—ಇವುಗಳು ಕನ್ನಡ ಸಾಹಿತ್ಯದಲ್ಲಿ ತಮ್ಮವೇ ಆದ ವೈಶಿಷ್ಟ್ಯಗಳಿಂದ ಕೂಡಿವೆ. ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದ 'An Introduction to the comparative philology of modern Indo-European Languages' ಎಂಬ ಪುಸ್ತಕ ಹಾಗೂ 'Mighty minds of the Youth' ಎಂಬ ಚಿಕ್ಕ ನಾಟಕ—ಈ ಇಂಗ್ಲಿಷ್ ಪುಸ್ತಕಗಳನ್ನೂ ಬರೆದಿದ್ದಾರೆ. ಇವರ ದೊಡ್ಡ ನಾಟಕಗಳು ೧೧ ಇವೆ:

(೧) ಉದರ ವೈರಾಗ್ಯ, (೨) ವಿರಾಟ ಪುರುಷ, (೩) ಅಧಿಕ ಮಾಸ, (೪) ವೈದ್ಯರಾಜ, (೫) ದರಿದ್ರ ನಾರಾಯಣ, (೬) ಸಂಸಾರಿಗ ಕಂಸ, (೭) ಹರಿಜನ್ವಾರ, (೮) ಪರಮೇಶ್ವರ ಪುಲಕೇಶಿ, (೯) ನರಕದಲ್ಲಿ ನರಸಿಂಹ, (೧೦) ಪ್ರಪಂಚ ಪಾಣಿಪತ್ತ, (೧೧) ಸಂಧ್ಯಾಕಾಲ.

(ಇವುಗಳಲ್ಲಿ ಸಮಾಜ ದೇವರು ಇವುಗಳ ವಿಡಂಬನೆ ವಿರದೆ ಇರುವ ನಾಟಕ 'ಪರಮೇಶ್ವರ ಪುಲಿಕೇಶಿ' ಒಂದೇ.)

ಇವರ ಏಕಾಂಕ ನಾಟಕಗಳು ೧೮ ಇವೆ:

(೧) ಮುಹೂರ್ತ, (೨) ಮನೆಯಲ್ಲಿ ಮಹಾಸಭೆ, (೩) ಪೂರ್ವರಂಗ, (೪) ಯಮನ ಸೋಲು, (೫) ಅಶ್ವಮೇಧ, (೬) ನಿರುತ್ತರ ಕುಮಾರ, (೭) ದೀಪೋತ್ಸವ, (೮) ಅಹಲ್ಯೋದ್ಧಾರ, (೯) ನನ್ನದಲ್ಲ, (೧೦) ಕಾಮದಹನ, (೧೧) ಸಂಪುಷ್ಟ ರಾಮಾಯಣ, (೧೨) ತ್ರಿಶೂಲ, (೧೩) ದೇವಯಾನಿ, (೧೪) ಯಯಾತಿ, (೧೫) ಹೌಹಾರಿದ ಹರಿಶ್ಚಂದ್ರ, (೧೬) ನಾರಿಯ ನಾಟ್ಯ ದೇವತೆ, (೧೭) ಭಾಮಿನಿಯ ಭಾಗ್ಯೋದಯ, (೧೮) ಹನ್ನೊಂದೂವರೆ.

ಇವುಗಳಲ್ಲಿ ಕೆಲವಂತೂ ಕರ್ನಾಟಕ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪ್ರಯೋಗಮಾಡಲು ಬೇಕೆಂದು ಕೇಳಿದಾಗ ಬರೆದವುಗಳಾಗಿವೆ.

ಶ್ರೀರಂಗರ ನಾಟಕಗಳ ವಿಚಾರವಾಗಿ ಅವರೇ ಒಮ್ಮೆ ಹೇಳಿದ 'ತಲೆ ತುಂಬ ವಿಚಾರ; ಹೊಟ್ಟೆತುಂಬ ನಗೆ' ಎಂಬ ಮಾತನ್ನು ಹೇಳಬಹುದು. ಪುರಾಣ ಸಂದರ್ಭಗಳನ್ನು ತೆಗೆದುಕೊಂಡು ಅವುಗಳಿಗೆ ಹೊಸ ಅರ್ಥ ಹಚ್ಚಿ ವಿಡಂಬನ ಮಾಡುವ ಮಾರ್ಮಿಕತೆ ಶ್ರೀರಂಗರಿಗಿದೆ. ಅವರ ನಾಟಕಗಳನ್ನು ಮೆಚ್ಚದವರು ಇರಬಹುದು. ಆದರೆ ಆ ನಾಟಕಗಳ ನವೀನರೀತಿಯಿಂದ ಬೆರಗಾಗದವರು ಕಡಮೆ.

ಶ್ರೀರಂಗರು ಕೆಲವು ಪತ್ರಿಕೆಗಳಲ್ಲಿ ಅಭ್ಯಾಸ ಲೇಖನಗಳನ್ನು ಬರೆದಿದ್ದಾರೆ. ಐರೋಪ್ಯ ನಾಟಕಕಾರರ ವಿಚಾರವಾಗಿ 'ರಂಗಭೂಮಿ' ಪತ್ರಿಕೆಯಲ್ಲಿಯೂ "ಸಂಸ್ಕೃತ ನಾಟಕ"ಗಳ ವಿಚಾರವಾಗಿ ಮುಂಬಯಿ ವಿಶ್ವವಿದ್ಯಾನಿಲಯದ ಪತ್ರಿಕೆಯಲ್ಲಿಯೂ ಲೇಖನ ಪ್ರಸಿದ್ಧಿಸಿದ್ದಾರೆ. 'ಮಾನವ ಪ್ರಪಂಚ' ಎಂಬ ಲೇಖನಮಾಲೆ ವಿಶ್ವಭಾರತಿಯಲ್ಲಿ ಬಂದಿದೆ. 'ಜ್ಞಾನೇಶ್ವರಿಯ ಮೇಲೆ ಕನ್ನಡದ ಪ್ರಭಾವ' ಎಂಬ ವಿಷಯದ ಮೇಲಿನ ಪ್ರಬಂಧ ಇವರ ಲಂಡನ್ ಎಂ.ಎ. ಪರೀಕ್ಷೆಗಾಗಿ ಬರೆಯಲ್ಪಟ್ಟಿತು.

[೭೮ನೆಯ ಪುಟಕ್ಕೆ]

ಕನ್ನಡ ಲೇಖಕರ ಪರಿಚಯ ೩

# ಸಾಮಾಜಿಕ ನಾಟಕಗಳ 'ಶ್ರೀರಂಗ'ರು

ಶ್ರೀ॥ ಎಸ್. ಎಸ್. ಮಾಳವಾಡರವರು, ಧಾರವಾಡ.

"ಕರ್ನಾಟಕ ಪ್ರಹಸನ ಪ್ರಪಿತಾಮಹ, ಗುಂಡೂ" ಎಂಬುದಾಗಿ ಶ್ರೀ॥ ಟಿ. ಪಿ. ಕೈಲಾಸಂರವರು ತಮ್ಮನ್ನು ಕರೆದುಕೊಳ್ಳುತ್ತಾರೆ. ಕೈಲಾಸಂರವರ ಅನಂತರ ಕರ್ನಾಟಕದಲ್ಲಿ ಸಾಮಾಜಿಕನಾಟಕಗಳ ಸಂಪ್ರದಾಯವನ್ನು ಸರಿಯಾಗಿ ಸಾಗಿಸಿದವರೆಂದರೆ ತಾವೇ ಎಂದು ಶ್ರೀರಂಗರು ಹೇಳುತ್ತಿರುತ್ತಾರೆ. ಈ ಆತ್ಮಪ್ರತಿಷ್ಠೆಯ ಮಾತುಗಳು ಕೆಲವರಿಗೆ ವಿಚಿತ್ರವಾಗಿ ಕಾಣುತ್ತಿರಬೇಕು. ಆದರೆ ಈ ಆತ್ಮಪ್ರತಿಷ್ಠೆಯ ಹೇಳಿಕೆ ಹಿರಿದಾದ ಆತ್ಮ ವಿಶ್ವಾಸದ ಪ್ರತೀಕವೇ ಸರಿ. ಅಂತಹ ಆತ್ಮ ವಿಶ್ವಾಸ ಶ್ರೀರಂಗರಲ್ಲಿದೆ. ಪರಂಪರಾಗತವಾದ ಧರ್ಮ, ಸಮಾಜ, ಸಾಹಿತ್ಯಗಳ ವಾತಾವರಣದಲ್ಲಿ ಹುರುಳಿಲ್ಲವೆಂಬುದನ್ನು ಮನಗಂಡ ಇವರು ತಮ್ಮ ಕಟುವಾದ ಆದರೆ ಆಕರ್ಷಕವಾದ ಶೈಲಿಯಲ್ಲಿ ತಾವು ಕಂಡ ತೋರಿಕೆಯನ್ನು ನಿರ್ದಾಕ್ಷಿಣ್ಯವಾಗಿ ಬಯಲಿಗೆಳೆಯುತ್ತಾರೆ.

ಕರ್ನಾಟಕ ಕಾಲೇಜಿನ ನಾಟ್ಯಸಮಿತಿಯವರು ಕೆಲವು ವರುಷಗಳ ಹಿಂದೆ 'ಸಂಶಯ ಕಲ್ಲೋಲ' ಇತ್ಯಾದಿ ಮರಾಠಿ ನಾಟಕಗಳ ಆ ಭಾಷಾಂತರಗಳನ್ನೇ ರಂಗಭೂಮಿಯ ಮೇಲೆ ತಂದು ಟೀಕೆಗೆ ಗುರಿಯಾಗಿದ್ದರು. ರಂಗಭೂಮಿಗೆ ಒಪ್ಪುವ ನವೀನ ಸಾಮಾಜಿಕ ನಾಟಕಗಳನ್ನು ಕಾಲೇಜಿನ ಯುವಕರು ಪ್ರಯೋಗಿಸಿ ಉಳಿದವರಿಗೂ ಆದರ್ಶವನ್ನು ಹಾಕುವದು ಅವಶ್ಯವಿದೆಯೆಂದು ಅರಿತ ಕೆಲವು ವಿದ್ಯಾರ್ಥಿಗಳು ಕರ್ನಾಟಕದಲ್ಲಿ ಅಂತಹ ನಾಟಕಕಾರರನ್ನು ಹುಡುಕುತ್ತಿದ್ದರು. ಈ ಸುಮಾರಿಗೆ ಇಂಗ್ಲೆಂಡಿಗೆ ಹೋಗಿ ಸಂಸ್ಕೃತದಲ್ಲಿ ಎಂ. ಎ. ಪದವಿಗಳಿಸಿದ ಒಬ್ಬ ಮೇಧಾವಿ ಕನ್ನಡಿಗರು ಕರ್ನಾಟಕ ಕಾಲೇಜಿಗೆ ಸಂಸ್ಕೃತದ ಅಧ್ಯಾಪಕರಾಗಿ ನೇಮಿಸಲ್ಪಟ್ಟರು. ಪರದೇಶದಿಂದ ಹಿಂತಿರುಗಿದ ಇವರು ಕನ್ನಡದಲ್ಲಿ ಬರೆಯಬಹುದೆಂದು ಯಾರಿಗೂ ಅನಿಸುವಂತಿರಲಿಲ್ಲ. ಆದರೆ ಆಕಸ್ಮಾತ್ತಾಗಿ ಒಂದು ಕನ್ನಡ ಪತ್ರಿಕೆಯಲ್ಲಿ ಆ ಹೊಸ ಅಧ್ಯಾಪಕರು ಕನ್ನಡದಲ್ಲಿ ಸಾಮಾಜಿಕ ನಾಟಕ ಬರೆದ ಸಂಗತಿ ಪ್ರಕಟವಾದಾಗ ನನಗೆ ಆಶ್ಚರ್ಯವೂ ಆನಂದವೂ ಆಗಿ ನಾನು ಆ ತರುಣ ಸಂಸ್ಕೃತದ ಅಧ್ಯಾಪಕರನ್ನು ಹುಡುಕಿಕೊಂಡು ಹೋಗಿ ಆ ನಾಟಕವನ್ನು ತಂದು ಓದಿ ಆನಂದಪಟ್ಟೆ. ಕೀರ್ತಿಶೇಷ ಪ್ರೊ॥ ಸಾಸನೂರರವರಂತಹ ರಸಿಕವಿಮರ್ಶಕರೂ ಕಾಲೇಜಿನವರೂ ಅದನ್ನು ಪ್ರಯೋಗಿಸಬೇಕೆಂದು ಒಪ್ಪಿದರು. ಆ ನಾಟಕ ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರಯೋಗಿಸಲ್ಪಟ್ಟಿತು. ಅದರಲ್ಲಿಯ ಹಾಸ್ಯ, ಸಾಮಾಜಿಕವಿಡಂಬನೆಗಳು ಸುಶಿಕ್ಷಿತ ಪ್ರೇಕ್ಷಕರನ್ನು ಸಂತೋಷಗೊಳಿಸಿದುವು. ಅತ್ಯಂತ ಮೇಧಾವಿಗಳಾದ ಕಾಲೇಜಿನ ಇಂಗ್ಲಿಷ್ ಪಂಡಿತರೊಬ್ಬರು, ಆ ನಾಟಕದ ತರುಣ ಲೇಖಕರನ್ನು ಬಾಯಿತುಂಬ ಹೊಗಳಹತ್ತಿದರು. ಧಾರವಾಡದಲ್ಲಿ ಅಂದಿನಿಂದ ಸಾಮಾಜಿಕ ನಾಟಕಗಳ ಹೊಸದೊಂದು ಸಂಪ್ರದಾಯ ಪ್ರಾರಂಭವಾಯಿತು. ಆ ನಾಟಕದ ಹೆಸರು 'ಉದರ ವೈರಾಗ್ಯ'; ಅದರ ತರುಣ ಲೇಖಕರಾದ ಸಂಸ್ಕೃತದ ಅಧ್ಯಾಪಕರೆಂದರೆ, ರಂಗಾಚಾರ್ಯ ವಾಸುದೇವಾಚಾರ್ಯ ಜಾಗಿರದಾರ ಇವರು. ಇವರೇ ಸಾಮಾಜಿಕ ನಾಟಕಗಳ "ಶ್ರೀರಂಗ"ರು. ಅಂದು ಪ್ರಯೋಗಿಸಿದ ಆ ನಾಟಕ ತಮ್ಮ ತೀರ ಮೊದಲಿನ ಪ್ರಯೋಗವೆಂದೂ ಅದು ಕೆಳಗಿನ ತರಗತಿಯದೆಂದೂ ಲೇಖಕರೇ ಈಗ ಒಪ್ಪುತ್ತಾರೆ.

"ಉದರ ವೈರಾಗ್ಯ" ಮೊದಲನೆಯ ಸಲ ಪ್ರಯೋಗಿಸಲ್ಪಟ್ಟದ್ದು ೧೯೩೦ನೆಯಇಸವಿ ಸೆಪ್ಟೆಂಬರ್ ತಿಂಗಳಿನಲ್ಲಿ. ಶ್ರೀರಂಗರ ನಾಟ್ಯಕಲೆಯ ಪರಿಚಯ ಧಾರವಾಡದವರಿಗೆ ಆದುದು ಹೀಗೆ. ಇನ್ನು ವಿಶಾಲ ಕರ್ನಾಟಕಕ್ಕೆ ಅವರ ನಾಟ್ಯ ಪ್ರತಿಭೆಯ ಪರಿಚಯ ಆಗಿರುವುದು, ಆಗುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಇಂದು ವಿಶಾಲ ಕರ್ನಾಟಕದಲ್ಲಿ, ಕರ್ನಾಟಕದ ಹೊರಗೆ ಇರುವ ಕರ್ನಾಟಕ ಸಂಘಗಳಲ್ಲೂ ಸಾಹಿತ್ಯಕೂಟ, ವಾರ್ಷಿಕೋತ್ಸವಗಳು ನಡೆಯುತ್ತಿದ್ದರೆ ಶ್ರೀರಂಗರ ನಾಟಕಪ್ರದರ್ಶನವೂ ಕಾರ್ಯಕಲಾಪಗಳ ಒಂದು ವಿಷಯವೆಂದು ಯಾರಾದರೂ ಸಹಜವಾಗಿ ಊಹಿಸುವಷ್ಟು ಇವರ ನಾಟಕಗಳ ಪ್ರಯೋಗಗಳು ನಡೆಯುತ್ತಿವೆ. ಶ್ರೀರಂಗರು ಬರೆದ ನಾಟಕಗಳು ಈಗಾಗಲೇ ಸುಮಾರು ೩೦ ಆಗಿವೆ. ಆದರೆ ಇವರು ಕೇವಲ ನಾಟಕಕಾರರಷ್ಟೇ ಅಲ್ಲ. ಚತುರರಾದ ಹಾಸ್ಯಲೇಖನಕಾರರೂ, ತೀಕ್ಷ್ಣ ವಿಡಂಬನಕಾರರೂ, ನವೀನ ವಿಚಾರ ಪ್ರವರ್ತಕರೂ, ಬಿಡಿ ಲೇಖನಗಳ ಲೇಖಕರೂ, ವೈದುಷ್ಯದಿಂದ ಕೂಡಿದ ಅಭ್ಯಾಸ ಗ್ರಂಥ ಲೇಖನಗಳ ಕರ್ತೃಗಳೂ, ಶೀಘ್ರಲೇಖಕರೂ, ಬಹುಮುಖ ಲೇಖಕರೂ ಆಗಿದ್ದಾರೆ. ಬಹುಮುಖ ಲೇಖಕರೆನ್ನುವುದಕ್ಕೆ ಕೆಳಗಿನ ಯಾದಿಯೂ, ಶೀಘ್ರಲೇಖಕರೆನ್ನುವುದಕ್ಕೆ ಇವರ ಯಾವುದೇ ದೊಡ್ಡ ನಾಟಕ ಬರೆಯಲಿಕ್ಕೆ ೧೨ ದಿನಸಕ್ಕಿಂತ ಹೆಚ್ಚು ಕಾಲ ಬೇಕಿಲ್ಲವೆಂಬ ಮಾತೂ ನಿದರ್ಶನಗಳಾಗಬಹುದು. 'ವಿಶ್ವಾಮಿತ್ರನ ಸೃಷ್ಟಿ' ಎಂಬ ಇವರ ಕಾದಂಬರಿ, 'ಶಾರದೆಯ ಸಂಸಾರ' ಎಂಬ ಭಾಷಾಶಾಸ್ತ್ರದ ಮೇಲಿನ ಗ್ರಂಥ, 'ತರುಣ ತುರ್ಕಿಸ್ತಾನ' ಎಂಬ ಜೀವನ ಚರಿತೆ—ಇವುಗಳು ಕನ್ನಡ ಸಾಹಿತ್ಯದಲ್ಲಿ ತಮ್ಮವೇ ಆದ ವೈಶಿಷ್ಟ್ಯಗಳಿಂದ ಕೂಡಿವೆ. ಭಾಷಾ ಶಾಸ್ತ್ರಕ್ಕೆ ಸಂಬಂಧಿಸಿದ 'An Introduction to the comparative philology of modern Indo-European Languages' ಎಂಬ ಪುಸ್ತಕ ಹಾಗೂ 'Mighty minds of the Youth' ಎಂಬ ಚಿಕ್ಕ ನಾಟಕ—ಈ ಇಂಗ್ಲಿಷ್ ಪುಸ್ತಕಗಳನ್ನೂ ಬರೆದಿದ್ದಾರೆ. ಇವರ ದೊಡ್ಡ ನಾಟಕಗಳು ೧೧ ಇವೆ:



(೧) ಉದರ ವೈರಾಗ್ಯ, (೨) ವಿರಾಟ ಪುರುಷ, (೩) ಅಧಿಕ ಮಾಸ, (೪) ವೈದ್ಯರಾಜ, (೫) ದರಿದ್ರ ನಾರಾಯಣ, (೬) ಸಂಸಾರಿಗ ಕಂಸ, (೭) ಹರಿಜನ್ವಾರ, (೮) ಪರಮೇಶ್ವರ ಪುಲಕೇಶಿ, (೯) ನರಕದಲ್ಲಿ ನರಸಿಂಹ, (೧೦) ಪ್ರಪಂಚ ಪಾಣಿಪತ್ತ, (೧೧) ಸಂಧ್ಯಾಕಾಲ.

(ಇವುಗಳಲ್ಲಿ ಸಮಾಜ ದೇವರು ಇವುಗಳ ವಿಡಂಬನ ವಿರದೆ ಇರುವ ನಾಟಕ 'ಪರಮೇಶ್ವರ ಪುಲಿಕೇಶಿ' ಒಂದೇ.)

ಇವರ ಏಕಾಂಕ ನಾಟಕಗಳು ೧೮ ಇವೆ:

(೧) ಮುಹೂರ್ತ, (೨) ಮನೆಯಲ್ಲಿ ಮಹಾಸಭೆ, (೩) ಪೂರ್ವರಂಗ, (೪) ಯಮನ ಸೋಲು, (೫) ಅಶ್ವಮೇಧ, (೬) ನಿರುತ್ತರ ಕುಮಾರ, (೭) ದೀಪೋತ್ಸವ, (೮) ಅಹಲ್ಯೋದ್ಧಾರ, (೯) ನನ್ನದಲ್ಲ, ೧೦) ಕಾಮದಹನ, (೧೧) ಸಂಪುಷ್ಪ ರಾಮಾಯಣ, (೧೨) ತ್ರಿಶೂಲ, (೧೩) ದೇವಯಾನಿ, ೧೪) ಯಯಾತಿ, (೧೫) ಹೌಹಾರಿದ ಹರಿಶ್ಚಂದ್ರ, (೧೬) ನಾರಿಯ ನಾಟ್ಯ ದೇವತೆ, (೧೭) ಭಾಮಿನಿಯ ಭಾಗ್ಯೋದಯ, (೧೮) ಹನ್ನೊಂದೂವರೆ.

ಇವುಗಳಲ್ಲಿ ಕೆಲವಂತೂ ಕರ್ನಾಟಕ ಕಾಲೇಜಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪ್ರಯೋಗಮಾಡಲು ಬೇಕೆಂದು ಕೇಳಿದಾಗ ಬರೆದವುಗಳಾಗಿವೆ.

ಶ್ರೀರಂಗರ ನಾಟಕಗಳ ವಿಚಾರವಾಗಿ ಅವರೇ ಒಮ್ಮೆ ಹೇಳಿದ 'ತಲೆ ತುಂಬ ವಿಚಾರ; ಹೊಟ್ಟೆತುಂಬ ನಗೆ' ಎಂಬ ಮಾತನ್ನು ಹೇಳಬಹುದು. ಪುರಾಣ ಸಂದರ್ಭಗಳನ್ನು ತೆಗೆದುಕೊಂಡು ಅವುಗಳಿಗೆ ಹೊಸ ಅರ್ಥ ಹಚ್ಚಿ ವಿಡಂಬನ ಮಾಡುವ ಮಾರ್ಮಿಕತೆ ಶ್ರೀರಂಗರಿಗಿದೆ. ಅವರ ನಾಟಕಗಳನ್ನು ಮೆಚ್ಚದವರು ಇರಬಹುದು. ಆದರೆ ಆ ನಾಟಕಗಳ ನವೀನರೀತಿಯಿಂದ ಬೆರಗಾಗದವರು ಕಡಮೆ.

ಶ್ರೀರಂಗರು ಕೆಲವು ಪತ್ರಿಕೆಗಳಲ್ಲಿ ಅಭ್ಯಾಸ ಲೇಖನಗಳನ್ನು ಬರೆದಿದ್ದಾರೆ. ಐರೋಪ್ಯ ನಾಟಕಕಾರರ ವಿಚಾರವಾಗಿ 'ರಂಗಭೂಮಿ' ಪತ್ರಿಕೆಯಲ್ಲಿಯೂ "ಸಂಸ್ಕೃತ ನಾಟಕ"ಗಳ ವಿಚಾರವಾಗಿ ಮುಂಬಯಿ ವಿಶ್ವವಿದ್ಯಾನಿಲಯದ ಪತ್ರಿಕೆಯಲ್ಲಿಯೂ ಲೇಖನ ಪ್ರಸಿದ್ಧಿಸಿದ್ದಾರೆ. 'ಮಾನವ ಪ್ರಪಂಚ' ಎಂಬ ಲೇಖನಮಾಲೆ ವಿಶ್ವಭಾರತಿಯಲ್ಲಿ ಬಂದಿದೆ. 'ಜ್ಞಾನೇಶ್ವರಿಯ ಮೇಲೆ ಕನ್ನಡದ ಪ್ರಭಾವ' ಎಂಬ ವಿಷಯದ ಮೇಲಿನ ಪ್ರಬಂಧ ಇವರ ಲಂಡನ್ ಎಂ.ಎ. ಪರೀಕ್ಷೆಗಾಗಿ ಬರೆಯಲ್ಪಟ್ಟಿತು.

[೭೮ನೆಯ ಪುಟಕ್ಕೆ]

# ಭಾರತೀಯ ಸಂಗೀತ

ಶ್ರೀ|| ಕೋ. ಶಿ. ಕಾರಂತ, ಪುತ್ತೂರು

(ಡಾ|| ಅರ್ನಲ್ಡ್ ಬಾಕೆ ಅವರು ಪುತ್ತೂರು ದಸರಾಕಾಲದಲ್ಲಿ ಮಾಡಿದ ಭಾಷಣದ ಸಾರಾಂಶ)

ಎಲ್ಲ ವಿಚಾರಗಳಿಗಿರುವಂತೆ ನಾವು ಭಾರತೀಯ ಸಂಗೀತವನ್ನಾದರೂ ಎರಡು ದೃಷ್ಟಿಗಳಿಂದ ಕಾಣಬಹುದು. ಅದು ಭಾರತೀಯರ ಪಾಲಿಗೆ ಹೇಗೆಂಬುದು ಒಂದು, ಪರದೇಶೀಯರ ಪಾಲಿಗೆ ಹೇಗೆಂಬುದು ಇನ್ನೊಂದು. ಮೊದಲಿನದನ್ನು ನಾನು ವಿವರಿಸುವ ಕಾರಣವಿಲ್ಲ. ಈಗಿನ ಭಾರತೀಯರ ರಾಷ್ಟ್ರೀಯತೆಯ ಕಾಲದಲ್ಲಿ ಅವರಾದರೂ ಸಂಗೀತದ ನವಜೀವನವನ್ನು ಕುರಿತು ಅಭಿಲಾಷೆಪಡುತ್ತಿರುವುದು ತೀರ ಸ್ವಾಭಾವಿಕ. ಜಪಾನೀಯರಂತೆ, ಹಿಂದೂಸ್ಥಾನದಲ್ಲಿ ಪಾಶ್ಚಾತ್ಯ ಗಾನಪದ್ಧತಿಗೆ ಕಿವಿಗೊಡುವವರು ತೀರ ವಿರಳ. ಕಾರಣವೆಂದರೆ— ಈ ಎರಡು ಪದ್ಧತಿಗಳು ಬಹು ಭಿನ್ನವಾದುವು. ಆದುದರಿಂದ ಭಾರತೀಯರು ತಮ್ಮ ಗಾನ ರೀತಿಯನ್ನೇ ತಮಗೆ ವಿಶಿಷ್ಟವಾದ ರೀತಿಯಿಂದ ಸುಧಾರಿಸಬೇಕಾದುದು ತೀರ ಸಹಜವಾದುದು.

ಆದರೆ ಈ ಯತ್ನ ಎಷ್ಟು ಸಾಧ್ಯವೆಂಬುದನ್ನು ಕಾಲವೇ ನಿರ್ಣಯಿಸಬೇಕು. ಏಕೆಂದರೆ ಯಾವುದೇ ಬದುಕಿ ಬಾಳುವ ಕಲೆ ಇನ್ನೊಂದು ನಾಗರಿಕತೆಯ ಚಿರಸಂಪರ್ಕವಾಗುತ್ತಿರಲು, ಅದರಿಂದ ಒಂದಲ್ಲ ಒಂದು ರೀತಿಯಿಂದ ಪರಿಣಾಮಗೊಳ್ಳದಿರುವುದು ಕಷ್ಟ. ಆದರೆ ಈ ಪರಿಣಾಮ ಹೊರಗಿನಿಂದಲೇ ಬಂದುದಾಗಿರದೆ, ಆಂತರಿಕವಾಗಿ ಉತ್ಪನ್ನವಾದರೆ ಕ್ಷೇಮಕಾರಿಯಾಗುವುದರಲ್ಲಿ ಸಂಶಯವಿಲ್ಲ. ಭಾರತ ದೇಶದಲ್ಲಿ ವೈದಿಕ ಯುಗದಲ್ಲೂ ಸಂಗೀತದ ಉಲ್ಲೇಖವಿದೆ. ಸಾಮವೇದದಂಥ ಗೀತಪ್ರಧಾನವಾದ ವೇದದ ಪಠನೆ, ಕನಿಷ್ಠ ೨೫೦೦ ವರ್ಷಗಳ ಪ್ರಾಚೀನತೆಯಾದರೂ ಉಳ್ಳದಿರಬೇಕು. ಮತ್ತು ಅವುಗಳ ಪಠನದ ರೀತಿಯಲ್ಲಿ ವಿಶೇಷ ಬದಲಾವಣೆ ಅಂದಿಗಿಂತ ಇಂದಿಗೆ ಆದಂತೆಯೂ ಇಲ್ಲ. ಕೆಲವು ಪಾಶ್ಚಾತ್ಯ ಪಂಡಿತರು ಸಾಮವೇದ ಪದ್ಧತಿ ಈಗ ಲೋಪವಾಗಿ ಬಂದಿದೆಯೆಂದು ಹೇಳಬಹುದು. ಇದು ತೀರ ಅವಸರದ ನಿರ್ಧರ. ನನ್ನ ಅನುಭವದಿಂದ, ಮದ್ರಾಸಿನ ಕೌತುಂಬರು, ಮಲೆಯಾಳದ ಜೈಮಿನೀಯ, ಬಡೋದೆಯ ಸಾಮಗರು— ಇಂಥವರಲ್ಲಿ ಈ ಕಲೆ ಉಳಿದಿದೆ ಎಂದು ನಂಬಲು ಅವಕಾಶವಿದೆ.

ವೈದಿಕ ಗೀತದಂತೆ, ಈ ದೇಶದ 'ಮಾರ್ಗ' ಪದ್ಧತಿಯ ಸಂಗೀತವಾದರೂ ಪ್ರಾಚೀನತೆಯುಳ್ಳದು. ಸಂಗೀತದ ವಿಚಾರದ ತೀರ ಪ್ರಥಮ ಗ್ರಂಥ ನಮಗೆ ತಿಳಿದಂತೆ ೧ನೆಯ ಇಲ್ಲವೆ ೨ನೆಯ ಶತಮಾನದಷ್ಟು ಹಿಂದೆ ಸರಿಯುವುದು. ಅಲ್ಲಿಂದಿಲ್ಲಿಗೆ ಚಿಕ್ಕಪುಟ್ಟ ಬದಲಾವಣೆಗಳು ಆಗಿರಬಹುದಾದರೂ, ಪಾಶ್ಚಾತ್ಯ ದೇಶಗಳಿಗಿರುವಂತೆ ಸಂಗೀತಸಂಪ್ರದಾಯ ಮುರಿದು ಪ್ರತ್ಯೇಕವಾದ ಒಂದು ರೂಪ ತಾಳಿರಲಾರದು.

ಭಾರತೀಯ ಸಂಗೀತ ಸಂಪ್ರದಾಯದಲ್ಲಿ ಬಾಯಿಹಾಡುಗಾರಿಕೆ ಪ್ರಧಾನವಾದುದು; ವಾದ್ಯ ಎರಡನೆಯದು. ವಾದ್ಯಗಳ ಹೆಚ್ಚಳ ಈ ದೇಶಕ್ಕೆ ಮುಸಲ್ಮಾನರಿಂದ ಬಂದಿತು. ಅಂದರೆ ೧೧ನೆಯ ಶತಮಾನದ ಸುಮಾರಿಗೆ. ವೀಣೆ ಕೊಳಲುಗಳನ್ನು ಬಿಟ್ಟರೆ ಉಳಿದ ಹಲವು ತಂತಿ ಮತ್ತು ಇತರವಾದ್ಯಗಳು ಅರಬಿ ಇಲ್ಲವೆ ಫಾರ್ಸಿಕರಿಂದ ಇಲ್ಲಿಗೆ ಬಂದುವು.

ಪ್ರಾಚೀನ ಭಾರತೀಯ ಸಂಗೀತ ನಾಟಕರಂಗದೊಳಗೆ ಬೆಳೆಯಿತು. ಸಂಗೀತ ಅಂದರೇನೇ ಬಾಯಿಹಾಡಿಗಾರಿಕೆ, ವಾದ್ಯ ಮತ್ತು ನೃತ್ಯವಾಗಿತ್ತು. ಪ್ರಥಮ ನಾಟ್ಯಶಾಸ್ತ್ರದೊಳಗೆ ಸಂಗೀತಕ್ಕೆ ಬಲು ಪುಟ್ಟ ಸ್ಥಾನವಿತ್ತು. ಆಗಿನ ಕಾಲದ ಸಂಗೀತ ವೈದಿಕಸಂಗೀತ ಮಾದರಿಗಿಂತ ಬಲು ದೂರವಾಗಿತ್ತು ಎಂದು ತಿಳಿಯಕೂಡದು. ಕೇರಳ ದೇಶದಲ್ಲಿ ನಾಟಕವೂ ಒಂದು ಧಾರ್ಮಿಕ ವಿಧಿಯ ಸ್ಥಾನಗಳಲ್ಲಿ ಒಂದಾಗಿತ್ತು.

ಭರತ ಖಂಡದಲ್ಲಿ 'ಮಾರ್ಗ' ಮತ್ತು 'ದೇಶಿ' ಎಂಬ ಸಂಗೀತದ ಎರಡು ಭಾಗಗಳಲ್ಲಿ ಒಂದನ್ನು ಒಂದರಿಂದ ಮೊದಲಿನಿಂದಲೇ ಪ್ರತ್ಯೇಕಿಸಿ ಇಟ್ಟಂತೆ ಕಾಣುವುದು. ಬ್ರಹ್ಮನಿಂದ ನಿರ್ಮಿತವಾಗಿ ಶಿವನೆದುರಿಗೆ ಭರತನು ಹಾಡಿದುದು 'ಮಾರ್ಗ'ವೆಂದೂ, ಅದು ಮುಕ್ತಿಸಾಧಕವೆಂದೂ ತಿಳಿದಿದ್ದುದು ಆಯಾಯ ದೇಶಪದ್ಧತಿಗಳಿಗೆ ಅನುಗುಣವಾಗಿತ್ತು. ಕೇವಲ ಲೌಕಿಕ ಸಂತೋಷಕ್ಕಾಗಿ ಉಳ್ಳದು 'ದೇಶಿ' ಎನಿಸಿಕೊಂಡಿತ್ತು. ಹೀಗಿರಲು 'ಮಾರ್ಗ' ಸಂಪ್ರದಾಯವು ಧಾರ್ಮಿಕದೃಷ್ಟಿಯಿಂದ ಹೇಗೆ ಇರಬಹುದು ಎಂದು ಊಹಿಸಬೇಕು. 'ದೇಶಿ' ಪದ್ಧತಿಗೆ ಆ ದೃಷ್ಟಿಯಿಂದ ಹೆಚ್ಚಿನ ಮರ್ಯಾದೆಯೇ ಇದ್ದಂತೆ ಕಾಣುವುದಿಲ್ಲ.

ಆದರೆ ಜಾನಪದ ಸಂಗೀತವು ಎಲ್ಲ ಜನಾಂಗದಲ್ಲೂ ಜೀವನದ ಎಂಥ ಮುಖ್ಯವಾದ ಅಂಗ ಎಂಬುದನ್ನು ನಾನಿಲ್ಲಿ ಬಣ್ಣಿಸಬೇಕಿಲ್ಲ. ಕಳೆದ ಶತಮಾನದಲ್ಲಿ ಇಡಿಯ ಪ್ರಪಂಚದ ಕೃತಿಕಾರರು, ಹೊಸ ಪ್ರತಿಭೆಗಾಗಿ ತಂತಮ್ಮ ದೇಶದ ಜಾನಪದ ಗೀತೆಯನ್ನೇ ಇದಿರು ಕಂಡರು. 'ಮಾರ್ಗ' ಪದ್ಧತಿಯವರು ಸಹ ಜನರನ್ನೇ ತಮ್ಮ ಆಶ್ರಯದಾತರಾಗಿ ಕಾಣಬೇಕಾದುದರಿಂದ ಅವರು ಸಹ, ಅಲ್ಲಲ್ಲಿ 'ದೇಶೀ' ಕ್ರಮಗಳನ್ನು ನಿರೀಕ್ಷಿಸಿ ಅದನ್ನೇ ತಮ್ಮ ವಿಧಾನಗಳಲ್ಲಿ ಬೆರೆಯಿಸಿಕೊಳ್ಳದಿರುತ್ತಿದ್ದರೆ ಈ ದೇಶದಲ್ಲಿ ಸೈಂಧವಿ, ಗೂರ್ಜರಿ ಎಂಬಂಥ ಸ್ಥಳದ ಮಾದರಿಯ ರಾಗಗಳನ್ನು ಕಾಣಲಾರೆವು. ಯಾವನಾದರೂ ಗಾನಕೋವಿದನು ಇನ್ನೊಂದು ರಾಜ್ಯಕ್ಕೆ ಹೋದಾಗ ಅವನನ್ನು ಈ ಪರಸ್ಥಳೀಯ ಚಾಲುಗಳಿಂದ ಮೋಹಿಸತೊಡಗಿದರು.

ಕೆಲವು ಬರಿ ಹಾಡುಗಾರರು ಎರಡು ರಾಗಗಳನ್ನು ಸೇರಿಸಿ ನವೀನವಾದುದೊಂದನ್ನು ಸೃಜಿಸಿದರು. ಭಕ್ತಿಪಂಥದ ದಾಸರು ತಮ್ಮ ಸಾಧನೆಗಾಗಿ ಗೀತೆಗಳ ಹಾದಿಯಲ್ಲಿ ಹಲವು ಸುಧಾರಣೆ ತಂದರು. ಅವರು ಜನತೆಯ ಗಾಯಕರು; ಜನರಲ್ಲಿ ಬೆಳೆದು ಜನಸಾಮಾನ್ಯರಿಗಾಗಿ ಹಾಡಿದರು. ಕ್ರಮೇಣ ಅವರ ಹಾಡುಗಳು 'ಮಾರ್ಗ' ಪದ್ಧತಿಯನ್ನೇ ಸೇರಿಕೊಂಡು ಬೆಳಗಿತು.

ಆದರೆ ಇಂದು ಭಾರತೀಯರ 'ಮಾರ್ಗ'ಪದ್ಧತಿ ಸಂಗೀತವು ಜನಸಾಮಾನ್ಯರ ಕೈಬಿಟ್ಟು, ಕೇವಲ ಕೆಲವರ ಸೊತ್ತಾಗಿದೆ. ಕೇವಲ ಚತುರಸ್ವರ ವಿನ್ಯಾಸಗಳಲ್ಲೇ ಲೋಲವಾಗಿ ಯಾವ ಹೊಸ ಸುಧಾರಣೆಯನ್ನೂ ತಿರಸ್ಕರಿಸುವ ಸಂಕುಚಿತ ದೃಷ್ಟಿ ತಾಳಿದೆ. ಇದೂ ಒಂದು ದಿನ ನಾಶವಾದೀತು.

ಜಾನಪದ ಗೀತೆಯಾದರೂ ಈ ದಿನ ಠಾಕೂರರಂಥ ಕವಿಗಳಿಗೂ ಹಲವು ಆಧುನಿಕ ಕೃತಿಕಾರರಿಗೂ ನವೀನಸ್ಫೂರ್ತಿಯನ್ನು ಕೊಡುತ್ತಲಿದೆ. ಮುಂದಿನ ಭಾರತದ ಸಂಗೀತದ ಪುನರುಜ್ಜೀವನದ , ಸಂಸ್ಕೃತಿಯಲ್ಲಿ ಮಾರ್ಗ, ದೇಶಿ ಪದ್ಧತಿಗಳ ಈ ರೀತಿಯ ಮಿಲನ, ಪ್ರಭಾವಗಳನ್ನು ನಾವು ಕಾಣಬಹುದೆಂದು ನಿರೀಕ್ಷೆ. ಇಷ್ಟೆಲ್ಲ ಭಾರತೀಯ ಸಂಗೀತವು ಈ ಜನರ ದೃಷ್ಟಿಯಿಂದಾಯಿತು. ಇದು ಪಾಶ್ಚಾತ್ಯರಿಗೂ ಕೆಲವು ಬಗೆಯಿಂದ ಸ್ಫೂರ್ತಿಕೊಡಬಲ್ಲದು. ಭಾರತ ಸಂಗೀತದ ಗತಿ, ಮಾರ್ದವವು ಪರದೇಶೀಯ ಸಂಗೀತಕ್ಕೆ ಪುಟ ಕೊಡ ಬಲ್ಲುದು. ಎಲ್ಲಿ ಬರಿಯ "ಸೌರಸ್ಯ" ಒಂದರಿಂದ ಗತಿ ಮಾರ್ದವಗಳ ಅನುಭವವೇ ನಾಶವಾಗಿದೆಯೋ ಅವರಿಗೆ ಇದರಿಂದ ಹೊಳಪು ಬಂದೀತು. ಅಷ್ಟೇ ಅಲ್ಲ. ಇನ್ನೊಂದು ಸಂಬಂಧ ಇವೆರಡಕ್ಕೂ ಉಂಟು. ಯೂರೋಪಿನ ಮಧ್ಯಯುಗದ ಸಂಗೀತಕ್ಕೂ ಈ ದೇಶದ ಗಾನಕ್ಕೂ ಹೆಚ್ಚಿನ ಸಂಬಂಧ ಕಾಣುವುದು. ಯೂರೋಪಿನಲ್ಲಿ ಇಂದು ಈ ಸಂಬಂಧವು ಮೃತವಾಗಿದ್ದರೂ ಇಲ್ಲಿ ಬದುಕಿ ನಿಂತಿದೆ.

ಭಾರತೀಯ ಗಾನ, ಪ್ರಪಂಚದ ಎಲ್ಲ ಕಡೆಯ ಕಲಾನುಭವಗಳಂತೆ ಎರಡು ತೆರನಾಗಿದೆ. ಅದು ಅರಿವು, ಅರಿವುಗಾಣದ್ದು-ಇವುಗಳ ಎಡೆಯಲ್ಲಿ ಸುಳಿದಾಡುತ್ತಿದೆ. ಯಾವುದು ಇವೆರಡರಲ್ಲಿ ಅಧಿಕವಾದರೂ ನಿಜವಾದ ಆತ್ಮಪ್ರಕಾಶಕ್ಕೆ ತೊಡಕೇ ಸರಿ. ನಮ್ಮ ಸಂಗೀತದಲ್ಲಿ ನಮ್ಮ ಅರಿವು ಕಡಮೆಯಾದಂತೆ, ಸಂಸ್ಕೃತಿಯ ಮಟ್ಟ ತಗ್ಗುವುದು; ಇಂಥದನ್ನು ಹಲವು ಮೂಲ ನಿವಾಸಿಗಳ ಸಂಗೀತದಲ್ಲಿ ಕಾಣಬಹುದು. ತಿರುವಾಂಕೂರಿನ ಉರಾಲಿಗಳು, ಸಿಲೋನಿನ ವೇದ್ಧರು ಈ ಸಾಲಿನವರು. ಅವರಲ್ಲಿ ಏನೋ ಒಂದು ಬಗೆಯ ಸಂಗೀತದ ಯತ್ನ ಕಾಣುವುದು. ಅರಿವಿನ ಹಾದಿಯನ್ನು ಕಂಡುಹಿಡಿಯಲು ಹೊಡೆದಾಡುವ ಶ್ರಮ ಕಾಣುತ್ತದೆ. ಆದರೆ ನಿಷ್ಫಲಯತ್ನದಂತೆ, ಕೇವಲ ಸ್ವಲ್ಪವೇ ರಾಗ, ಪ್ರವಾಹ ಗತಿಗಳಲ್ಲಿ ಅದು ಅಂತ್ಯವಾಗುತ್ತದೆ.

## ಭಾರತೀಯ ಸಂಗೀತ

ಶ್ರೀ॥ ಕೋ. ಶಿ. ಕಾರಂತ, ಪುತ್ತೂರು

(ಡಾ॥ ಅರ್ನಲ್ಡ್ ಬಾಕೆ ಅವರು ಪುತ್ತೂರು ದಸರಾಕಾಲದಲ್ಲಿ ಮಾಡಿದ ಭಾಷಣದ ಸಾರಾಂಶ)

ಎಲ್ಲ ವಿಚಾರಗಳಿಗಿರುವಂತೆ ನಾವು ಭಾರತೀಯ ಸಂಗೀತವನ್ನಾದರೂ ಎರಡು ದೃಷ್ಟಿಗಳಿಂದ ಕಾಣಬಹುದು. ಅದು ಭಾರತೀಯರ ಪಾಲಿಗೆ ಹೇಗೆಂಬುದು ಒಂದು, ಪರದೇಶೀಯರ ಪಾಲಿಗೆ ಹೇಗೆಂಬುದು ಇನ್ನೊಂದು. ಮೊದಲಿನದನ್ನು ನಾನು ವಿವರಿಸುವ ಕಾರಣವಿಲ್ಲ. ಈಗಿನ ಭಾರತೀಯರ ರಾಷ್ಟ್ರೀಯತೆಯ ಕಾಲದಲ್ಲಿ ಅವರಾದರೂ ಸಂಗೀತದ ನವಜೀವನವನ್ನು ಕುರಿತು ಅಭಿಲಾಷೆಪಡುತ್ತಿರುವುದು ತೀರ ಸ್ವಾಭಾವಿಕ. ಜಪಾನೀಯರಂತೆ, ಹಿಂದೂಸ್ಥಾನದಲ್ಲಿ ಪಾಶ್ಚಾತ್ಯ ಗಾನಪದ್ಧತಿಗೆ ಕಿವಿಗೊಡುವವರು ತೀರ ವಿರಳ. ಕಾರಣವೆಂದರೆ— ಈ ಎರಡು ಪದ್ಧತಿಗಳು ಬಹು ಭಿನ್ನವಾದುವು. ಆದುದರಿಂದ ಭಾರತೀಯರು ತಮ್ಮ ಗಾನ ರೀತಿಯನ್ನೇ ತಮಗೆ ವಿಶಿಷ್ಟವಾದ ರೀತಿಯಿಂದ ಸುಧಾರಿಸಬೇಕಾದುದು ತೀರ ಸಹಜವಾದುದು.

ಆದರೆ ಈ ಯತ್ನ ಎಷ್ಟು ಸಾಧ್ಯವೆಂಬುದನ್ನು ಕಾಲವೇ ನಿರ್ಣಯಿಸಬೇಕು. ಏಕೆಂದರೆ ಯಾವುದೇ ಬದುಕಿ ಬಾಳುವ ಕಲೆ ಇನ್ನೊಂದು ನಾಗರಿಕತೆಯ ಚಿರಸಂಪರ್ಕವಾಗುತ್ತಿರಲು, ಅದರಿಂದ ಒಂದಲ್ಲ ಒಂದು ರೀತಿಯಿಂದ ಪರಿಣಾಮಗೊಳ್ಳದಿರುವುದು ಕಷ್ಟ. ಆದರೆ ಈ ಪರಿಣಾಮ ಹೊರಗಿನಿಂದಲೇ ಬಂದುದಾಗಿರದೆ, ಆಂತರಿಕವಾಗಿ ಉತ್ಪನ್ನವಾದರೆ ಕ್ಷೇಮಕಾರಿಯಾಗುವುದರಲ್ಲಿ ಸಂಶಯವಿಲ್ಲ. ಭಾರತ ದೇಶದಲ್ಲಿ ವೈದಿಕ ಯುಗದಲ್ಲೂ ಸಂಗೀತದ ಉಲ್ಲೇಖವಿದೆ. ಸಾಮವೇದದಂಥ ಗೀತಪ್ರಧಾನವಾದ ವೇದದ ಪಠನೆ, ಕನಿಷ್ಠ ೨೫೦೦ ವರ್ಷಗಳ ಪ್ರಾಚೀನತೆಯಾದರೂ ಉಳ್ಳುದಿರಬೇಕು. ಮತ್ತು ಅವುಗಳ ಪಠನದ ರೀತಿಯಲ್ಲಿ ವಿಶೇಷ ಬದಲಾವಣೆ ಅಂದಿಗಿಂತ ಇಂದಿಗೆ ಆದಂತೆಯೂ ಇಲ್ಲ. ಕೆಲವು ಪಾಶ್ಚಾತ್ಯ ಪಂಡಿತರು ಸಾಮವೇದ ಪದ್ಧತಿ ಈಗ ಲೋಪವಾಗಿ ಬಂದಿದೆಯೆಂದು ಹೇಳಬಹುದು. ಇದು ತೀರ ಅವಸರದ ನಿರ್ಧರ. ನನ್ನ ಅನುಭವದಿಂದ, ಮದ್ರಾಸಿನ ಕೌತುಂಬರು, ಮಲೆಯಾಳದ ಜೈಮಿನೀಯ, ಬಡೋದೆಯ ಸಾಮಗರು— ಇಂಥವರಲ್ಲಿ ಈ ಕಲೆ ಉಳಿದಿದೆ ಎಂದು ನಂಬಲು ಅವಕಾಶವಿದೆ.

ವೈದಿಕ ಗೀತದಂತೆ, ಈ ದೇಶದ 'ಮಾರ್ಗ' ಪದ್ಧತಿಯ ಸಂಗೀತವಾದರೂ ಪ್ರಾಚೀನತೆಯುಳ್ಳದು. ಸಂಗೀತದ ವಿಚಾರದ ತೀರ ಪ್ರಥಮ ಗ್ರಂಥ ನಮಗೆ ತಿಳಿದಂತೆ ೧ನೆಯ ಇಲ್ಲವೆ ೨ನೆಯ ಶತಮಾನದಷ್ಟು ಹಿಂದೆ ಸರಿಯುವುದು. ಅಲ್ಲಿಂದಿಲ್ಲಿಗೆ ಚಿಕ್ಕಪುಟ್ಟ ಬದಲಾವಣೆಗಳು ಆಗಿರಬಹುದಾದರೂ, ಪಾಶ್ಚಾತ್ಯ ದೇಶಗಳಿಗಿರುವಂತೆ ಸಂಗೀತಸಂಪ್ರದಾಯ ಮುರಿದು ಪ್ರತ್ಯೇಕವಾದ ಒಂದು ರೂಪ ತಾಳಿರಲಾರದು.

ಭಾರತೀಯ ಸಂಗೀತ ಸಂಪ್ರದಾಯದಲ್ಲಿ ಬಾಯಿಹಾಡುಗಾರಿಕೆ ಪ್ರಧಾನವಾದುದು; ವಾದ್ಯ ಎರಡನೆಯದು. ವಾದ್ಯಗಳ ಹೆಚ್ಚಳ ಈ ದೇಶಕ್ಕೆ ಮುಸಲ್ಮಾನರಿಂದ ಬಂದಿತು. ಅಂದರೆ ೧೧ನೆಯ ಶತಮಾನದ ಸುಮಾರಿಗೆ. ವೀಣೆ ಕೊಳಲುಗಳನ್ನು ಬಿಟ್ಟರೆ ಉಳಿದ ಹಲವು ತಂತಿ ಮತ್ತು ಇತರವಾದ್ಯಗಳು ಅರಬಿ ಇಲ್ಲವೆ ಫಾರ್ಸಿಕರಿಂದ ಇಲ್ಲಿಗೆ ಬಂದುವು.

ಪ್ರಾಚೀನ ಭಾರತೀಯ ಸಂಗೀತ ನಾಟಕರಂಗದೊಳಗೆ ಬೆಳೆಯಿತು. ಸಂಗೀತ ಅಂದರೇನೇ ಬಾಯಿಹಾಡಿಗಾರಿಕೆ, ವಾದ್ಯ ಮತ್ತು ನೃತ್ಯವಾಗಿತ್ತು. ಪ್ರಥಮ ನಾಟ್ಯಶಾಸ್ತ್ರದೊಳಗೆ ಸಂಗೀತಕ್ಕೆ ಬಲು ಪುಟ್ಟ ಸ್ಥಾನವಿತ್ತು. ಆಗಿನ ಕಾಲದ ಸಂಗೀತ ವೈದಿಕಸಂಗೀತ ಮಾದರಿಗಿಂತ ಬಲು ದೂರವಾಗಿತ್ತು ಎಂದು ತಿಳಿಯಕೂಡದು. ಕೇರಳ ದೇಶದಲ್ಲಿ ನಾಟಕವೂ ಒಂದು ಧಾರ್ಮಿಕ ವಿಧಿಯ ಸ್ಥಾನಗಳಲ್ಲಿ ಒಂದಾಗಿತ್ತು.

ಭರತ ಖಂಡದಲ್ಲಿ 'ಮಾರ್ಗ' ಮತ್ತು 'ದೇಶಿ' ಎಂಬ ಸಂಗೀತದ ಎರಡು ಭಾಗಗಳಲ್ಲಿ ಒಂದನ್ನು ಒಂದರಿಂದ ಮೊದಲಿನಿಂದಲೇ ಪ್ರತ್ಯೇಕಿಸಿ ಇಟ್ಟಂತೆ ಕಾಣುವುದು. ಬ್ರಹ್ಮನಿಂದ ನಿರ್ಮಿತವಾಗಿ ಶಿವನೆದುರಿಗೆ ಭರತನು ಹಾಡಿದುದು 'ಮಾರ್ಗ'ವೆಂದೂ, ಅದು ಮುಕ್ತಿಸಾಧಕವೆಂದೂ ತಿಳಿದಿದ್ದುದು ಆಯಾಯ ದೇಶಪದ್ಧತಿಗಳಿಗೆ ಅನುಗುಣವಾಗಿತ್ತು. ಕೇವಲ ಲೌಕಿಕ ಸಂತೋಷಕ್ಕಾಗಿ ಉಳ್ಳುದು 'ದೇಶಿ' ಎನಿಸಿಕೊಂಡಿತ್ತು. ಹೀಗಿರಲು 'ಮಾರ್ಗ' ಸಂಪ್ರದಾಯವು ಧಾರ್ಮಿಕದೃಷ್ಟಿಯಿಂದ ಹೇಗೆ ಇರಬಹುದು ಎಂದು ಊಹಿಸಬೇಕು. 'ದೇಶಿ' ಪದ್ಧತಿಗೆ ಆ ದೃಷ್ಟಿಯಿಂದ ಹೆಚ್ಚಿನ ಮರ್ಯಾದೆಯೇ ಇದ್ದಂತೆ ಕಾಣುವುದಿಲ್ಲ.

ಆದರೆ ಜಾನಪದ ಸಂಗೀತವು ಎಲ್ಲ ಜನಾಂಗದಲ್ಲೂ ಜೀವನದ ಎಂಥ ಮುಖ್ಯವಾದ ಅಂಗ ಎಂಬುದನ್ನು ನಾನಿಲ್ಲಿ ಬಣ್ಣಿಸಬೇಕಿಲ್ಲ. ಕಳೆದ ಶತಮಾನದಲ್ಲಿ ಇಡಿಯ ಪ್ರಪಂಚದ ಕೃತಿಕಾರರು, ಹೊಸ ಪ್ರತಿಭೆಗಾಗಿ ತಂತಮ್ಮ ದೇಶದ ಜಾನಪದ ಗೀತೆಯನ್ನೇ ಇದಿರು ಕಂಡರು. 'ಮಾರ್ಗ' ಪದ್ಧತಿಯವರು ಸಹ ಜನರನ್ನೇ ತಮ್ಮ ಆಶ್ರಯದಾತರಾಗಿ ಕಾಣಬೇಕಾದುದರಿಂದ ಅವರು ಸಹ, ಅಲ್ಲಲ್ಲಿ 'ದೇಶೀ' ಕ್ರಮಗಳನ್ನು ನಿರೀಕ್ಷಿಸಿ ಅದನ್ನೇ ತಮ್ಮ ವಿಧಾನಗಳಲ್ಲಿ ಬೆರೆಯಿಸಿಕೊಳ್ಳದಿರುತ್ತಿದ್ದರೆ ಈ ದೇಶದಲ್ಲಿ ಸೈಂಧವಿ, ಗೂರ್ಜರಿ ಎಂಬಂಥ ಸ್ಥಳದ ಮಾದರಿಯ ರಾಗಗಳನ್ನು ಕಾಣಲಾರೆವು. ಯಾವನಾದರೂ ಗಾನಕೋವಿದನು ಇನ್ನೊಂದು ರಾಜ್ಯಕ್ಕೆ ಹೋದಾಗ ಅವನನ್ನು ಈ ಪರಸ್ಥಳೀಯ ಚಾಲುಗಳಿಂದ ಮೋಹಿಸತೊಡಗಿದರು.

ಕೆಲವು ಬರಿ ಹಾಡುಗಾರರು ಎರಡು ರಾಗಗಳನ್ನು ಸೇರಿಸಿ ನವೀನವಾದುದೊಂದನ್ನು ಸೃಜಿಸಿದರು. ಭಕ್ತಿಪಂಥದ ದಾಸರು ತಮ್ಮ ಸಾಧನೆಗಾಗಿ ಗೀತೆಗಳ ಹಾದಿಯಲ್ಲಿ ಹಲವು ಸುಧಾರಣೆ ತಂದರು. ಅವರು ಜನತೆಯ ಗಾಯಕರು; ಜನರಲ್ಲಿ ಬೆಳೆದು ಜನಸಾಮಾನ್ಯರಿಗಾಗಿ ಹಾಡಿದರು. ಕ್ರಮೇಣ ಅವರ ಹಾಡುಗಳು 'ಮಾರ್ಗ' ಪದ್ಧತಿಯನ್ನೇ ಸೇರಿಕೊಂಡು ಬೆಳಗಿತು.

ಆದರೆ ಇಂದು ಭಾರತೀಯರ 'ಮಾರ್ಗ'ಪದ್ಧತಿ ಸಂಗೀತವು ಜನಸಾಮಾನ್ಯರ ಕೈಬಿಟ್ಟು, ಕೇವಲ ಕೆಲವರ ಸೊತ್ತಾಗಿದೆ. ಕೇವಲ ಚತುರಸ್ವರ ವಿನ್ಯಾಸಗಳಲ್ಲೇ ಲೋಲವಾಗಿ ಯಾವ ಹೊಸ ಸುಧಾರಣೆಯನ್ನೂ ತಿರಸ್ಕರಿಸುವ ಸಂಕುಚಿತ ದೃಷ್ಟಿತಾಳಿದೆ. ಇದೂ ಒಂದು ದಿನ ನಾಶವಾದೀತು.

ಜಾನಪದ ಗೀತೆಯಾದರೂ ಈ ದಿನ ಠಾಕೂರರಂಥ ಕವಿಗಳಿಗೂ ಹಲವು ಆಧುನಿಕ ಕೃತಿಕಾರರಿಗೂ ನವೀನಸ್ಫೂರ್ತಿಯನ್ನು ಕೊಡುತ್ತಲಿದೆ. ಮುಂದಿನ ಭಾರತದ ಸಂಗೀತದ ಪುನರುಜ್ಜೀವನದ , ಸಂಸ್ಕೃತಿಯಲ್ಲಿ ಮಾರ್ಗ, ದೇಶಿ ಪದ್ಧತಿಗಳ ಈ ರೀತಿಯ ಮಿಲನ, ಪ್ರಭಾವಗಳನ್ನು ನಾವು ಕಾಣಬಹುದೆಂದು ನಿರೀಕ್ಷೆ. ಇಷ್ಟೆಲ್ಲ ಭಾರತೀಯ ಸಂಗೀತವು ಈ ಜನರ ದೃಷ್ಟಿಯಿಂದಾಯಿತು. ಇದು ಪಾಶ್ಚಾತ್ಯರಿಗೂ ಕೆಲವು ಬಗೆಯಿಂದ ಸ್ಫೂರ್ತಿಕೊಡಬಲ್ಲದು. ಭಾರತ ಸಂಗೀತದ ಗತಿ, ಮಾರ್ದವವು ಪರದೇಶೀಯ ಸಂಗೀತಕ್ಕೆ ಪುಟಕೊಡಬಲ್ಲುದು. ಎಲ್ಲಿ ಬರಿಯ "ಸೌರಸ್ಯ" ಒಂದರಿಂದ ಗತಿ ಮಾರ್ದವಗಳ ಅನುಭವವೇ ನಾಶವಾಗಿದೆಯೋ ಅವರಿಗೆ ಇದರಿಂದ ಹೊಳಪು ಬಂದೀತು. ಅಷ್ಟೇ ಅಲ್ಲ. ಇನ್ನೊಂದು ಸಂಬಂಧ ಇವೆರಡಕ್ಕೂ ಉಂಟು. ಯೂರೋಪಿನ ಮಧ್ಯಯುಗದ ಸಂಗೀತಕ್ಕೂ ಈ ದೇಶದ ಗಾನಕ್ಕೂ ಹೆಚ್ಚಿನ ಸಂಬಂಧ ಕಾಣುವುದು. ಯೂರೋಪಿನಲ್ಲಿ ಇಂದು ಈ ಸಂಬಂಧವು ಮೃತವಾಗಿದ್ದರೂ ಇಲ್ಲಿ ಬದುಕಿ ನಿಂತಿದೆ.

ಭಾರತೀಯ ಗಾನ, ಪ್ರಪಂಚದ ಎಲ್ಲ ಕಡೆಯ ಕಲಾನುಭವಗಳಂತೆ ಎರಡು ತೆರನಾಗಿದೆ. ಅದು ಅರಿವು, ಅರಿವುಗಾಣದ್ದು - ಇವುಗಳ ಎಡೆಯಲ್ಲಿ ಸುಳಿದಾಡುತ್ತಿದೆ. ಯಾವುದು ಇವೆರಡರಲ್ಲಿ ಅಧಿಕವಾದರೂ ನಿಜವಾದ ಆತ್ಮಪ್ರಕಾಶಕ್ಕೆ ತೊಡಕೇ ಸರಿ. ನಮ್ಮ ಸಂಗೀತದಲ್ಲಿ ನಮ್ಮ ಅರಿವು ಕಡಮೆಯಾದಂತೆ, ಸಂಸ್ಕೃತಿಯ ಮಟ್ಟ ತಗ್ಗುವುದು; ಇಂಥದನ್ನು ಹಲವು ಮೂಲ ನಿವಾಸಿಗಳ ಸಂಗೀತದಲ್ಲಿ ಕಾಣಬಹುದು. ತಿರುವಾಂಕೂರಿನ ಉರಾಲಿಗಳು, ಸಿಲೋನಿನ ವೇದ್ಧರು ಈ ಸಾಲಿನವರು. ಅವರಲ್ಲಿ ಏನೋ ಒಂದು ಬಗೆಯ ಸಂಗೀತದ ಯತ್ನ ಕಾಣುವುದು. ಅರಿವಿನ ಹಾದಿಯನ್ನು ಕಂಡುಹಿಡಿಯಲು ಹೊಡೆದಾಡುವ ಶ್ರಮ ಕಾಣುತ್ತದೆ. ಆದರೆ ನಿಷ್ಫಲಯತ್ನದಂತೆ, ಕೇವಲ ಸ್ವಲ್ಪವೇ ರಾಗ, ಪ್ರವಾಹ ಗತಿಗಳಲ್ಲಿ ಅದು ಅಂತ್ಯವಾಗುತ್ತದೆ.

ಇದಕ್ಕೆ ಪ್ರತಿ ವಿರೋಧವೆಂಬಂತೆ ಕಾಣುವುದು 'ಮಾರ್ಗ' ಪದ್ಧತಿಯ ಸಂಗೀತ. ಇಲ್ಲಿ ಪ್ರತಿಯೊಂದೂ ಅರಿವಿಗಿಂತ, ಉದ್ದೇಶದಿಂದ ತಿಕ್ಕಿ ತೀದು ಹದವಾದುದು. ಪ್ರಸಂಗಾನುಸಾರ ಬರುವುದೆಂಬುದು ಯಾವುದೂ ಇಲ್ಲ. ಇಲ್ಲಿನ ಸಂತೋಷವೆಂದರೆ–ಮೊದಲೇ ಸಿದ್ಧಾಂತವಾದ ವಿವಿಧ ಸಂಗತಿ ಆಲಾಪಗಳ ಮೇಳದಿಂದ ದೊರೆಯಬೇಕಾದುದು. ಇಂಥ ಯತ್ನಗಳಲ್ಲಿ ಹಲವು ರಾಗ ರಾಗಿಣಿಗಳ ಪರಂಪರೆಯನ್ನು ನಾವು ಪರಿಶೀಲಿಸಬಹುದು.

ಭಾರತೀಯ ಸಂಸ್ಕೃತಿಯ ಪ್ರತಿಯೊಂದು ಅಂಗದಲ್ಲೂ ಸಂಪ್ರದಾಯವೇ ಸರ್ವಸ್ವವಾಗಿ ಕೇವಲ ಅಚೇತನ ಅನುಕರಣೆಯೇ ಉಳಿಯುವ ಭೀತಿ ಬಹಳ. "ದಿನಹೋದಂತೆ, ಕಲಿಯುಗ ಬೆಳೆದಂತೆ ಎಲ್ಲ ಕೆಡುತ್ತ ಬರುವುದು" ಎಂಬ ಧಾರ್ಮಿಕ ಭ್ರಾಂತಿಯೇ ಇದಕ್ಕೆ ಕಾರಣ. ಈ ಭ್ರಾಂತಿಯಿಂದ ಎಲ್ಲರೂ ಹಿಂದಿನ ಆದರ್ಶಕ್ಕೆ ಗಂಟು ಬಿದ್ದು ಬರಿಯ ಆದರ ಅನುಸರಣೆಯಿಂದಲೇ ತೃಪ್ತರಾಗುವರು. ನಿನ್ನೆಯವರಿಗೆ ಮೊನ್ನಿನವರು ಮಾದರಿ; ಇಂದಿನವರಿಗೆ ನಿನ್ನೆಯ ಜನರು; ನಾಳಿನವರಿಗೆ ಇಂದಿನವರು–ಇದರಿಂದ ಹಾನಿಯಲ್ಲದೆ ಬೇರೆಯಲ್ಲ. ಜನಜೀವನದಲ್ಲಿ ಸಂಗೀತ ಒಂದಾಗಿದ್ದರೂ ಭೀತಿ ಇದ್ದಿಲ್ಲವಾದರೂ ಇದು ಕೇವಲ ಕೆಲವರ ಸೊತ್ತಾಗುತ್ತ ಬಂದುದರಿಂದ ಕೆಳಕ್ಕೆ ಇಳಿಯಿತು. ಅನುಕರಣೆ ದಾಸ್ಯಗಳೇ ಸಂಗೀತಸರ್ವಸ್ವವಾಗಿ, ಪ್ರತಿಭೆಗೆ ಸ್ಥಾನ ಇಲ್ಲವಾಯಿತು. ಅರಿವು ಪ್ರತಿಹೆಜ್ಜೆಗೂ ಅಡ್ಡ ನಿಂತು, ನೇಮ ನಿಯಮಗಳ ಹೇರೆಯಿಂದಾಗಿ 'ಕಲೆ' 'ಕಸಬು' ಆಗಿ ಪರಿಣಾಮಗೊಂಡಿತು.

ಸಾಮಾನ್ಯವಾಗಿ ಜನಪದ ಸಂಗೀತವು ಈ ಎರಡು ಧ್ರುವಗಳ ನಡುವಿನದು. ಅತ್ತ ಭಾವನೆಯನ್ನು ಅರಿವೂ ಕೊಲ್ಲಕೂಡದು; ಇತ್ತ ಅರಿವುಗಾಣದಿರುವಿಕೆಯಿಂದ ಭಾವನೆ ಬೆಳಕಿಗೆ ಬರಲು ತೊಡಕೂ ಬರಬಾರದು. ಇವೆರಡರ ಸಮತೋಲ ಹೇಗೆ ಬರಬೇಕೆಂದು ನಾನು ಹೇಳಲಾರೆ. ಅದು ಭಾರತೀಯರು ಮನಗಾಣಬೇಕಾದ ವಿಚಾರ. ಪಾಶ್ಚಾತ್ಯರ ಸಹಾಯ ಪ್ರಯೋಜನವಿಲ್ಲ. ಆಂತರಿಕ ಬೆಳವಣಿಗೆಯೇ ಒಂದೇ ಒಂದು ದಾರಿ.

ಪಾಶ್ಚಾತ್ಯ ವಾದ್ಯ, ಸಂಗೀತಗಳೆರಡೂ ಇಲ್ಲಿನ ಗಾನಕ್ಕೆ ಹಾನಿ ಮಾಡಬಹುದು. ಬ್ಯಾಂಡಿನಂಥ ವಾದ್ಯ ಇಲ್ಲಿಗೆ ಒಗ್ಗಲಾರದು. ಸೌರಸ್ಯ ಪ್ರಧಾನವಾದ ಪಾಶ್ಚಾತ್ಯಗೀತೆ ಭಾರತೀಯನ ಕಿವಿಗೆ ಸೇರುವುದು ಕಷ್ಟ. ಅದು ಮಾರ್ದವಕ್ಕೆ ನುರಿತುದು. ಹೀಗಾಗಿ ನೀವು ನೂರೊಂದು ವಾದ್ಯಗಳನ್ನು ಸೇರಿಸಿದರೂ, ಭಾರತೀಯ "ಆರ್ಕೆಸ್ಟ್ರಾ" ನಿರ್ಮಾಣವಾಗುವುದು ಶಕ್ಯವಿಲ್ಲ. ತಿದ್ದಿದ ಭಾರತೀಯ ಮಾರ್ದವಪದ್ಧತಿಯ ಸಂಗೀತದ ಮೇಲೆ, ಇನ್ನೊಂದು ಪ್ರಬುದ್ಧ ಸೌರಸ್ಯ ಪಾಶ್ಚಾತ್ಯಗಾನ ಪದ್ಧತಿಯನ್ನು ಹೇರಿಸುವುದು ಹಿಂದೀ ಸಂಗೀತವನ್ನು ಕೊಲ್ಲುವುದೇ ಸರಿ.

ಈ ದೇಶದಲ್ಲಿ ಬ್ಯಾಂಡುಗಳ ವರ್ಚಸ್ಸು ಕಡಮೆಯಾದರೂ ಹಾರ್ಮೋನಿಯಂ ಹಾವಳಿ ಅತ್ಯಧಿಕವಾಗಿದೆ. ಸರಿಯಾಗಿ ಶ್ರುತಿಗೊಳ್ಳದ, (ಶ್ರುತಿ ಗೊಂಡಿದ್ದರೂ ತಪ್ಪಾಗಿ ಶ್ರುತಿಯಾದ) ನಿಶ್ಚಿತ ಮೆಟ್ಟಲುಳ್ಳ ಹಾರ್ಮೋನಿಯಂ ಇಲ್ಲಿನ ಗಾನಕ್ಕೆ ಎಂದೂ ಹಿತಮಾಡಲಾರದು. ಇಲ್ಲಿನ ಗಾನಕ್ಕೆ ಇಲ್ಲಿನ ತಂಬೂರದಂಥ ಶ್ರುತಿಯೇ ಸರಿಯಾದುದು. ಹಾರ್ಮೋನಿಯಂ ಕರ್ಕಶವಾದುದು. ಅದಕ್ಕೆ ರೂಢಿಯಾದ ಗಾಯಕನು, ಅಫೀಮ ಸೇವಕನು ಅದಿಲ್ಲದೆ ಬದುಕಲಾರನಾಗುವಂತೆ, ಈ ವಾದ್ಯವಿಲ್ಲದೆ ಬಾಯಿ ತೆರೆಯಲು ಕಷ್ಟವಾಗುವುದು. ಹಿಂದೂಸ್ಥಾನವು ಈ ವಾದ್ಯವನ್ನು ನಿವಾರಿಸಿಕೊಳ್ಳದಿದ್ದರೆ ಸಾಧ್ಯವೇ ಇಲ್ಲ.

ಪಾಶ್ಚಾತ್ಯರ ಅನುಕರಣೆಯಿಂದ ಇಲ್ಲಿನ ಸಂಗೀತ ಸುಧಾರಣೆಯನ್ನು ಮಾಡದೆ, ಮೈಸೂರ ಸಂಸ್ಥಾನದ ಆಸ್ಥಾನಬ್ಯಾಂಡಿನವರಲ್ಲಿ ಕೆಲಸ ಮಾಡುತ್ತಿರುವ ಮಿಹಿರಭರಣ, ತಿಮಿರಭರಣ ಎಂಬಿಬ್ಬರು ಬ್ರಾಹ್ಮಣ ಸೋದರರಂತೆ, ಯತ್ನಮಾಡಿದಲ್ಲಿ ಏನಾದರೊಂದು ಹೊಸ ಕಳೆ ಭಾರತೀಯ ಸಂಗೀತಕ್ಕೆ, ಅದರಲ್ಲೂ ಎರಡು ಮೂರು ಸಪ್ತಕಗಳಲ್ಲಿ ಒಮ್ಮೆಗೇ ಏಕಮೇಳದಿಂದ (Polyphony) ಕೆಲಸ ಮಾಡಲು ಬರುವ ದಾರಿ ಸಿಕ್ಕೀತು................ಜಾನಪದ ಗೀತೆಯಿಂದ ಸ್ಫೂರ್ತಿ ಬಯಸುವ ಭಾರತೀಯ ಸಂಗೀತಗಾರರಿಗೆ ಇಲ್ಲಿ ತುಂಬ ಅವಕಾಶವಿದೆ. ಹೇಗೆ ಒಬ್ಬ ರಷ್ಯನ್ ಕೃತಿಕಾರನು ರಷ್ಯನ್ ಜಾನಪದ ಗೀತೆಯನ್ನು ಆಶ್ರಯಿಸಬೇಕೋ ಅದೇ ರೀತಿಯಿಂದ ಇಲ್ಲಿನ ಕೃತಿಕಾರರು ತಂತಮ್ಮ ಜಾನಪದ ಗೀತೆಗಳ ಕಡೆಗೆ ದೃಷ್ಟಿ ತಿರುಗಿಸಬೇಕಾಗಿದೆ. ಅವರವರ ಕ್ಷೇತ್ರಗಳಲ್ಲಿ ಬೆಳೆದ ರಚಯಿತರಿಗೆ ಹೆಚ್ಚಿನ ಪ್ರಭಾವವಿರುವುದು.

ಮಾರ್ಗಪದ್ಧತಿಯಲ್ಲಿ ಸುಧಾರಣೆ ಮಾಡುವ ಇಲ್ಲವೆ ಹೊಸರಚನೆ ಮಾಡಲು ಯತ್ನಿಸುವವರ ರೀತಿ ಬೇರೆಯಾಗುವುದು. ಈಗಿನ ಸಂಗೀತಗಾರರ ನೇಮನಿಯಮಗಳಿಂದಲೇ ಅವರಿಗೆ ಪ್ರಯೋಜನವಾಗಲಾರದು. ಇಲ್ಲಿ ಉತ್ತರ ದಕ್ಷಿಣದ ಗಾನರೀತಿಗಳು ಬೇರೆಯಾಗಿವೆ. ಮಾತ್ರವಲ್ಲ–ಉತ್ತರದಲ್ಲೇ ಒಂದೇ ರಾಗವನ್ನು ಬೇರೆಬೇರೆ ಪದ್ಧತಿಯಿಂದ ಹಾಡುವ 'ಘರಾಣ'ಗಳು ಸಾಕಷ್ಟು ಸಂಖ್ಯೆಯಿಂದ ಇವೆ. "ಭಾತ ಖಂಡೆ"ಯರಂತೆ, ತಮ್ಮ ಜೀವನವನ್ನೇ ಈ ಕಾರ್ಯಕ್ಕೆ ಎಸಗಿ, ಒಂದೇ ರಾಗದ ಎಲ್ಲ ರೂಪಗಳನ್ನೂ ತಿಳಿದು ಅದಕ್ಕೊಂದು ಏಕರೂಪತೆ ಕೊಡುವ ಯತ್ನ ಇನ್ನೂ ಹಲವರು ಮಾಡಬೇಕಾಗಿದೆ. ಭಾತಖಂಡೆಯವರ ಯತ್ನವು ಈ ದೃಷ್ಟಿಯಿಂದ ಬಹಳ ಹೆಚ್ಚಿನದು.

ಇನ್ನೊಂದು ಮುಂದಿನ ಜನರ ಪಾಲಿನ ಪ್ರಶ್ನೆಯಿದೆ: ಹಳೆಯ ಸಂಪ್ರದಾಯವಾದಿಗಳು ಸಹ ತಮ್ಮ ಗಾಯನ ಪದ್ಧತಿಯನ್ನು ಸೌಂದರ್ಯಶಾಸ್ತ್ರದ ದೃಷ್ಟಿಯಿಂದಲೂ ವಿಮರ್ಶೆ ಮಾಡಬೇಕಾಗಿದೆ. ಭಾರತೀಯರ ಜೀವನಕ್ಕೆ ಸಂಬಂಧಪಟ್ಟ ಇತರ ಅನೇಕ ಸಂಗತಿಗಳಂತೆ, ಇಲ್ಲಿನ ಸಂಗೀತ ಪದ್ಧತಿಗೂ ಸಹ ಆಯಾ ಅಳತೆಯೇ ಕೆಟ್ಟುಹೋದಂತೆ ಇದೆ. ಮಾರ್ದವ - ಅಲಂಕಾರ ಇವುಗಳೊಳಗಿನ ತೋಲವೇ ನಾಶವಾಗಿದೆ. ಹೇಗೆ ಇಲ್ಲಿನ ಗುಡಿಗಳಲ್ಲಿ ಅಲಂಕಾರ ಅಧಿಕವಾಗಿ ವಾಸ್ತುಶೈಲಿ ನಾಶವಾಗಿದೆಯೋ ಅದರಂತೆ ಗಾನದ ಸ್ಥಿತಿಯಾಗಿದೆ.

ಇಲ್ಲಿನ ಗವಯಿ ಭಾಗವತರುಗಳಲ್ಲಿ ದಾನಿಯನ್ನು ಮೆಚ್ಚಿಸುವುದು, ವ್ಯವಸಾಯಿಗಳನ್ನು ಸೋಲಿಸುವುದು ಇವೇ ಹವ್ಯಾಸವಾಗಿ, ದಿನಕ್ಕೆ ಆರೆಂಟು ತಾಸು ಹಾಡುತ್ತಿದ್ದು ಕೊನೆಗೆ ಪರಿಪೂರ್ಣಶಾಸ್ತ್ರದ ಚಿಪ್ಪು ಮಾತ್ರ ಉಳಿದು, ಕಂಠ (ಶಾರೀರ) ಪೂರ ಹೋಗುತ್ತಿರುವುದೇ ಕಣ್ಣಿಗೆ ಬೀಳುತ್ತದೆ. ಈಗಿನ ಕಂಠವಿಲ್ಲದ ಹಾಡುಗಾರರೇ ಬಹಳವಾಗಿ, ಅದೇ ಪದ್ಧತಿಯಾಗಿ ನಿಂತಿದೆ. ಇದು ಪಾಶ್ಚಾತ್ಯನೊಬ್ಬನ ತಿರಸ್ಕಾರದ ದೃಷ್ಟಿಯೆಂದು ತಿಳಿಯಬೇಡಿರಿ. ಸಂಸ್ಕೃತ ಗ್ರಂಥಗಳಲ್ಲೇ ಈಗಿನ ಸ್ವರಹೀನ, ವಿಕೃತಮುಸುಡಿನ, ಗಾನವನ್ನು ಹರಿದು ತಿನ್ನಲು ಕುಳಿತ ಗವಯಿಗಳ ವಿಚಾರವಾಗಿ ಏನುಹೇಳಿದೆ ಎಂದು ಓದಿದರೆ ನಿಮಗೇ ತಿಳಿದೀತು:

> ಹಾಡುವಾಗ ಕತ್ತು ಉದ್ದ ಮಾಡುವವನು ಒಂಟೆ;
> ಕರ್ಕಶಧ್ವನಿಯಿಂದ, ಗಟ್ಟಿಯಾಗಿ ಕಿರಿಚುವವನು ಉದ್ಘೃಷ್ಟ;
> ಬಾಯಿ ಆಕಳಿಸಿ ಹಾಡುವವನು ಹರಕು ಬಾಯಿಯವನು;
> ಒರಟಾಗಿ, ಝೇಂಕಾರವಿಲ್ಲದೆ, ತಿರುಳಿಲ್ಲದೆ, ಶೃತಿಯಿಲ್ಲದೆ, ಕಾಗೆಯಂತೆ ಹಾಡುವವನು ಶಾರೀರ ಸುಖವಿಲ್ಲದವನು.

ಎಂದು ಮೊದಲಾಗಿ ಹೇಳಿಲ್ಲವೆ! ಇಂದಿನ ಭಾರತದ ವ್ಯವಸಾಯಿ ಗಾಯಕರಲ್ಲಿ ೧೦೦ ರಲ್ಲಿ ೯೯ ಮಂದಿ ಇಂಥವರೇ.

ಗಾಯಕನಾಗಲು ಇಚ್ಛಿಸುವವನಿಗೆ ಪ್ರಥಮತಃ ಬೇಕಾದುದು ನಿಜವಾದ ಸೊಗಸು, ಇಂಪು, ಸ್ವರಗಾಂಭೀರ್ಯ. ಈ ದೃಷ್ಟಿಯಿಂದ ಮುಕ್ಕಾಲುಪಾಲು ಗಾಯಕರು ವ್ಯರ್ಥರು. ಕೆಲವರು ಎದೆಯಿಂದ ಗುರುಗುರಿಸುವರು. ಕೆಲವರು ಕಳ್ಳದನಿಯಿಂದ ಕಿರಿಚುವರು. ಸ್ವಾಭಾವಿಕ ಸುಂದರ ಗಂಟಲು ಬಾಯಿಗಳೇ ಕೇಳಿಸವು. ಕಳ್ಳದನಿಯ ಹಾಡುಗಾರಿಕೆ ಇಲ್ಲಿನವರಿಗೆ ಅರಬಿಯರ ಸಂಪರ್ಕದಿಂದ ಬಂದಿತೋ ಏನೋ ....ಅಂತು ಈಗಿನ ಸಾಂಪ್ರದಾಯಿಕರು ಸಹ ಸಂಸ್ಕೃತಶಾಸ್ತ್ರಗಳ ಕಡೆಗೆ ಗಮನ ಕೊಡುವುದು ತೀರ ಆವಶ್ಯಕವಾಗಿದೆ. ಇಂದು ಭಾರತದಲ್ಲಿ ಈ ಆಂತರಿಕ ಆಕಾಂಕ್ಷೆ, ಉಲ್ಬಣಗಳು ಬಲವತ್ತರವಾದುದರಿಂದ ಏನಾದರೊಂದು ಒಳ್ಳೆಯ ಪ್ರತಿಫಲ ಉಂಟಾಗಬಹುದೆಂದು ನನಗೆ ಅನಿಸುತ್ತದೆ. ಹಿಂದೂಸ್ಥಾನದ ಗಾನಕ್ಕೆ ಸಹಜವಾದ, ಅದರ ಅಭಿಲಾಷೆಗೆ ತಕ್ಕುದಾದ ಒಂದು ಸಂಸ್ಕಾರ ಉಂಟಾದೀತು. ಆದರೆ ಅದನ್ನು ಗಳಿಸಲು ಮುಖ್ಯವಾಗಿ ಬೇಕಾದ ಗುಣವೆಂದರೆ–ಒಂದು ತೆರೆದ ಮನಸ್ಸು; ಇನ್ನೊಂದು ಪದ್ಧತಿಯನ್ನು ಸಹಕಾರ ಪ್ರೀತಿಗಳಿಂದ ಕಾಣುವ ದೃಷ್ಟಿ.

ಇದಕ್ಕೆ ಪ್ರತಿ ವಿರೋಧವೆಂಬಂತೆ ಕಾಣುವುದು 'ಮಾರ್ಗ' ಪದ್ಧತಿಯ ಸಂಗೀತ. ಇಲ್ಲಿ ಪ್ರತಿಯೊಂದೂ ಅರಿವಿಗಿಂತ, ಉದ್ದೇಶದಿಂದ ತಿಕ್ಕಿ ತೇದು ಹದವಾದುದು. ಪ್ರಸಂಗಾನುಸಾರ ಬರುವುದೆಂಬುದು ಯಾವುದೂ ಇಲ್ಲ. ಇಲ್ಲಿನ ಸಂತೋಷವೆಂದರೆ—ಮೊದಲೇ ಸಿದ್ಧಾಂತವಾದ ವಿವಿಧ ಸಂಗತಿ ಆಲಾಪಗಳ ಮೇಳದಿಂದ ದೊರೆಯಬೇಕಾದುದು. ಇಂಥ ಯತ್ನಗಳಲ್ಲಿ ಹಲವು ರಾಗ ರಾಗಿಣಿಗಳ ಪರಂಪರೆಯನ್ನು ನಾವು ಪರಿಶೀಲಿಸಬಹುದು.

ಭಾರತೀಯ ಸಂಸ್ಕೃತಿಯ ಪ್ರತಿಯೊಂದು ಅಂಗದಲ್ಲೂ ಸಂಪ್ರದಾಯವೇ ಸರ್ವಸ್ವವಾಗಿ ಕೇವಲ ಅಚೇತನ ಅನುಕರಣೆಯೇ ಉಳಿಯುವ ಭೀತಿ ಬಹಳ. "ದಿನಹೋದಂತೆ, ಕಲಿಯುಗ ಬೆಳೆದಂತೆ ಎಲ್ಲ ಕೆಡುತ್ತ ಬರುವುದು" ಎಂಬ ಧಾರ್ಮಿಕ ಭ್ರಾಂತಿಯೇ ಇದಕ್ಕೆ ಕಾರಣ. ಈ ಭ್ರಾಂತಿಯಿಂದ ಎಲ್ಲರೂ ಹಿಂದಿನ ಆದರ್ಶಕ್ಕೆ ಗಂಟು ಬಿದ್ದು ಬರಿಯ ಅದರ ಅನುಸರಣೆಯಿಂದಲೇ ತೃಪ್ತರಾಗುವರು. ನಿನ್ನೆಯವರಿಗೆ ಮೊನ್ನಿನವರು ಮಾದರಿ; ಇಂದಿನವರಿಗೆ ನಿನ್ನೆಯ ಜನರು; ನಾಳಿನವರಿಗೆ ಇಂದಿನವರು—ಇದರಿಂದ ಹಾನಿಯಲ್ಲದೆ ಬೇರೆಯಲ್ಲ. ಜನಜೀವನದಲ್ಲಿ ಸಂಗೀತ ಒಂದಾಗಿದ್ದರೂ ಭೀತಿ ಇದ್ದಿಲ್ಲವಾದರೂ ಇದು ಕೇವಲ ಕೆಲವರ ಸೊತ್ತಾಗುತ್ತ ಬಂದುದರಿಂದ ಕೆಳಕ್ಕೆ ಇಳಿಯಿತು. ಅನುಕರಣೆ ದಾಸ್ಯಗಳೇ ಸಂಗೀತಸರ್ವಸ್ವವಾಗಿ, ಪ್ರತಿಭೆಗೆ ಸ್ಥಾನ ಇಲ್ಲವಾಯಿತು. ಅರಿವು ಪ್ರತಿಹೆಜ್ಜೆಗೂ ಅಡ್ಡನಿಂತು, ನೇಮ ನಿಯಮಗಳ ಹೇರೆಯಿಂದಾಗಿ 'ಕಲೆ' 'ಕಸಬು' ಆಗಿ ಪರಿಣಾಮಗೊಂಡಿತು.

ಸಾಮಾನ್ಯವಾಗಿ ಜನಪದ ಸಂಗೀತವು ಈ ಎರಡು ಧ್ರುವಗಳ ನಡುವಿನದು. ಅತ್ತ ಭಾವನೆಯನ್ನು ಅರಿವೂ ಕೊಲ್ಲಕೂಡದು; ಇತ್ತ ಅರಿವುಗಾಣದಿರುವಿಕೆಯಿಂದ ಭಾವನೆ ಬೆಳಕಿಗೆ ಬರಲು ತೊಡಕೂ ಬರಬಾರದು. ಇವೆರಡರ ಸಮತೋಲ ಹೇಗೆ ಬರಬೇಕೆಂದು ನಾನು ಹೇಳಲಾರೆ. ಅದು ಭಾರತೀಯರು ಮನಗಾಣಬೇಕಾದ ವಿಚಾರ. ಪಾಶ್ಚಾತ್ಯರ ಸಹಾಯ ಪ್ರಯೋಜನವಿಲ್ಲ. ಆಂತರಿಕ ಬೆಳವಣಿಗೆಯೇ ಒಂದೇ ಒಂದು ದಾರಿ.

-ಪಾಶ್ಚಾತ್ಯ ವಾದ್ಯ, ಸಂಗೀತಗಳೆರಡೂ ಇಲ್ಲಿನ ಗಾನಕ್ಕೆ ಹಾನಿ ಮಾಡಬಹುದು. ಬ್ಯಾಂಡಿನಂಥ ವಾದ್ಯ ಇಲ್ಲಿಗೆ ಒಗ್ಗಲಾರದು. ಸೌರಸ್ಯ ಪ್ರಧಾನವಾದ ಪಾಶ್ಚಾತ್ಯಗೀತೆ ಭಾರತೀಯನ ಕಿವಿಗೆ ಸೇರುವುದು ಕಷ್ಟ. ಅದು ಮಾರ್ದವಕ್ಕೆ ನುರಿತುದು. ಹೀಗಾಗಿ ನೀವು ನೂರೊಂದು ವಾದ್ಯಗಳನ್ನು ಸೇರಿಸಿದರೂ, ಭಾರತೀಯ "ಆರ್ಕೆಸ್ಟ್ರಾ" ನಿರ್ಮಾಣವಾಗುವುದು ಶಕ್ಯವಿಲ್ಲ. ತಿದ್ದಿದ ಭಾರತೀಯ ಮಾರ್ದವಪದ್ಧತಿಯ ಸಂಗೀತದ ಮೇಲೆ, ಇನ್ನೊಂದು ಪ್ರಬುದ್ಧ ಸೌರಸ್ಯ ಪಾಶ್ಚಾತ್ಯಗಾನ ಪದ್ಧತಿಯನ್ನು ಹೇರಿಸುವುದು ಹಿಂದೀ ಸಂಗೀತವನ್ನು ಕೊಲ್ಲುವುದೇ ಸರಿ.

ಈ ದೇಶದಲ್ಲಿ ಬ್ಯಾಂಡುಗಳ ವರ್ಚಸ್ಸು ಕಡಮೆಯಾದರೂ ಹಾರ್ಮೋನಿಯಂ ಹಾವಳಿ ಅತ್ಯಧಿಕವಾಗಿದೆ. ಸರಿಯಾಗಿ ಶ್ರುತಿಗೊಳ್ಳದ, (ಶ್ರುತಿ ಗೊಂಡಿದ್ದರೂ ತಪ್ಪಾಗಿ ಶ್ರುತಿಯಾದ) ನಿಶ್ಚಿತ ಮೆಟ್ಟಲುಳ್ಳ ಹಾರ್ಮೋನಿಯಂ ಇಲ್ಲಿನ ಗಾನಕ್ಕೆ ಎಂದೂ ಹಿತಮಾಡಲಾರದು. ಇಲ್ಲಿನ ಗಾನಕ್ಕೆ ಇಲ್ಲಿನ ತಂಬೂರದಂಥ ಶ್ರುತಿಯೇ ಸರಿಯಾದುದು. ಹಾರ್ಮೋನಿಯಂ ಕರ್ಕಶವಾದುದು. ಅದಕ್ಕೆ ರೂಢಿಯಾದ ಗಾಯಕನು, ಅಫೀಮ ಸೇವಕನು ಅದಿಲ್ಲದೆ ಬದುಕಲಾರನಾಗುವಂತೆ, ಈ ವಾದ್ಯವಿಲ್ಲದೆ ಬಾಯಿ ತೆರೆಯಲು ಕಷ್ಟವಾಗುವುದು. ಹಿಂದೂಸ್ಥಾನವು ಈ ವಾದ್ಯವನ್ನು ನಿವಾರಿಸಿಕೊಳ್ಳದಿದ್ದರೆ ಸಾಧ್ಯವೇ ಇಲ್ಲ.

ಪಾಶ್ಚಾತ್ಯರ ಅನುಕರಣೆಯಿಂದ ಇಲ್ಲಿನ ಸಂಗೀತ ಸುಧಾರಣೆಯನ್ನು ಮಾಡದೆ, ಮೈಹಾರ ಸಂಸ್ಥಾನದ ಆಸ್ಥಾನಬ್ಯಾಂಡಿನವರಲ್ಲಿ ಕೆಲಸ ಮಾಡುತ್ತಿರುವ ಮಿಹಿರಭರಣ, ತಿಮಿರಭರಣ ಎಂಬಿಬ್ಬರು ಬ್ರಾಹ್ಮಣ ಸೋದರರಂತೆ, ಯತ್ನಮಾಡಿದಲ್ಲಿ ಏನಾದರೊಂದು ಹೊಸ ಕಳೆ ಭಾರತೀಯ ಸಂಗೀತಕ್ಕೆ, ಅವರಲ್ಲೂ ಎರಡು ಮೂರು ಸಪ್ತಕಗಳಲ್ಲಿ ಒಮ್ಮೆಗೇ ಏಕಮೇಳದಿಂದ (Polyphony) ಕೆಲಸ ಮಾಡಲು ಬರುವ ದಾರಿ ಸಿಕ್ಕೀತು.................ಜಾನಪದ ಗೀತೆಯಿಂದ ಸ್ಫೂರ್ತಿ ಬಯಸುವ ಭಾರತೀಯ ಸಂಗೀತಗಾರರಿಗೆ ಇಲ್ಲಿ ತುಂಬ ಅವಕಾಶವಿದೆ.

ಹೇಗೆ ಒಬ್ಬ ರಷ್ಯನ್ ಕೃತಿಕಾರನು ರಷ್ಯನ್ ಜಾನಪದ ಗೀತೆಯನ್ನು ಆಶ್ರಯಿಸಬೇಕೋ ಅದೇ ರೀತಿಯಿಂದ ಇಲ್ಲಿನ ಕೃತಿಕಾರರು ತಂತಮ್ಮ ಜಾನಪದ ಗೀತೆಗಳ ಕಡೆಗೆ ದೃಷ್ಟಿ ತಿರುಗಿಸಬೇಕಾಗಿದೆ. ಅವರವರ ಕ್ಷೇತ್ರಗಳಲ್ಲಿ ಬೆಳೆದ ರಚಯಿತರಿಗೆ ಹೆಚ್ಚಿನ ಪ್ರಭಾವವಿರುವುದು.

ಮಾರ್ಗಪದ್ಧತಿಯಲ್ಲಿ ಸುಧಾರಣೆ ಮಾಡುವ ಇಲ್ಲವೆ ಹೊಸರಚನೆ ಮಾಡಲು ಯತ್ನಿಸುವವರ ರೀತಿ ಬೇರೆಯಾಗುವುದು. ಈಗಿನ ಸಂಗೀತಗಾರರ ನೇಮನಿಯಮಗಳಿಂದಲೇ ಅವರಿಗೆ ಪ್ರಯೋಜನವಾಗಲಾರದು. ಇಲ್ಲಿ ಉತ್ತರ ದಕ್ಷಿಣದ ಗಾನರೀತಿಗಳು ಬೇರೆಯಾಗಿವೆ. ಮಾತ್ರವಲ್ಲ—ಉತ್ತರದಲ್ಲೇ ಒಂದೇ ರಾಗವನ್ನು ಬೇರೆಬೇರೆ ಪದ್ಧತಿಯಿಂದ ಹಾಡುವ 'ಘರಾಣ'ಗಳು ಸಾಕಷ್ಟು ಸಂಖ್ಯೆಯಿಂದ ಇವೆ. "ಭಾತ ಖಂಡೆ"ಯರಂತೆ, ತಮ್ಮ ಜೀವನವನ್ನೇ ಈ ಕಾರ್ಯಕ್ಕೆ ಎಸಗಿ, ಒಂದೇ ರಾಗದ ಎಲ್ಲ ರೂಪಗಳನ್ನೂ ತಿಳಿದು ಅದಕ್ಕೊಂದು ಏಕರೂಪತೆ ಕೊಡುವ ಯತ್ನ ಇನ್ನೂ ಹಲವರು ಮಾಡಬೇಕಾಗಿದೆ. ಭಾತಖಂಡೆಯವರ ಯತ್ನವು ಈ ದೃಷ್ಟಿಯಿಂದ ಬಹಳ ಹೆಚ್ಚಿನದು.

ಇನ್ನೊಂದು ಮುಂದಿನ ಜನರ ಪಾಲಿನ ಪ್ರಶ್ನೆಯಿದೆ: ಹಳೆಯ ಸಂಪ್ರದಾಯವಾದಿಗಳು ಸಹ ತಮ್ಮ ಗಾಯನ ಪದ್ಧತಿಯನ್ನು ಸೌಂದರ್ಯಶಾಸ್ತ್ರದ ದೃಷ್ಟಿಯಿಂದಲೂ ವಿಮರ್ಶೆ ಮಾಡಬೇಕಾಗಿದೆ. ಭಾರತೀಯರ ಜೀವನಕ್ಕೆ ಸಂಬಂಧಪಟ್ಟ ಇತರ ಅನೇಕ ಸಂಗತಿಗಳಂತೆ, ಇಲ್ಲಿನ ಸಂಗೀತ ಪದ್ಧತಿಗೂ ಸಹ ಆಯಾ ಆಳತೆಯೇ ಕೆಟ್ಟುಹೋದಂತೆ ಇದೆ. ಮಾರ್ದವ - ಅಲಂಕಾರ ಇವುಗಳೊಳಗಿನ ತೋಲವೇ ನಾಶವಾಗಿದೆ. ಹೇಗೆ ಇಲ್ಲಿನ ಗುಡಿಗಳಲ್ಲಿ ಅಲಂಕಾರ ಅಧಿಕವಾಗಿ ವಾಸ್ತುಶೈಲಿ ನಾಶವಾಗಿದೆಯೋ ಅದರಂತೆ ಗಾನದ ಸ್ಥಿತಿಯಾಗಿದೆ.

ಇಲ್ಲಿನ ಗವಯಿ ಭಾಗವತರುಗಳಲ್ಲಿ ದಾನಿಯನ್ನು ಮೆಚ್ಚಿಸುವುದು, ವ್ಯವಸಾಯಿಗಳನ್ನು ಸೋಲಿಸುವುದು ಇವೇ ಹವ್ಯಾಸವಾಗಿ, ದಿನಕ್ಕೆ ಆರೆಂಟು ತಾಸು ಹಾಡುತ್ತಿದ್ದು ಕೊನೆಗೆ ಪರಿಪೂರ್ಣಶಾಸ್ತ್ರದ ಚಿಪ್ಪು ಮಾತ್ರ ಉಳಿದು, ಕಂಠ (ಶಾರೀರ) ಪೂರ ಹೋಗುತ್ತಿರುವುದೇ ಕಣ್ಣಿಗೆ ಬೀಳುತ್ತದೆ. ಈಗಿನ ಕಂಠವಿಲ್ಲದ ಹಾಡುಗಾರರೇ ಬಹಳವಾಗಿ, ಅದೇ ಪದ್ಧತಿಯಾಗಿ ನಿಂತಿದೆ. ಇದು ಪಾಶ್ಚಾತ್ಯನೊಬ್ಬನ ತಿರಸ್ಕಾರದ ದೃಷ್ಟಿಯೆಂದು ತಿಳಿಯಬೇಡಿರಿ. ಸಂಸ್ಕೃತ ಗ್ರಂಥಗಳಲ್ಲೇ ಈಗಿನ ಸ್ವರಹೀನ, ವಿಕೃತಮುಸುಡಿನ, ಗಾನವನ್ನು ಹರಿದು ತಿನ್ನಲು ಕುಳಿತ ಗವಯಿಗಳ ವಿಚಾರವಾಗಿ ಏನುಹೇಳಿದೆ ಎಂದು ಓದಿದರೆ ನಿಮಗೇ ತಿಳಿದೀತು :

> ಹಾಡುವಾಗ ಕತ್ತು ಉದ್ದ ಮಾಡುವವನು ಒಂಟೆ ;
> ಕರ್ಕಶಧ್ವನಿಯಿಂದ, ಗಟ್ಟಿಯಾಗಿ ಕಿರಿಚುವವನು ಉದ್ಘೃಷ್ಟ ;
> ಬಾಯಿ ಆಕಳಿಸಿ ಹಾಡುವವನು ಹರಕು ಬಾಯಿಯವನು;
> ಒರಟಾಗಿ, ಝೇಂಕಾರವಿಲ್ಲದೆ, ತಿರುಳಿಲ್ಲದೆ, ಶೃತಿಯಿಲ್ಲದೆ, ಕಾಗೆಯಂತೆ ಹಾಡುವವನು ಶಾರೀರ ಸುಖವಿಲ್ಲದವನು.

ಎಂದು ಮೊದಲಾಗಿ ಹೇಳಿಲ್ಲವೆ! ಇಂದಿನ ಭಾರತದ ವ್ಯವಸಾಯಿ ಗಾಯಕರಲ್ಲಿ ೧೦೦ ರಲ್ಲಿ ೯೯ ಮಂದಿ ಇಂಥವರೇ.

ಗಾಯಕನಾಗಲು ಇಚ್ಛಿಸುವವನಿಗೆ ಪ್ರಥಮತಃ ಬೇಕಾದುದು ನಿಜವಾದ ಸೊಗಸು, ಇಂಪು, ಸ್ವರಗಾಂಭೀರ್ಯ. ಈ ದೃಷ್ಟಿಯಿಂದ ಮುಕ್ಕಾಲುಪಾಲು ಗಾಯಕರು ವ್ಯರ್ಥರು. ಕೆಲವರು ಎದೆಯಿಂದ ಗುರುಗುರಿಸುವರು. ಕೆಲವರು ಕಳ್ಳದನಿಯಿಂದ ಕಿರಿಚುವರು. ಸ್ವಾಭಾವಿಕ ಸುಂದರ ಗಂಟಲು ಜಾಯಿಗಳೇ ಕೇಳಿಸವು. ಕಳ್ಳದನಿಯ ಹಾಡುಗಾರಿಕೆ ಇಲ್ಲಿನವರಿಗೆ ಅರಬಿಯರ ಸಂಪರ್ಕದಿಂದ ಬಂದಿತೋ ಏನೋ ....ಅಂತು ಈಗಿನ ಸಾಂಪ್ರದಾಯಿಕರು ಸಹ ಸಂಸ್ಕೃತಶಾಸ್ತ್ರಗಳ ಕಡೆಗೆ ಗಮನ ಕೊಡುವುದು ತೀರ ಆವಶ್ಯಕವಾಗಿದೆ. ಇಂದು ಭಾರತದಲ್ಲಿ ಈ ಆಂತರಿಕ ಆಕಾಂಕ್ಷೆ, ಉಲ್ಬಣಗಳು ಬಲವತ್ತರವಾದುದರಿಂದ ಏನಾದರೊಂದು ಒಳ್ಳೆಯ ಪ್ರತಿಫಲ ಉಂಟಾಗಬಹುದೆಂದು ನನಗೆ ಅನಿಸುತ್ತದೆ. ಹಿಂದೂಸ್ಥಾನದ ಗಾನಕ್ಕೆ ಸಹಜವಾದ, ಅದರ ಅಭಿಲಾಷೆಗೆ ತಕ್ಕುದಾದ ಒಂದು ಸಂಸ್ಕಾರ ಉಂಟಾದೀತು. ಆದರೆ ಅದನ್ನು ಗಳಿಸಲು ಮುಖ್ಯವಾಗಿ ಬೇಕಾದ ಗುಣವೆಂದರೆ—ಒಂದು ತೆರೆದ ಮನಸ್ಸು; ಇನ್ನೊಂದು ಪದ್ಧತಿಯನ್ನು ಸಹಕಾರ ಪ್ರೀತಿಗಳಿಂದ ಕಾಣುವ ದೃಷ್ಟಿ.

---

# ಕನ್ನಡ ಜಾಣೆ ಹೊನ್ನಮ್ಮ

ಶ್ರೀ. ಸಿ. ಆರ್. ಶ್ರೀನಿವಾಸೈಯ್ಯಂಗಾರ್ಯರು, ಚೆನ್ನರಾಯಪಟ್ಟಣ.

(ಲೇಖನ ೧.)

ಹೊನ್ನಮ್ಮನನ್ನು ನಮ್ಮ ನಾಡಿನವರು ಎಂದೂ ಮರೆಯಲಾಗುವುದಿಲ್ಲ. ನಮ್ಮ ಮಹಿಳಾವೃಂದವಂತೂ ಆ ಕನ್ನಡ ಕಬ್ಬಿಗಿತಿಗೆ ಎಷ್ಟು ಕೃತಜ್ಞತೆಯನ್ನ ಸಲ್ಲಿಸಿದರೂ ಸಾಲದಾಗಿದೆ. ಎರಡು ಶತಮಾನಗಳ ಹಿಂದೆ ಆಕೆ ನಮ್ಮ ಮಹಿಳೆಯರ ಅಭ್ಯುದಯದಲ್ಲಿಯೂ, ಹಿತದಲ್ಲಿಯೂ, ಆಸಕ್ತಿ ವಹಿಸಿದ್ದಳೆಂದರೆ ಎಷ್ಟು ಆಶ್ಚರ್ಯಪಡಬಹುದು! ಆಕೆ ಬರಿಯ ಅಂತಃಪುರದ ಊಳಿಗದ ಹೆಂಗಸಾಗಿದ್ದರೆ ಅಂತಹ ಉತ್ತಮ ಕಾವ್ಯವನ್ನು ರಚಿಸುತ್ತಿದ್ದಳೇನು? ಎಂದಿಗೂ ಇಲ್ಲ. ಅವಳು ಒಳ್ಳೆಯ ಬುದ್ಧಿಶಾಲಿನಿ. ಧರ್ಮ, ಸಾಹಿತ್ಯ, ಎರಡನ್ನೂ ಆಕೆ ಚೆನ್ನಾಗಿ ತಿಳಿದುಕೊಂಡಿದ್ದಳು.

ಹೊನ್ನಮ್ಮನ ಜಾಣ್ಮೆ ನರಪತಿಗಳ ತನಕ ಮುಟ್ಟಿ ಅವರೇ ಆಕೆಯನ್ನು ಕಾವ್ಯರಚನೆ ಮಾಡಲು ಪ್ರೇರಿಸುವಂತೆ ಮಹಾರಾಣಿಗೆ ಹೇಳಿದರಂತೆ. ಹೊನ್ನಮ್ಮನಾದರೂ, ತನ್ನ ವಿದ್ಯಾಸಂಪತ್ತನ್ನು, ಅನುಭವಸಾರವನ್ನು, ಮಹಿಳಾವರ್ಗದ ಉನ್ನತಿಗಾಗಿಯೇ ವಿನಿಯೋಗಿಸಿ, "ಕೃತಕೃತ್ಯತೆ" ಯನ್ನು ಪಡೆದಳು.

ಅವಳು ಹಲವು ಗ್ರಂಥಗಳನ್ನು ಬರೆಯದೇ ಇರಬಹುದು. ಆದರೆ ಬರೆದಿರುವ "ಹದಿಬದೆಯ ಧರ್ಮ"ವೊಂದೇ ಆಕೆಯ ಹೆಸರನ್ನು ಕಲ್ಪಕೋಟಿಗಳ ತನಕ ಉಳಿಸಲು ಶಕ್ತವಾಗಿದೆ. ಇದು ಅಭಿಮಾನದ ಮಾತಲ್ಲ. 'ಪಾತಿವ್ರತ್ಯ ಧರ್ಮ ತತ್ವದ ಸಾರ' ವನ್ನು, 'ಸಂಜೀವನ ಮಂತ್ರ' ವನ್ನು ಆಕೆ ನಮ್ಮ ಮಹಿಳಾಲೋಕದ ಏಳಿಗೆಗೆ ಕೂಡಿಸಿಟ್ಟಿದ್ದಾಳೆ. ಈ ಸಣ್ಣ ಲೇಖನದಲ್ಲಿ ಹುದುಗಿಸಲು ತೀರ ಕಷ್ಟವಾದ 'ಮಹಿಮೆ' ಆಕೆಯದು.

ನಮ್ಮ ಸಮಾಜದಲ್ಲಿ ಕಾರಣಾಂತರದಿಂದ ಈಚೆಗೆ ಹೆಣ್ಣೆಂದರೆ ಒಂದು ಅಲಕ್ಷ್ಯವು ಮೂಡಿದ್ದಿತು. ಹೊನ್ನಮ್ಮ ಮಹಿಳೆಯರ ಸ್ಥಾನಮಾನಗಳನ್ನು ಉತ್ತಮಗೊಳಿಸಲು ಯತ್ನಿಸಿದಳು. ಗಂಡ ಹೆಂಡಿರು, ಅತ್ತೆಸೊಸೆಯರು, ಹೇಗೆ ಸಂಸಾರವನ್ನು ಸುಖಗೊಳಿಸಬಹುದು? ಇಲ್ಲವೇ ಹೇಗೆ ಅದನ್ನು ಹದಗೆಡಿಸಿ ಆತ್ಮವಂಚನೆ ಮಾಡಿಕೊಳ್ಳಬಹುದು? – ಎಂಬುದನ್ನು ಆಕೆ ಮನಸ್ಸೊಪ್ಪುವಂತೆ ಬಣ್ಣಿಸಿದ್ದಾಳೆ, ಸತಿಯರ ಧರ್ಮವನ್ನು ನಮ್ಮ ಶ್ರೇಷ್ಠ ಪುರಾಣಗಳ ಉದಾಹರಣೆಗಳೊಂದಿಗೆ ವಿವರಿಸಿದ್ದಾಳೆ.

ಸತಿಯರೆನಿಸಿ, ಸಂಸಾರವನ್ನು ಮಂಗಳದ ಮನೆಯಾಗಿ ಮಾಡಬೇಕೆಂಬುದೂ, ಗೃಹಸ್ಥಾಶ್ರಮದಲ್ಲಿದ್ದರೂ ಸತಿಪತಿಯರ ಒಳ್ಳೆ ನಡತೆಗಳಿಂದ ಬಾಳು ಅಮರವಾಗಿ ಮುಕ್ತಿಯ ಮಾರ್ಗ ಕಾಣುವುದೆಂಬುದೂ ನಮ್ಮ ಮನ್ವಾದಿ ಧರ್ಮಶಾಸ್ತ್ರಕಾರರ ದೃಢವಾದ ಅಭಿಪ್ರಾಯ. ಹೊನ್ನಮ್ಮ ಅದನ್ನೇ, "ಸತಿಪತಿಗಳ ಸೌಹೃದದಿಂದ ಸಂಸಾರವತಿಶಯ ಪಡೆದು ತೋರುವುದು । ಇತರೇತರ ವೈರದಿಂದೀರ್ವರಿಗೆ ದುರ್ಗತಿಯಂತೆ ಕಂಗೊಳಿಪುದು." ಅಲ್ಲದೆ "ದಂಪತಿಗಳ ಪಗೆತನದಿಂದ ಇರ್ವರ ಪೆಂಪಿನ ಬೇರು ಪರಿವುದು," "ಸಂಸಾರದ ಜಂಪು ಸಡಲಿ ಜಾರುವುದು" ಎಂದು ಉನ್ಮೇಷಿಸಿರುವಳು. ಇದಕ್ಕಿಂತ ಸುಲಭವಾಗಿ ಹೇಳಲು ಯಾರಿಗೆ ತಾನೇ ಸಾಧ್ಯ?

ನಮ್ಮ ಮಹಿಳಾ ಸಮಾಜಗಳು ಈ "ಗ್ರಂಥದ" ಪಾಠವನ್ನಾದರೂ ತಪ್ಪದೆ ನಡಸಬಾರದೆ? ನಮ್ಮ ಮನೆ ಮನೆಯಲ್ಲಿಯೂ, ಹೆಂಗಸರು ಈ ಸಾಂಗತ್ಯಗಳನ್ನು ಹಾಡುತ್ತಿರಬಾರದೆ? ಕನ್ನಡಿತಿಯರು "ಹೊನ್ನಮ್ಮ"ನ 'ಕೃತಿ'ಯನ್ನು ಕಂಠಪಾಠಮಾಡಿ, ನಿತ್ಯಪಾರಾಯಣ ಮಾಡಿದಲ್ಲದೆ, ಅವರ ಕರ್ತವ್ಯಪೂರ್ತಿಯಾಯಿತೆಂದು ಹೇಳಲಾಗದು.

ಮಹಿಳೆಯರಿಗಾಗಿಯೇ ವಿೀಸಲಾದ ಈ ಉತ್ತಮ ಕೃತಿಯನ್ನು ಕನ್ನಡನಾಡಿನ ಬಾಲಿಕಾ ಪಾಠಶಾಲೆಗಳಲ್ಲಿ ಪಠ್ಯಪುಸ್ತಕವಾಗಿಯೋ ಇಲ್ಲ ಬೇರೆ ವಿಶೇಷ ಪಾಠವಾಗಿಯೋ ಇಟ್ಟು ಅಭ್ಯಾಸಿಸುವುದು ಒಂದು ಒಳ್ಳೆಯ ಪ್ರಚಾರ ಮಾರ್ಗ. 'ಹದಿಬದೆಯ ಧರ್ಮ'ದ ಪುಸ್ತಕ ಸಾಕಷ್ಟು ಸುಲಭವಾಗಿ ಎಲ್ಲರಿಗೂ ದೊರೆಯುವಂತಹ ಮಾರ್ಗವನ್ನು ಕೈಗೊಳ್ಳಬೇಕು. ಮನೆ ಮನೆಯಲ್ಲಿಯೂ, ಎಲ್ಲ ಬಾಲಿಕಾ ಪಾಠಶಾಲೆಗಳಲ್ಲಿಯೂ ಇದರ ಅಭ್ಯಾಸವಾದರೆ, ನಮ್ಮ ಹೆಣ್ಣುಮಕ್ಕಳು ಇದನ್ನು ಕಂಠಪಾಠ ಮಾಡಿದರೆಂದರೆ, ಶತಮಾನಗಳ ತನಕ ನಮ್ಮ ಮುಂದಿನ ಮಕ್ಕಳ ಬಾಯಲ್ಲಿಯೂ ಈ ಗ್ರಂಥ ಉಳಿಯುವುದು.

ನಮ್ಮ ಈ ಕೃತಿಯ ಭಾಷೆ ಎಷ್ಟು ಲಲಿತವಾಗಿದೆ! ಸಹಜವಾದ ಉಪಮೆಗಳು, ಉದಾಹರಣೆಗಳು ಬಹಳ ಚೆನ್ನಾಗಿವೆ. 'ಧರ್ಮದ ತನಿಗಂಪು', ಕಾವ್ಯದ ಪೆರ್ಮೆ ಇವರಲ್ಲಿ ಚೆನ್ನಾಗಿ ಸೇರಿವೆ. ಈ ಗ್ರಂಥವನ್ನು ಓದಿದರೆ, ನಮ್ಮ ಮಹಿಳೆಯರು ಈ ಗ್ರಂಥದ ಬಗ್ಗೆ ಸಾಕಷ್ಟು ಆಸಕ್ತಿಯನ್ನು ತೋರಿಸಿದರೆ, "ಮಳೆಗರೆವುದು; ಬೆಳೆ ಪೆರ್ಚುವುದು. ಇಳೆ ತಳಕಿಳಿದು ಪೋಗದಂತೆ ತಡೆದಿಹುದು."

ಸತಿಯರು ಇದನ್ನೋದಿದರೆ, "ಹದಿಬದೆಯರೆನಿಸು"ವುದು ಮಾತ್ರವಲ್ಲ, ಉತ್ತಮ ಕಬ್ಬಿಗಿತಿಯರು ಕೂಡ ಆಗುವರೆಂದು ನನ್ನ ನಂಬಿಕೆ.

---

ಸಾಮಾಜಿಕ ನಾಟಕಗಳ 'ಶ್ರೀರಂಗ'ರು: ೭೫ನೆಯ ಪುಟದಿಂದ

ದಿನಪತ್ರಿಕೆ, ಮಾಸಪತ್ರಿಕೆ, ವಿಶೇಷ ಸಂಚಿಕೆಗಳಲ್ಲಿ ಶ್ರೀರಂಗರ ಹಾಸ್ಯ ಮಾರ್ಮಿಕ ಲೇಖನಗಳು ವಿಪುಲವಾಗಿ ಬಂದಿವೆ, ಬರುತ್ತಲಿವೆ. 'ಋತು ಸಂಹಾರ' ಎಂಬ ಲೇಖನ ಮಾಲೆ 'ಲೋಕಮತ' ಪತ್ರಿಕೆಯಲ್ಲಿಯೂ, "ಮೀಮಾಂಸೆ" ಎಂಬ ಲೇಖನಮಾಲೆ, "ಜಯಕರ್ನಾಟಕ"ದಲ್ಲಿಯೂ ಬಂದಿವೆ. "ಸ್ವರ್ಗೀಯ ಶತ್ರುಗಳು" ಎಂಬ ಲೇಖನ ಮಾಲೆ "ಕಥಾಂಜಲಿ"ಯಲ್ಲಿ ಬರುತ್ತಲಿದೆ. ಈ ಎಲ್ಲ ಲೇಖನಗಳಲ್ಲಿ ಹಾಸ್ಯ, ವಿಡಂಬನ, ಹೊಸ ವಿಚಾರಸರಣಿ, ನವೀನ ಶೈಲಿ ಇವು ಕಂಡುಬರುತ್ತವೆ. ಇವರು "ಜಯಂತಿ" ಪತ್ರಿಕೆಯಲ್ಲಿ ಪ್ರಮುಖ ಲೇಖಕರಾಗಿದ್ದು ಅದರಲ್ಲಿಯ ಸ್ವಾರಸ್ಯಕರವಾದ 'ಚಾಡಿಯ ಚಾಣಕ್ಯ" ಎಂಬ ವಿಭಾಗದಲ್ಲಿ ಪರದೇಶೀಯ ರಾಜಕಾರಣಪಟುಗಳ ಪರಿಚಯವನ್ನು ಕೊಡುತ್ತಿದ್ದಾರೆ.

"ಈ ವರುಷ ನನ್ನ ಲೇಖನ ಕೇಳಿದ ಎಲ್ಲ 'ವಿಶೇಷ ಸಂಚಿಕೆ'ಗಳಿಗೂ ಲೇಖನ ಬರೆದಿದ್ದೇನೆ" ಎಂಬುದಾಗಿ ಅವರು ಮೊನ್ನೆ ಮೊನ್ನೆ ಹೇಳಿದರು: ಅದು ನಿಜ. 'ಅಖಿಲ ಕರ್ನಾಟಕದ ವಿಶೇಷ ಸಂಚಿಕೆಗಳ ಲೇಖಕರು' ಎಂಬ ಬಿರುದು ಅವರಿಗೆ ಬರಲಿಕ್ಕೆ ತಡವಾಗಲಿಕ್ಕಿಲ್ಲ. ಕನ್ನಡದಲ್ಲಿ ಇಷ್ಟೊಂದು ವಿಪುಲವಾಗಿ ಮಾರ್ಮಿಕವಾಗಿ ಲೇಖನ ಬರೆಯುವವರು ಕಡಮೆ.

---

## ಕರ್ನಾಟಕ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

ಇದೇ ಡಿಸೆಂಬರ ತಿಂಗಳ ಕೊನೆಯಲ್ಲಿ, ಬಳ್ಳಾರಿಯಲ್ಲಿ ನಡೆಯುವ "ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ"ದ ಕವಿಗೋಷ್ಠಿಯಲ್ಲಿ, ಕನ್ನಡ ನಾಡಿನ ಕವಿಗಳಿಗೂ ಪ್ರಬಂಧಕಾರರಿಗೂ ಸಹಕರಿಸಲು ಪ್ರಾರ್ಥನೆ.

ಕವಿತೆ, ಪ್ರಬಂಧಗಳನ್ನು ಕಳುಹಿಸಿ ಕೊಡುವವರು ಅವುಗಳ ಸಾರಾಂಶವನ್ನು ೨೦ ಪಂಕ್ತಿಗಳಿಗೆ ಮೀರದಂತೆ, ತಮಗೆ ಬೇಕಾಗುವ ಸಮಯ (ನಿಮಿಷಗಳು) ವನ್ನು ಸೂಚಿಸಿ, ಡಿಸೆಂಬರ್ ೧೬ರೊಳಗಾಗಿ ಕಳುಹಿಸಿಕೊಟ್ಟಲ್ಲಿ ಬಹಳ ಉಪಕಾರವಾಗುವುದು.

**ಎಂ. ಜಿ. ವೆಂಕಟೇಶಯ್ಯ, ಎಂ.ಎ.**
(ಕವಿಗೋಷ್ಠಿಯ ಕಾರ್ಯನಿರ್ವಾಹಕ ಮಂಡಲಿ ಪರವಾಗಿ)
ಗಾಂಧಿನಗರ, ಬಳ್ಳಾರಿ.

೨೬-೧೧-೩೮.

---

## ಕನ್ನಡ ಜಾಣೆ ಹೊನ್ನಮ್ಮ

ಶ್ರೀ. ಸಿ. ಆರ್. ಶ್ರೀನಿವಾಸೈಯ್ಯಂಗಾರ್ಯರು, ಚೆನ್ನರಾಯಪಟ್ಟಣ.

(ಲೇಖನ ೧.)

ಹೊನ್ನಮ್ಮನನ್ನು ನಮ್ಮ ನಾಡಿನವರು ಎಂದೂ ಮರೆಯಲಾಗುವುದಿಲ್ಲ. ನಮ್ಮ ಮಹಿಳಾವೃಂದವಂತೂ ಆ ಕನ್ನಡ ಕಬ್ಬಿಗಿತಿಗೆ ಎಷ್ಟು ಕೃತಜ್ಞತೆಯನ್ನು ಸಲ್ಲಿಸಿದರೂ ಸಾಲದಾಗಿದೆ. ಎರಡು ಶತಮಾನಗಳ ಹಿಂದೆ ಆಕೆ ನಮ್ಮ ಮಹಿಳೆಯರ ಅಭ್ಯುದಯದಲ್ಲಿಯೂ, ಹಿತದಲ್ಲಿಯೂ, ಆಸಕ್ತಿ ವಹಿಸಿದ್ದಳೆಂದರೆ ಎಷ್ಟು ಆಶ್ಚರ್ಯಪಡಬಹುದು! ಆಕೆ ಬರಿಯ ಅಂತಃಪುರದ ಊಳಿಗದ ಹೆಂಗಸಾಗಿದ್ದರೆ ಅಂತಹ ಉತ್ತಮ ಕಾವ್ಯವನ್ನು ರಚಿಸುತ್ತಿದ್ದಳೇನು? ಎಂದಿಗೂ ಇಲ್ಲ. ಅವಳು ಒಳ್ಳೆಯ ಬುದ್ಧಿಶಾಲಿನಿ. ಧರ್ಮ, ಸಾಹಿತ್ಯ, ಎರಡನ್ನೂ ಆಕೆ ಚೆನ್ನಾಗಿ ತಿಳಿದುಕೊಂಡಿದ್ದಳು.

ಹೊನ್ನಮ್ಮನ ಜಾಣ್ಮೆ ನರಪತಿಗಳ ತನಕ ಮುಟ್ಟಿ ಅವರೇ ಆಕೆಯನ್ನು ಕಾವ್ಯರಚನೆ ಮಾಡಲು ಪ್ರೇರಿಸುವಂತೆ ಮಹಾರಾಣಿಗೆ ಹೇಳಿದರಂತೆ. ಹೊನ್ನಮ್ಮನಾದರೂ, ತನ್ನ ವಿದ್ಯಾಸಂಪತ್ತನ್ನೆ, ಅನುಭವಸಾರವನ್ನು, ಮಹಿಳಾವರ್ಗದ ಉನ್ನತಿಗಾಗಿಯೇ ವಿನಿಯೋಗಿಸಿ, "ಕೃತಕೃತ್ಯತೆ" ಯನ್ನು ಪಡೆದಳು.

ಅವಳು ಹಲವು ಗ್ರಂಥಗಳನ್ನು ಬರೆಯದೇ ಇರಬಹುದು. ಆದರೆ ಬರೆದಿರುವ "ಹದಿಬದೆಯ ಧರ್ಮ"ವೊಂದೇ ಆಕೆಯ ಹೆಸರನ್ನು ಕಲ್ಪಕೋಟಿಗಳ ತನಕ ಉಳಿಸಲು ಶಕ್ತವಾಗಿದೆ. ಇದು ಅಭಿಮಾನದ ಮಾತಲ್ಲ. 'ಪಾತಿವ್ರತ್ಯ ಧರ್ಮ ತತ್ವದ ಸಾರ' ವನ್ನು, 'ಸಂಜೀವನ ಮಂತ್ರ' ವನ್ನು ಆಕೆ ನಮ್ಮ ಮಹಿಳಾಲೋಕದ ಏಳಿಗೆಗೆ ಕೊಡಿಸಿಟ್ಟಿದ್ದಾಳೆ. ಈ ಸಣ್ಣ ಲೇಖನದಲ್ಲಿ ಹುದುಗಿಸಲು ತೀರ ಕಷ್ಟವಾದ 'ಮಹಿಮೆ' ಆಕೆಯದು.

ನಮ್ಮ ಸಮಾಜದಲ್ಲಿ ಕಾರಣಾಂತರದಿಂದ ಈಚೆಗೆ ಹೆಣ್ಣೆಂದರೆ ಒಂದು ಅಲಕ್ಷ್ಯವು ಮೂಡಿದ್ದಿತು. ಹೊನ್ನಮ್ಮ ಮಹಿಳೆಯರ ಸ್ಥಾನಮಾನಗಳನ್ನು ಉತ್ತಮಗೊಳಿಸಲು ಯತ್ನಿಸಿದಳು. ಗಂಡ ಹೆಂಡಿರು, ಅತ್ತೆಸೊಸೆಯರು, ಹೇಗೆ ಸಂಸಾರವನ್ನು ಸುಖಗೊಳಿಸಬಹುದು? ಇಲ್ಲವೇ ಹೇಗೆ ಅದನ್ನು ಹದಗೆಡಿಸಿ ಆತ್ಮವಂಚನೆ ಮಾಡಿಕೊಳ್ಳಬಹುದು? – ಎಂಬುದನ್ನು ಆಕೆ ಮನಸ್ಸೊಪ್ಪುವಂತೆ ಬಣ್ಣಿಸಿದ್ದಾಳೆ, ಸತಿಯರ ಧರ್ಮವನ್ನು ನಮ್ಮ ಶ್ರೇಷ್ಠ ಪುರಾಣಗಳ ಉದಾಹರಣೆಗಳೊಂದಿಗೆ ವಿವರಿಸಿದ್ದಾಳೆ.

ಸತಿಯರೆನಿಸಿ, ಸಂಸಾರವನ್ನು ಮಂಗಳದ ಮನೆಯಾಗಿ ಮಾಡಬೇಕೆಂಬುದೂ, ಗೃಹಸ್ಥಾಶ್ರಮದಲ್ಲಿದ್ದರೂ ಸತಿಪತಿಯರ ಒಳ್ಳೆ ನಡತೆಗಳಿಂದ ಬಾಳು ಅಮರವಾಗಿ ಮುಕ್ತಿಯ ಮಾರ್ಗ ಕಾಣುವುದೆಂಬುದೂ ನಮ್ಮ ಮನ್ವಾದಿ ಧರ್ಮಶಾಸ್ತ್ರಕಾರರ ದೃಢವಾದ ಅಭಿಪ್ರಾಯ. ಹೊನ್ನಮ್ಮ ಅದನ್ನೇ, "ಸತಿಪತಿಗಳ ಸೌಹೃದದಿಂದ ಸಂಸಾರವತಿಶಯ ಪಡೆದು ತೋರುವುದು। ಇತರೇತರ ವೈರದಿಂದೀರ್ವರಿಗೆ ದುರ್ಗತಿಯಂತೆ ಕಂಗೊಳಿಪುದು." ಅಲ್ಲದೆ "ದಂಪತಿಗಳ ಪಗೆತನದಿಂದ ಇರ್ವರ ಪೆಂಪಿನ ಬೇರು ಪರಿವುದು," "ಸಂಸಾರದ ಜಂಪು ಸಡಲಿ ಜಾರುವುದು" ಎಂದು ಉದ್ಘೋಷಿಸಿರುವಳು. ಇದಕ್ಕಿಂತ ಸುಲಭವಾಗಿ ಹೇಳಲು ಯಾರಿಗೆ ತಾನೇ ಸಾಧ್ಯ?

ನಮ್ಮ ಮಹಿಳಾ ಸಮಾಜಗಳು ಈ "ಗ್ರಂಥದ" ಪಾಠವನ್ನಾದರೂ ತಪ್ಪದೆ ನಡಸಬಾರದೆ? ನಮ್ಮ ಮನೆಮನೆಯಲ್ಲಿಯೂ, ಹೆಂಗಸರು ಈ ಸಾಂಗತ್ಯಗಳನ್ನು ಹಾಡುತ್ತಿರಬಾರದೆ? ಕನ್ನಡಿತಿಯರು "ಹೊನ್ನಮ್ಮ"ನ 'ಕೃತಿ'ಯನ್ನು ಕಂಠಪಾಠಮಾಡಿ, ನಿತ್ಯಪಾರಾಯಣ ಮಾಡಿದಲ್ಲದೆ, ಅವರ ಕರ್ತವ್ಯ ಪೂರ್ತಿಯಾಯಿತೆಂದು ಹೇಳಲಾಗದು.

ಮಹಿಳೆಯರಿಗಾಗಿಯೇ ಮೀಸಲಾದ ಈ ಉತ್ತಮ ಕೃತಿಯನ್ನು ಕನ್ನಡನಾಡಿನ ಬಾಲಿಕಾ ಪಾಠಶಾಲೆಗಳಲ್ಲಿ ಪಠ್ಯಪುಸ್ತಕವಾಗಿಯೋ ಇಲ್ಲ ಬೇರೆ ವಿಶೇಷ ಪಾಠವಾಗಿಯೋ ಇಟ್ಟು ಅಭ್ಯಾಸಿಸುವುದು ಒಂದು ಒಳ್ಳೆಯ ಪ್ರಚಾರ ಮಾರ್ಗ. 'ಹದಿಬದೆಯ ಧರ್ಮ' ದ ಪುಸ್ತಕ ಸಾಕಷ್ಟು ಸುಲಭವಾಗಿ ಎಲ್ಲರಿಗೂ ದೊರೆಯುವಂತಹ ಮಾರ್ಗವನ್ನು ಕೈಗೊಳ್ಳಬೇಕು. ಮನೆ ಮನೆಯಲ್ಲಿಯೂ, ಎಲ್ಲ ಬಾಲಿಕಾ ಪಾಠಶಾಲೆಗಳಲ್ಲಿಯೂ ಇದರ ಅಭ್ಯಾಸವಾದರೆ, ನಮ್ಮ ಹೆಣ್ಣುಮಕ್ಕಳು ಇದನ್ನು ಕಂಠಪಾಠ ಮಾಡಿದರೆಂದರೆ, ಶತಮಾನಗಳ ತನಕ ನಮ್ಮ ಮುಂದಿನ ಮಕ್ಕಳ ಬಾಯಲ್ಲಿಯೂ ಈ ಗ್ರಂಥ ಉಳಿಯುವುದು.

ನಮ್ಮ ಈ ಕೃತಿಯ ಭಾಷೆ ಎಷ್ಟು ಲಲಿತವಾಗಿದೆ! ಸಹಜವಾದ ಉಪಮೆಗಳು, ಉದಾಹರಣೆಗಳು ಬಹಳ ಚೆನ್ನಾಗಿವೆ. 'ಧರ್ಮದ ತನಿಗಂಪು', ಕಾವ್ಯದ ಪೆರ್ಮೆ ಇವರಲ್ಲಿ ಚೆನ್ನಾಗಿ ಸೇರಿವೆ. ಈ ಗ್ರಂಥವನ್ನು ಓದಿದರೆ, ನಮ್ಮ ಮಹಿಳೆಯರು ಈ ಗ್ರಂಥದ ಬಗ್ಗೆ ಸಾಕಷ್ಟು ಆಸಕ್ತಿಯನ್ನು ತೋರಿಸಿದರೆ, "ಮಳೆಗರೆವುದು; ಬೆಳೆ ಪೆರ್ಚುವುದು. ಇಳೆ ತಳಕಿಳಿದು ಪೋಗದಂತೆ ತಡೆದಿಹುದು."

ಸತಿಯರು ಇದನ್ನೋದಿದರೆ, "ಹದಿಬದೆಯರೆನಿಸು"ವುದು ಮಾತ್ರವಲ್ಲ, ಉತ್ತಮ ಕಬ್ಬಿಗಿತಿಯರು ಕೂಡ ಆಗುವರೆಂದು ನನ್ನ ನಂಬಿಕೆ.

---

ಸಾಮಾಜಿಕ ನಾಟಕಗಳ 'ಶ್ರೀರಂಗ'ರು: ೭೫ನೆಯ ಪುಟದಿಂದ

ದಿನಪತ್ರಿಕೆ, ಮಾಸಪತ್ರಿಕೆ, ವಿಶೇಷ ಸಂಚಿಕೆಗಳಲ್ಲಿ ಶ್ರೀರಂಗರ ಹಾಸ್ಯ ಮಾರ್ಮಿಕ ಲೇಖನಗಳು ವಿಪುಲವಾಗಿ ಬಂದಿವೆ, ಬರುತ್ತಲಿವೆ. 'ಋತು ಸಂಹಾರ' ಎಂಬ ಲೇಖನ ಮಾಲೆ 'ಲೋಕಮತ' ಪತ್ರಿಕೆಯಲ್ಲಿಯೂ, "ಮೀಮಾಂಸೆ" ಎಂಬ ಲೇಖನಮಾಲೆ, "ಜಯಕರ್ನಾಟಕ"ದಲ್ಲಿಯೂ ಬಂದಿವೆ. "ಸ್ವರ್ಗೀಯ ಶತ್ರುಗಳು" ಎಂಬ ಲೇಖನ ಮಾಲೆ "ಕಥಾಂಜಲಿ"ಯಲ್ಲಿ ಬರುತ್ತಲಿದೆ. ಈ ಎಲ್ಲ ಲೇಖನಗಳಲ್ಲಿ ಹಾಸ್ಯ, ವಿಡಂಬನ, ಹೊಸ ವಿಚಾರಸರಣೆ, ನವೀನ ಶೈಲಿ ಇವು ಕಂಡುಬರುತ್ತವೆ. ಇವರು "ಜಯಂತಿ" ಪತ್ರಿಕೆಯಲ್ಲಿ ಪ್ರಮುಖ ಲೇಖಕರಾಗಿದ್ದು ಅದರಲ್ಲಿಯ ಸ್ವಾರಸ್ಯಕರವಾದ 'ಚಾಡಿಯ ಚಾಣಕ್ಯ' ಎಂಬ ವಿಭಾಗದಲ್ಲಿ ಪರದೇಶೀಯ ರಾಜಕಾರಣಪಟುಗಳ ಪರಿಚಯವನ್ನು ಕೊಡುತ್ತಿದ್ದಾರೆ.

"ಈ ವರುಷ ನನ್ನ ಲೇಖನ ಕೇಳಿದ ಎಲ್ಲ 'ವಿಶೇಷ ಸಂಚಿಕೆ'ಗಳಿಗೂ ಲೇಖನ ಬರೆದಿದ್ದೇನೆ" ಎಂಬುದಾಗಿ ಅವರು ಮೊನ್ನೆ ಮೊನ್ನೆ ಹೇಳಿದರು: ಅದು ನಿಜ. 'ಅಖಿಲ ಕರ್ನಾಟಕದ ವಿಶೇಷ ಸಂಚಿಕೆಗಳ ಲೇಖಕರು' ಎಂಬ ಬಿರುದು ಅವರಿಗೆ ಬರಲಿಕ್ಕೆ ತಡವಾಗಲಿಕ್ಕಿಲ್ಲ. ಕನ್ನಡದಲ್ಲಿ ಇಷ್ಟೊಂದು ವಿಪುಲವಾಗಿ ಮಾರ್ಮಿಕವಾಗಿ ಲೇಖನ ಬರೆಯುವವರು ಕಡಮೆ.

---

### ಕರ್ನಾಟಕ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

ಇದೇ ಡಿಸೆಂಬರ ತಿಂಗಳ ಕೊನೆಯಲ್ಲಿ, ಬಳ್ಳಾರಿಯಲ್ಲಿ ನಡೆಯುವ "ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನ"ದ ಕವಿಗೋಷ್ಠಿಯಲ್ಲಿ, ಕನ್ನಡ ನಾಡಿನ ಕವಿಗಳಿಗೂ ಪ್ರಬಂಧಕಾರರಿಗೂ ಸಹಕರಿಸಲು ಪ್ರಾರ್ಥನೆ.

ಕವಿತೆ, ಪ್ರಬಂಧಗಳನ್ನು ಕಳುಹಿಸಿ ಕೊಡುವವರು ಅವುಗಳ ಸಾರಾಂಶವನ್ನು ೨೦ ಪಂಕ್ತಿಗಳಿಗೆ ಮೀರದಂತೆ, ತಮಗೆ ಬೇಕಾಗುವ ಸಮಯ (ನಿಮಿಷಗಳು) ವನ್ನು ಸೂಚಿಸಿ, ಡಿಸೆಂಬರ್ ೧೬ರೊಳಗಾಗಿ ಕಳುಹಿಸಿಕೊಟ್ಟಲ್ಲಿ ಬಹಳ ಉಪಕಾರವಾಗುವುದು.

ಎಂ. ಜಿ. ವೆಂಕಟೇಶಯ್ಯ, ಎಂ.ಎ.

೨೬-೧೧-೩೮. (ಕವಿಗೋಷ್ಠಿಯ ಕಾರ್ಯನಿರ್ವಾಹಕ ಮಂಡಲಿ ಪರವಾಗಿ)

ಗಾಂಧಿನಗರ, ಬಳ್ಳಾರಿ.

# ವೀರ ನಾರಾಯಣನ ಕಿಂಕರ

ಎಲ್. ಗುಂಡಪ್ಪ, ಎಂ. ಎ., ಬೆಂಗಳೂರು.

ಮಹಾಭಾರತ ಆರ್ಯರ ಬಾಳಿನ ಬೆಳಕು. ಈ ನೆಲದಲ್ಲಿ ಹುಟ್ಟಿ ಬಂದವರು ಈ ತಮ್ಮ ಬಾಳನ್ನು ತಿದ್ದಿಕೊಂಡು ಬೆಳೆಯುತ್ತ ಮೇಲ್ಮೆ ಪಡೆದು ಮುಂದುವರಿದು ಮುಟ್ಟಬೇಕಾದ ಗುರಿಯ ದಾರಿಯನ್ನು ತೋರಿಸುವ ಕೈಗಂಬ. ಮಹಾಮಹಿಮರ, ಮಹಾವೀರರ, ಮಹಾ ತ್ಯಾಗಿಗಳ, ಧರ್ಮಪರಾಯಣರ, ಪುಣ್ಯಚರಿತ್ರರ ಹಲವು ಕಥೆಗಳಿಂದ ತುಂಬಿದ ಪುರಾತನ ಇತಿಹಾಸ. ಐದನೆಯ ವೇದವೆಂದು ಪ್ರಸಿದ್ಧವಾದ ಪವಿತ್ರ ಗ್ರಂಥ.

ಇಂಥ ಉತ್ತಮಕೃತಿಯನ್ನು ಓದಿ ತಣಿಯುವ ಸೌಭಾಗ್ಯವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟಿರುವವರು ಇಬ್ಬರಿದ್ದಾರೆ. ಒಬ್ಬ ಆದಿಕವಿ ಪಂಪ. ಇನ್ನೊಬ್ಬ ಕುಮಾರವ್ಯಾಸ. ಈ ಇಬ್ಬರೂ ಮಹಾಸಾಗರದಂತಿರುವ ಮಹಾಭಾರತವನ್ನು ಒಳಹೊಕ್ಕು ನೋಡಿ, ಮೂಲಗ್ರಂಥದ ಸೊಗಸು ಕುಂದದಂತೆ ಅದನ್ನು ಅಡಕಮಾಡಿ, ಭಾರತದ ಸಾರವನ್ನು ಸಂಗ್ರಹಿಸಿ ತಿಳಿಯಾದ ತಮ್ಮ ಇನಿನುಡಿಯಲ್ಲಿ ಕನ್ನಡ ಮಕ್ಕಳಿಗೆ ಎರೆದಿದ್ದಾರೆ.

ಪಂಪ ಹತ್ತನೆಯ ಶತಮಾನದವನು. ಅವನ ಭಾಷೆ ಬಿಗಿ; ಶೈಲಿ ಬಹು ಗಂಭೀರವಾದದ್ದು. ಕಾಲ ಕಳೆದಂತೆಲ್ಲ ಅಂದಿನ ಭಾಷೆ ಹಳಗನ್ನಡವಾಗುತ್ತ ಬಂದು ಸಾಧಾರಣ ಜನರಿಗೆ ಸುಲಭವಾಗಿ ಅರ್ಥವಾಗದಂತಾಯಿತು. ಇದಲ್ಲದೆ, ಪಂಪ ತಾನು ಜೈನನಾದ್ದರಿಂದ ಭಾರತವನ್ನು ಮತಗ್ರಂಥವಾಗಿ ಭಾವಿಸದೆ ಕಾವ್ಯದೃಷ್ಟಿಯಿಂದ ನೋಡಿ, ಅದರ ಮಹತ್ತ್ವಕ್ಕೆ ಮನಸೋತು ಕಾವ್ಯವಾಗಿಯೇ ಚಿತ್ರಿಸಿದನು. ಅಲ್ಲಿ ಶ್ರೀಕೃಷ್ಣನ ದೈವಿಕ ಸ್ವರೂಪಕ್ಕೆ ಎಡೆಯಿಲ್ಲ. ಇದೂ ಒಂದು ಕಾರಣವಾಗಿರಬಹುದು, ಜನ ಅದನ್ನು ಕ್ರಮಕ್ರಮವಾಗಿ ಕೈಬಿಡುವುದಕ್ಕೆ. ಕಾರಣ ಏನೇ ಆಗಿರಲಿ, 'ಪಂಪ ಭಾರತ' ಜನಸಾಮಾನ್ಯರ ಆದರವನ್ನು ಕಳೆದುಕೊಂಡು ಪಂಡಿತರ ಕೈಯನ್ನೇ ಸೇರಬೇಕಾಯಿತು.

ಅಷ್ಟು ಹೊತ್ತಿಗೆ ನಮ್ಮ ವರಕವಿ ಗದುಗಿನ ನಾರಣಪ್ಪ ಹುಟ್ಟಿ ಬಂದು, ಎಲ್ಲೆಲ್ಲೂ ಹರಡಿ ಕಿವಿಗೆ ಸುಖವೆರಚುತ್ತಿದ್ದ ಇನಿದಾದ ಷಟ್ಪದಿಗಳಲ್ಲಿ ಭಾರತಾಮೃತವನ್ನು ಮತ್ತೆ ನಾಡಿಗೆಲ್ಲ ಬೀರಿದನು. ನಾರಣಪ್ಪ ವೀರನಾರಾಯಣನ ಕಿಂಕರ, ಭಕ್ತ, ಯೋಗಿ. ಅವನಿಗೆ ಭಾರತ ಬರಿಯ ಕಾವ್ಯವಲ್ಲ; ಶ್ರೀಕೃಷ್ಣನ ದಿವ್ಯ ಚರಿತ್ರೆ; ಮುಕ್ತಿ ಗ್ರಂಥ. ಅದರ ನಾಯಕರು ಕೌರವ ಪಾಂಡವರಲ್ಲ; ಶ್ರೀಕೃಷ್ಣ ಪರಮಾತ್ಮ.

ಕುಮಾರವ್ಯಾಸ ಪಂಪನ ಮಾರ್ಗವನ್ನು ಬಿಡದೆ, ಅವನ ಕಾವ್ಯ ಮಾಧುರ್ಯವನ್ನು ತೆಗೆದುಕೊಂಡು, ಜೊತೆಗೆ ತನ್ನ ಭಕ್ತಿಯ ಸಕ್ಕರೆಯನ್ನು ಬೆರಸಿ ಸವಿಯನ್ನು ಇಮ್ಮಡಿಸಿದ್ದಾನೆ. ಕಾವ್ಯಾನಂದ, ದೈವಾನುಗ್ರಹ ಎರಡೂ ಒಟ್ಟಿಗೆ ದೊರೆತರೆ ಧನ್ಯರಾಗದೆ ಉಳಿಯುವವರು ಯಾರು?

---

## ಪರಿಷತ್ತಿನ ಸುದ್ದಿ

### ಮಹಾಮಹೋಪಾಧ್ಯಾಯ ದಿವಂಗತ ಆರ್. ನರಸಿಂಹಾಚಾರ್ಯರ ಭಾವಚಿತ್ರದ ಅನಾವರಣೋತ್ಸವ

ಬೆಂಗಳೂರಿನ ಶ್ರೀ॥ ಆರ್. ತಿರುನಾರಾಯಣಯ್ಯಂಗಾರ್ಯರವರು ತಮ್ಮ ತೀರ್ಥರೂಪರು ದಿವಂಗತ ಮಹಾಮಹೋಪಾಧ್ಯಾಯ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರವರ ಭಾವಚಿತ್ರವೊಂದನ್ನು ಪರಿಷತ್ತಿಗೆ ದಾನಮಾಡಿರುತ್ತಾರೆ. ಇದೇ ಡಿಸೆಂಬರ್ ೧೬ನೆಯ ತಾ॥ ಸಂಜೆ ೬ ಘಂಟೆಗೆ, ಪರಿಷನ್ಮಂದಿರದಲ್ಲಿ, ಚಿತ್ರದ ಅನಾವರಣೋತ್ಸವ ನಡೆಯುತ್ತದೆ. ರಾವ್‌ಬಹದ್ದೂರ್ ಎಂ. ಶಾಮರಾಯರವರು ಸಭಾಧ್ಯಕ್ಷತೆ ವಹಿಸಲು ದಯವಿಟ್ಟು ಒಪ್ಪಿರುತ್ತಾರೆ. ಶ್ರೀಗಳಾದ ರಾಜಸೇವಾಸಕ್ತ ಶ್ರೀಕಂಠಯ್ಯನವರೂ, ಆರ್. ಆಳ್ವಾರ್ ಅಯ್ಯಂಗಾರ್ಯರವರೂ, ಎಂ. ಎ. ನರಸಿಂಹಾಚಾರ್ಯರವರೂ ದಿವಂಗತರ ವಿಷಯವಾಗಿ ಭಾಷಣಮಾಡುತ್ತಾರೆ. ಎಲ್ಲರಿಗೂ ಆಹ್ವಾನವಿದೆ.

### ಉಪನ್ಯಾಸ

ಇದೇ ಡಿಸೆಂಬರ್ ೧೪ನೆಯ ತಾರೀಖು ಬುಧವಾರ ಸಂಜೆ ೬ ಘಂಟೆಗೆ ಪರಿಷನ್ಮಂದಿರದಲ್ಲಿ ಕರ್ನಾಟಕ ನಾಟಕ ಸಾರ್ವಭೌಮ ವಿನೋದರತ್ನಾಕರ ಶ್ರೀ. ಜಿ. ಎಚ್. ವೀರಣ್ಣನವರು "ನನ್ನ ರಂಗಭೂಮಿಯ ಅನುಭವಗಳು" ಎಂಬ ವಿಷಯವಾಗಿ ಭಾಷಣಮಾಡುವರು.

### ವ್ಯಾಸಂಗ ಗೋಷ್ಠಿ

ಡಿಸೆಂಬರ್ ೧೧ನೆಯ ತಾರೀಖು ಭಾನುವಾರ ಬೆಳಗ್ಗೆ ೮-೩೦ಕ್ಕೆ ಗೋಷ್ಠಿಯ ಕನ್ನಡ ಶಾಖೆಯ ಕೂಟ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಸೇರುವುದು. ವಿಷಯ: "ಗದಾಯುದ್ಧ."

## ಬಳ್ಳಾರಿಯ ಸಮ್ಮೇಳನ ಸಮಾಚಾರ

ಬಳ್ಳಾರಿಯ ಸ್ವಾಗತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಎನ್. ಆರ್. ಗಂಗಾವತಿಯವರು ಈ ರೀತಿ ತಿಳಿಸುತ್ತಾರೆ.

### ಸ್ವಾಗತ ಸಮಿತಿಯ ಅಧ್ಯಕ್ಷರು

ಪರಿಷತ್ತಿನ ಸದಸ್ಯರೂ, ಹಿಂದೆ ೧೯೩೩ರಲ್ಲಿ ನಡೆದ ಸಮ್ಮೇಳನದ ಅಧ್ಯಕ್ಷರವರೂ ಆದ ಆಸ್ಥಾನ ವಿದ್ವಾನ್ ಸರ್ವದರ್ಶನತೀರ್ಥರು ವೈ. ನಾಗೇಶಶಾಸ್ತ್ರಿಗಳವರು ಸ್ವಾಗತ ಮಂಡಲಿಯ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ.

### ಉಪಾಧ್ಯಕ್ಷರುಗಳು

ಶ್ರೀಮತಿ ತಿ. ಸುಶೀಲಾಬಾಯಿ ಶಾಮರಾಯರು, ಶ್ರೀಗಳಾದ ವೈ. ಮಹಾಬಲೇಶ್ವರಪ್ಪನವರು ಮತ್ತು ಕೆ. ಗುರುರಾಜಾಚಾರ್ಯರು ಇವರುಗಳು ಸ್ವಾಗತ ಸಮಿತಿಯ ಉಪಾಧ್ಯಕ್ಷರುಗಳಾಗಿದ್ದಾರೆ.

### ಸಮ್ಮೇಳನದ ಪ್ರಾರಂಭಕರ್ತರು

ಸಮ್ಮೇಳನವನ್ನು ಪ್ರಾರಂಭಿಸಬೇಕೆಂದು ಸಂಡೂರಿನ ರಾಜಾಸಾಹೇಬ ಪ್ರಭುಗಳವರನ್ನು ಪ್ರಾರ್ಥಿಸಿಕೊಳ್ಳಲಾಗಿದೆ.

### ನಾಟಕಗೋಷ್ಠಿ

ಶ್ರೀ. ಕೆ. ಎಸ್. ಕಾರಂತರವರು ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಶ್ರೀ. ಆರ್. ಬಿ. ಜಾಗಿರದಾರರವರನ್ನು ಗೋಷ್ಠಿಯನ್ನು ಪ್ರಾರಂಭಿಸುವಂತೆ ಪ್ರಾರ್ಥಿಸಿಕೊಳ್ಳಲಾಗಿದೆ.

ಸಮ್ಮೇಳನದ ವಿವಿಧ ಕಾರ್ಯಗಳನ್ನು ನಿರ್ವಹಿಸಿ ಸಹಾಯಮಾಡುವುದಕ್ಕಾಗಿ ಈ ಮುಂದಿನ ಉಪಸಮಿತಿಗಳು ನೇಮಕವಾಗಿವೆ:

ಮಂಟಪ ಸಮಿತಿ, ಭೋಜನ ವ್ಯವಸ್ಥೆಯಸಮಿತಿ, ಪ್ರಕಟನಕಾರ್ಯ ಸಮಿತಿ, ವಿನೋದದ ಏರ್ಪಾಟಿನ ಸಮಿತಿ, ದ್ರವ್ಯ ಸಮಿತಿ, ಸ್ವಯಂ ಸೇವಕ ಸಮಿತಿ ಮತ್ತು ಸ್ತ್ರೀ ಪ್ರತಿನಿಧಿಗಳ ಸೌಕರ್ಯಗಳನ್ನು ನೋಡಿಕೊಳ್ಳುವುದಕ್ಕಾಗಿ ಮಹಿಳೆಯರ ಸಮಿತಿ ಇದುವರೆಗೆ ೧೫೦ ಮಂದಿ ಸ್ವಾಗತ ಸಮಿತಿಯ ಸದಸ್ಯರಾಗಿದ್ದಾರೆ.



---

## ಕನ್ನಡ ಸುದ್ದಿ

### ಹೊಸಪೇಟೆಯಲ್ಲಿ ಭಾಷಣ

"ಶ್ರೀ"ಯವರು ಹೊಸಪೇಟೆಯಲ್ಲಿ ತಾ॥ ೨೪-೧೧-೧೯೩೮ ರಲ್ಲಿ ಚಿತ್ರವಾಡಿ ಶ್ರೀ ಗುರುಕಲ್ಮಠೇಶ್ವರ ರಥೋತ್ಸವ ಸಮಾರಂಭದಲ್ಲಿ 'ಕನ್ನಡ ಸಾಹಿತ್ಯ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು; ಕನ್ನಡ ಸಂಘದಲ್ಲಿ "ಗದಾಯುದ್ಧ" ವನ್ನು ಕುರಿತು ಮಾತಾಡಿದರು. ಮತ್ತು ತಾ॥ ೨೫ರಲ್ಲಿ ಬಳ್ಳಾರಿಗೆ ಹೋಗಿ ಅಲ್ಲಿ ಸಮ್ಮೇಳನ ಕಾರ್ಯಕರ್ತರೊಡನೆ ಸಮಾಲೋಚನೆ ನಡಸಿದರು.

ತಾ॥ ೨೩ರಲ್ಲಿ ಶ್ರೀ॥ ಅ. ನ. ಕೃಷ್ಣರಾಯರು "ವಿಶ್ವಪ್ರೇಮಿ ಬಸವಣ್ಣನವರು" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

### ಕೋಲಾರ: ಕರ್ನಾಟಕ ಸಂಘ

೫-೧೨-೧೯೩೮ರಲ್ಲಿ, (ಸಂಘದ ಆಶ್ರಯದಲ್ಲಿ) ಜೂಬಿಲಿ ಹಾಲಿನಲ್ಲಿ ಸಂಘದ ಅಧ್ಯಕ್ಷರಾದ ಶ್ರೀ॥ ಟಿ. ಶ್ರೀನಿವಾಸಾಚಾರ್ಯರ ಅಧ್ಯಕ್ಷತೆಯಲ್ಲಿ, ಬೆಂಗಳೂರಿನ ಶ್ರೀ॥ ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ. ಅವರು "ಗ್ರೀಕ್ ರುದ್ರನಾಟಕವೂ ಅಶ್ವತ್ಥಾಮನೂ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

### ಕೊಲ್ಹಾಪುರದಲ್ಲಿ ಶ್ರೀ ಶ್ರೀನಿವಾಸರು

ನೃತ್ಯ ಕಲಾನಿಪುಣರಾದ ಶ್ರೀ ಕುಲಕರ್ಣಿ ಶ್ರೀನಿವಾಸರು ಡಿಸೆಂಬರು ೧೦, ೧೧, ೧೨ ಈ ಮೂರು ದಿವಸಗಳು ತಮ್ಮ ನೃತ್ಯ ಕಲಾಪ್ರದರ್ಶನವನ್ನು ಪ್ಯಾಲೆಸ್ ಥಿಯೇಟರಿನಲ್ಲಿ ಮಾಡುವವರಿದ್ದಾರೆ.

---

## ವೀರ ನಾರಾಯಣನ ಕಿಂಕರ

ಎಲ್. ಗುಂಡಪ್ಪ, ಎಂ. ಎ., ಬೆಂಗಳೂರು.

ಮಹಾಭಾರತ ಆರ್ಯರ ಬಾಳಿನ ಬೆಳಕು. ಈ ನೆಲದಲ್ಲಿ ಹುಟ್ಟಿ ಬಂದವರು ಈ ತಮ್ಮ ಬಾಳನ್ನು ತಿದ್ದಿಕೊಂಡು ಬೆಳೆಯುತ್ತ ಮೇಲ್ಮೆ ಪಡೆದು ಮುಂದುವರಿದು ಮುಟ್ಟಬೇಕಾದ ಗುರಿಯ ದಾರಿಯನ್ನು ತೋರಿಸುವ ಕೈಗಂಬ. ಮಹಾಮಹಿಮರ, ಮಹಾವೀರರ, ಮಹಾತ್ಯಾಗಿಗಳ, ಧರ್ಮಪರಾಯಣರ, ಪುಣ್ಯಚರಿತ್ರರ ಹಲವು ಕಥೆಗಳಿಂದ ತುಂಬಿದ ಪುರಾತನ ಇತಿಹಾಸ. ಐದನೆಯ ವೇದವೆಂದು ಪ್ರಸಿದ್ಧವಾದ ಪವಿತ್ರ ಗ್ರಂಥ.

ಇಂಥ ಉತ್ತಮಕೃತಿಯನ್ನು ಓದಿ ತಣಿಯುವ ಸೌಭಾಗ್ಯವನ್ನು ಕನ್ನಡಿಗರಿಗೆ ಒದಗಿಸಿಕೊಟ್ಟಿರುವವರು ಇಬ್ಬರಿದ್ದಾರೆ. ಒಬ್ಬ ಆದಿಕವಿ ಪಂಪ. ಇನ್ನೊಬ್ಬ ಕುಮಾರವ್ಯಾಸ. ಈ ಇಬ್ಬರೂ ಮಹಾಸಾಗರದಂತಿರುವ ಮಹಾಭಾರತವನ್ನು ಒಳಹೊಕ್ಕು ನೋಡಿ, ಮೂಲಗ್ರಂಥದ ಸೊಗಸು ಕುಂದದಂತೆ ಅದನ್ನು ಅಡಕಮಾಡಿ, ಭಾರತದ ಸಾರವನ್ನು ಸಂಗ್ರಹಿಸಿ ತಿಳಿಯಾದ ತಮ್ಮ ಇನಿನುಡಿಯಲ್ಲಿ ಕನ್ನಡ ಮಕ್ಕಳಿಗೆ ಎರೆದಿದ್ದಾರೆ.

ಪಂಪ ಹತ್ತನೆಯ ಶತಮಾನದವನು. ಅವನ ಭಾಷೆ ಬಿಗಿ; ಶೈಲಿ ಬಹು ಗಂಭೀರವಾದದ್ದು. ಕಾಲ ಕಳೆದಂತೆಲ್ಲ ಅಂದಿನ ಭಾಷೆ ಹಳಗನ್ನಡವಾಗುತ್ತ ಬಂದು ಸಾಧಾರಣ ಜನರಿಗೆ ಸುಲಭವಾಗಿ ಅರ್ಥವಾಗದಂತಾಯಿತು. ಇದಲ್ಲದೆ, ಪಂಪ ತಾನು ಜೈನನಾದ್ದರಿಂದ ಭಾರತವನ್ನು ಮತಗ್ರಂಥವಾಗಿ ಭಾವಿಸದೆ ಕಾವ್ಯದೃಷ್ಟಿಯಿಂದ ನೋಡಿ, ಅದರ ಮಹತ್ತ್ವಕ್ಕೆ ಮನಸೋತು ಕಾವ್ಯವಾಗಿಯೇ ಚಿತ್ರಿಸಿದನು. ಅಲ್ಲಿ ಶ್ರೀಕೃಷ್ಣನ ದೈವಿಕ ಸ್ವರೂಪಕ್ಕೆ ಎಡೆಯಿಲ್ಲ. ಇದೂ ಒಂದು ಕಾರಣವಾಗಿರಬಹುದು, ಜನ ಅದನ್ನು ಕ್ರಮಕ್ರಮವಾಗಿ ಕೈಬಿಡುವುದಕ್ಕೆ. ಕಾರಣ ಏನೇ ಆಗಿರಲಿ, 'ಪಂಪ ಭಾರತ' ಜನಸಾಮಾನ್ಯರ ಆದರವನ್ನು ಕಳೆದುಕೊಂಡು ಪಂಡಿತರ ಕೈಯನ್ನೇ ಸೇರಬೇಕಾಯಿತು.

ಅಷ್ಟು ಹೊತ್ತಿಗೆ ನಮ್ಮ ವರಕವಿ ಗದುಗಿನ ನಾರಣಪ್ಪ ಹುಟ್ಟಿ ಬಂದು, ಎಲ್ಲೆಲ್ಲೂ ಹರಡಿ ಕಿವಿಗೆ ಸುಖನೆರಚುತ್ತಿದ್ದ ಇನಿದಾದ ಷಟ್ಪದಿಗಳಲ್ಲಿ ಭಾರತಾಮೃತವನ್ನು ಮತ್ತೆ ನಾಡಿಗೆಲ್ಲ ಬೀರಿದನು. ನಾರಣಪ್ಪ ವೀರನಾರಾಯಣನ ಕಿಂಕರ, ಭಕ್ತ, ಯೋಗಿ. ಅವನಿಗೆ ಭಾರತ ಬರಿಯ ಕಾವ್ಯವಲ್ಲ; ಶ್ರೀಕೃಷ್ಣನ ದಿವ್ಯ ಚರಿತ್ರೆ; ಮುಕ್ತಿಗ್ರಂಥ. ಅದರ ನಾಯಕರು ಕೌರವ ಪಾಂಡವರಲ್ಲ; ಶ್ರೀಕೃಷ್ಣ ಪರಮಾತ್ಮ.

ಕುಮಾರವ್ಯಾಸ ಪಂಪನ ಮಾರ್ಗವನ್ನು ಬಿಡದೆ, ಅವನ ಕಾವ್ಯಮಾಧುರ್ಯವನ್ನು ತೆಗೆದುಕೊಂಡು, ಜೊತೆಗೆ ತನ್ನ ಭಕ್ತಿಯ ಸಕ್ಕರೆಯನ್ನು ಬೆರಸಿ ಸವಿಯನ್ನು ಇಮ್ಮಡಿಸಿದ್ದಾನೆ. ಕಾವ್ಯಾನಂದ, ದೈವಾನುಗ್ರಹ ಎರಡೂ ಒಟ್ಟಿಗೆ ದೊರೆತರೆ ಧನ್ಯರಾಗದೆ ಉಳಿಯುವವರು ಯಾರು?

---

## ಪರಿಷತ್ತಿನ ಸುದ್ದಿ

### ಮಹಾಮಹೋಪಾಧ್ಯಾಯ ದಿವಂಗತ ಆರ್. ನರಸಿಂಹಾಚಾರ್ಯರ ಭಾವಚಿತ್ರದ ಅನಾವರಣೋತ್ಸವ

ಬೆಂಗಳೂರಿನ ಶ್ರೀ॥ ಆರ್. ತಿರುನಾರಾಯಣಯ್ಯಂಗಾರ್ಯರವರು ತಮ್ಮ ತೀರ್ಥರೂಪರು ದಿವಂಗತ ಮಹಾಮಹೋಪಾಧ್ಯಾಯ ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರವರ ಭಾವಚಿತ್ರವೊಂದನ್ನು ಪರಿಷತ್ತಿಗೆ ದಾನಮಾಡಿರುತ್ತಾರೆ. ಇದೇ ಡಿಸೆಂಬರ್ ೧೬ನೆಯ ತಾ॥ ಸಂಜೆ ೬ ಘಂಟೆಗೆ, ಪರಿಷನ್ಮಂದಿರದಲ್ಲಿ, ಚಿತ್ರದ ಅನಾವರಣೋತ್ಸವ ನಡೆಯುತ್ತದೆ. ರಾವ್‌ಬಹದ್ದೂರ್ ಎಂ. ಶಾಮರಾಯರವರು ಸಭಾಧ್ಯಕ್ಷತೆ ವಹಿಸಲು ದಯವಿಟ್ಟು ಒಪ್ಪಿರುತ್ತಾರೆ. ಶ್ರೀಗಳಾದ ರಾಜಸೇವಾಸಕ್ತ ಶ್ರೀಕಂಠಯ್ಯನವರೂ, ಆರ್. ಆಳ್ವಾರ್ ಅಯ್ಯಂಗಾರ್ಯರವರೂ, ಎಂ. ಎ. ನರಸಿಂಹಾಚಾರ್ಯರವರೂ ದಿವಂಗತರ ವಿಷಯವಾಗಿ ಭಾಷಣಮಾಡುತ್ತಾರೆ. ಎಲ್ಲರಿಗೂ ಆಹ್ವಾನವಿದೆ.

### ಉಪನ್ಯಾಸ

ಇದೇ ಡಿಸೆಂಬರ್ ೧೪ನೆಯ ತಾರೀಖು ಬುಧವಾರ ಸಂಜೆ ೬ ಘಂಟೆಗೆ ಪರಿಷನ್ಮಂದಿರದಲ್ಲಿ ಕರ್ನಾಟಕ ನಾಟಕ ಸಾರ್ವಭೌಮ ವಿನೋದರತ್ನಾಕರ ಶ್ರೀ. ಜಿ. ಎಚ್. ವೀರಣ್ಣನವರು "ನನ್ನ ರಂಗಭೂಮಿಯ ಅನುಭವಗಳು" ಎಂಬ ವಿಷಯವಾಗಿ ಭಾಷಣಮಾಡುವರು.

### ವ್ಯಾಸಂಗ ಗೋಷ್ಠಿ

ಡಿಸೆಂಬರ್ ೧೧ನೆಯ ತಾರೀಖು ಭಾನುವಾರ ಬೆಳಗ್ಗೆ ೮-೩೦ಕ್ಕೆ ಗೋಷ್ಠಿಯ ಕನ್ನಡ ಶಾಖೆಯ ಕೂಟ ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಸೇರುವುದು. ವಿಷಯ: "ಗದಾಯುದ್ಧ."

## ಬಳ್ಳಾರಿಯ ಸಮ್ಮೇಳನ ಸಮಾಚಾರ

ಬಳ್ಳಾರಿಯ ಸ್ವಾಗತ ಸಮಿತಿಯ ಕಾರ್ಯದರ್ಶಿಗಳಾದ ಶ್ರೀ. ಎನ್. ಆರ್. ಗಂಗಾವತಿಯವರು ಈ ರೀತಿ ತಿಳಿಸುತ್ತಾರೆ.

### ಸ್ವಾಗತ ಸಮಿತಿಯ ಅಧ್ಯಕ್ಷರು

ಪರಿಷತ್ತಿನ ಸದಸ್ಯರೂ, ಹಿಂದೆ ೧೯೩೩ರಲ್ಲಿ ನಡೆದ ಸಮ್ಮೇಳನದ ಅಧ್ಯಕ್ಷರವರೂ ಆದ ಆಸ್ಥಾನ ವಿದ್ವಾನ್ ಸರ್ವದರ್ಶನತೀರ್ಥ ವೈ. ನಾಗೇಶಶಾಸ್ತ್ರಿಗಳವರು ಸ್ವಾಗತ ಮಂಡಲಿಯ ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ.

### ಉಪಾಧ್ಯಕ್ಷರುಗಳು

ಶ್ರೀಮತಿ ತಿ. ಸುಶೀಲಾಬಾಯಿ ಶಾಮರಾಯರು, ಶ್ರೀಗಳಾದ ವೈ. ಮಹಾಬಲೇಶ್ವರಪ್ಪನವರು ಮತ್ತು ಕೆ. ಗುರುರಾಜಾರಾಯರು ಇವರುಗಳು ಸ್ವಾಗತ ಸಮಿತಿಯ ಉಪಾಧ್ಯಕ್ಷರುಗಳಾಗಿದ್ದಾರೆ.

### ಸಮ್ಮೇಳನದ ಪ್ರಾರಂಭಕರ್ತರು

ಸಮ್ಮೇಳನವನ್ನು ಪ್ರಾರಂಭಿಸಬೇಕೆಂದು ಸಂಡೂರಿನ ರಾಜಾಸಾಹೇಬ ಪ್ರಭುಗಳವರನ್ನು ಪ್ರಾರ್ಥಿಸಿಕೊಳ್ಳಲಾಗಿದೆ.

### ನಾಟಕಗೋಷ್ಠಿ

ಶ್ರೀ. ಕೆ. ಎಸ್. ಕಾರಂತರವರು ಅಧ್ಯಕ್ಷರಾಗಿ ಚುನಾಯಿತರಾಗಿದ್ದಾರೆ. ಶ್ರೀ. ಆರ್. ಬಿ. ಜಾಗಿರದಾರರವರನ್ನು ಗೋಷ್ಠಿಯನ್ನು ಪ್ರಾರಂಭಿಸುವಂತೆ ಪ್ರಾರ್ಥಿಸಿಕೊಳ್ಳಲಾಗಿದೆ.

ಸಮ್ಮೇಳನದ ವಿವಿಧ ಕಾರ್ಯಗಳನ್ನು ನಿರ್ವಹಿಸಿ ಸಹಾಯಮಾಡುವುದಕ್ಕಾಗಿ ಈ ಮುಂದಿನ ಉಪಸಮಿತಿಗಳು ನೇಮಕವಾಗಿವೆ:

ಮಂಟಪ ಸಮಿತಿ, ಭೋಜನ್ನ ವ್ಯವಸ್ಥೆಯ ಸಮಿತಿ, ಪ್ರಕಟನಕಾರ್ಯ ಸಮಿತಿ, ವಿನೋದದ ಏರ್ಪಾಟಿನ ಸಮಿತಿ, ದ್ರವ್ಯ ಸಮಿತಿ, ಸ್ವಯಂ ಸೇವಕ ಸಮಿತಿ ಮತ್ತು ಸ್ತ್ರೀ ಪ್ರತಿನಿಧಿಗಳ ಸೌಕರ್ಯಗಳನ್ನು ನೋಡಿಕೊಳ್ಳುವುದಕ್ಕಾಗಿ ಮಹಿಳೆಯರ ಸಮಿತಿ ಇದುವರೆಗೆ ೧೫೭ ಮಂದಿ ಸ್ವಾಗತ ಸಮಿತಿಯ ಸದಸ್ಯರಾಗಿದ್ದಾರೆ.

---

## ಕನ್ನಡ ಸುದ್ದಿ



### ಹೊಸಪೇಟೆಯಲ್ಲಿ ಭಾಷಣ

"ಶ್ರೀ"ಯವರು ಹೊಸಪೇಟೆಯಲ್ಲಿ ತಾ॥ ೨೪-೧೧-೧೯೩೮ ರಲ್ಲಿ ಚಿತ್ರವಾಡಿಗಿ ಶ್ರೀ ಗುರುಕಲ್ಮಠೇಶ್ವರ ರಥೋತ್ಸವ ಸಮಾರಂಭದಲ್ಲಿ 'ಕನ್ನಡ ಸಾಹಿತ್ಯ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು; ಕನ್ನಡ ಸಂಘದಲ್ಲಿ "ಗದಾಯುದ್ಧ" ವನ್ನು ಕುರಿತು ಮಾತಾಡಿದರು. ಮತ್ತು ತಾ॥ ೨೫ರಲ್ಲಿ ಬಳ್ಳಾರಿಗೆ ಹೋಗಿ ಅಲ್ಲಿ ಸಮ್ಮೇಳನ ಕಾರ್ಯಕರ್ತರೊಡನೆ ಸಮಾಲೋಚನೆ ನಡಸಿದರು.

ತಾ॥ ೨೩ರಲ್ಲಿ ಶ್ರೀ॥ ಅ. ನ. ಕೃಷ್ಣರಾಯರು "ವಿಶ್ವಪ್ರೇಮಿ ಬಸವಣ್ಣನವರು" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

### ಕೋಲಾರ: ಕರ್ನಾಟಕ ಸಂಘ

೫-೧೨-೧೯೩೮ರಲ್ಲಿ, (ಸಂಘದ ಆಶ್ರಯದಲ್ಲಿ) ಜೂಬಿಲಿ ಹಾಲಿನಲ್ಲಿ ಸಂಘದ ಅಧ್ಯಕ್ಷರಾದ ಶ್ರೀ॥ ಟಿ. ಶ್ರೀನಿವಾಸಾಚಾರ್ಯರ ಅಧ್ಯಕ್ಷತೆಯಲ್ಲಿ, ಬೆಂಗಳೂರಿನ ಶ್ರೀ॥ ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ. ಅವರು "ಗ್ರೀಕ್ ರುದ್ರನಾಟಕವೂ ಅಶ್ವತ್ಥಾಮನೂ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು.

### ಕೊಲ್ಹಾಪುರದಲ್ಲಿ ಶ್ರೀ ಶ್ರೀನಿವಾಸರು

ನೃತ್ಯ ಕಲಾನಿಪುಣರಾದ ಶ್ರೀ ಕುಲಕರ್ಣಿ ಶ್ರೀನಿವಾಸರು ಡಿಸೆಂಬರು ೧೦, ೧೧, ೧೨ ಈ ಮೂರು ದಿವಸಗಳು ತಮ್ಮ ನೃತ್ಯ ಕಲಾಪ್ರದರ್ಶನವನ್ನು ಪ್ಯಾಲೆಸ್ ಥಿಯೇಟರಿನಲ್ಲಿ ಮಾಡುವವರಿದ್ದಾರೆ.

---

## ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಗೆ ಬಿನ್ನವತ್ತಳೆಯ ಸಮರ್ಪಣೆ

(ಕೊಡಗು ಕರ್ನಾಟಕ ಸಂಘ, ಮಡಿಕೇರಿ)

ತಾ|| ೨-೧೨-೧೯೩೮ನೆಯ ಶುಕ್ರವಾರ ಸಾಯಂಕಾಲ ೬ ಘಂಟೆಗೆ ಸೆಂಟ್ರಲ್ ಹೈಸ್ಕೂಲ್ ಹಾಲಿನಲ್ಲಿ, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯ, ಎಂ. ಎ., ಬಿ.ಎಲ್., ಅವರಿಗೆ ಸಂಘದವರು ಬಿನ್ನವತ್ತಳೆಯನ್ನು ಅರ್ಪಿಸಿದರು.

ಬಿನ್ನವತ್ತಳೆಯನ್ನೂ, ಅದಕ್ಕೆ ಉತ್ತರವಾಗಿ "ಶ್ರೀ" ಯವರು ಆಡಿದ ನುಡಿಯನ್ನೂ ಕೆಳಗೆ ಕೊಟ್ಟಿದೆ—

### ಬಿನ್ನವತ್ತಳೆ

ಮಾನ್ಯರೆ,

ಮೈಸೂರಿನ ಶ್ರೀಮನ್ಮಹಾರಾಜರವರು ನಿಮ್ಮ ಅಮೋಘವಾದ ಕರ್ನಾಟಕ ಸೇವೆಯನ್ನು ಮನಗಂಡು, ಸಂತೋಷಿಸಿ, ದಸರಾ ಮಹೋತ್ಸವಕಾಲದಲ್ಲಿ ಸ್ವಹಸ್ತದಿಂದ "ರಾಜಸೇವಾಸಕ್ತ" ಎಂಬ ಬಿರುದನ್ನು ದಯಪಾಲಿಸಿದ್ದಾರೆಂಬುದರಿಂದ ನಾವೂ ನಮ್ಮ ನಾಡಿನವರೂ ತುಂಬಾ ಸಂತೋಷಗೊಂಡಿದ್ದೇವೆ. ನೀವು ಆಂಗ್ಲ ಮತ್ತು ಕರ್ನಾಟಕ ಸಾಹಿತ್ಯ ಕ್ಷೇತ್ರಗಳಲ್ಲಿ ನುರಿತವರಾಗಿರುತ್ತೀರಿ. ಆ ಕ್ಷೇತ್ರಗಳಲ್ಲಿ ನಿಮ್ಮಿಂದಾದಮಟ್ಟಿಗೂ ಅಮೂಲ್ಯವಾದ ಸೇವೆಯನ್ನು ನೀವು ಸಲ್ಲಿಸುತ್ತಿರುತ್ತೀರಿ. 'ಇಂಗ್ಲಿಷ್ ಗೀತೆಗಳ' ಮೂಲಕ ಆಂಗ್ಲ ಸಾಹಿತ್ಯವನ್ನು ಕನ್ನಡಿಸಿ, ಆಂಗ್ಲ ಭಾಷಾ ಕೀರ್ತಿಲತೆಯನ್ನು ಬೆಳೆಯಿಸಿದುದುಮಲ್ಲದೆ ಕನ್ನಡತಾಯಿಯ ತೇಜಸ್ಸನ್ನು ಹೆಚ್ಚಿಸಿರುತ್ತೀರಿ. ಕರ್ನಾಟಕಾಭಿಮಾನಿಗಳಾದ ನೀವು ಎಲ್ಲೇ ಇದ್ದರೂ ಅಲ್ಲಿಂದಲೇ ಕೂಗಿ ನಮ್ಮ ತರುಣರ ನರನಾಡಿಗಳಲ್ಲಿ ಕನ್ನಡ ಭಕ್ತಿ ರಸವನ್ನು ತುಂಬಿಸಿ ಜಯಭೇರಿಯನ್ನು ಹೊಡೆದಿರುತ್ತೀರಿ. ಇಡೀ ಕರ್ನಾಟಕಕ್ಕೇ ತಿಲಕಪ್ರಾಯವಾದ 'ಪ್ರಬುದ್ಧ ಕರ್ಣಾಟಕ' ನಿಮ್ಮಿಂದ ಒಂದು ನಕ್ಷತ್ರಸ್ಥಾನವನ್ನು ಪಡೆದಿದೆ.

ಕರ್ನಾಟಕ ಸಾಹಿತ್ಯ ಪರಿಷತ್ತಿಗೂ ನಿಮಗೂ ಇರತಕ್ಕ ಸಂಬಂಧ ಕಾಳಿದಾಸನ ಉಕ್ತಿಯಂತೆ ವಾಗರ್ಥಗಳ ಸಂಬಂಧವಾಗಿದೆ. ನೀವು ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನಲಂಕರಿಸಿ ಎಲ್ಲಾ ದಿಕ್ಕುಗಳನ್ನೂ ಕನ್ನಡಮಯವನ್ನಾಗಿ ಮಾಡುತ್ತಿರುವಿರಿ. ಈಗ ಕರ್ನಾಟಕ ಭಾಷೆಗೊಂದು ರಾಜಮುದ್ರೆ ಬಿದ್ದಂತಾಯಿತು. ಪರಿಷತ್ತು ಕರ್ನಾಟಕ ಭಾಷೋಜ್ಜೀವನಕ್ಕೂ ಕನ್ನಡಿಗರೆಲ್ಲರ ಐಕಮತ್ಯಕ್ಕೂ ಕಂಕಣವನ್ನು ತೊಟ್ಟಿದೆ. ತಾರುಣ್ಯದಲ್ಲಿ ಕಾಲಿಟ್ಟು ಸಮಸ್ತ ಕರ್ನಾಟಕದಲ್ಲಿ ತನ್ನ ಕೀರ್ತಿಯನ್ನು ಹರಡುವ ಈ ಸಮಯದಲ್ಲಿ ನೀವು ಪರಿಷತ್ತಿನ ಆಡಳಿತವನ್ನು ವಹಿಸಿ 'ಕನ್ನಡದ ಬಾವುಟ'ವನ್ನು ಎತ್ತಿ ಕಟ್ಟಿರುತ್ತೀರಿ.

ಕನ್ನಡ ಕರ್ನಾಟಕದ್ದು. 'ಕನ್ನಡ ನುಡಿ' ರಾಜನುಡಿ. ಮಹತ್ವವುಳ್ಳ ಈ ನುಡಿಯ ಅಲಂಕಾರ, ರೀತಿ, ನೀತಿ, ರಹಸ್ಯಗಳ ಸವಿಗಂಡವರು ನೀವು. ನೀವು ರಾಜಸನ್ನಿಧಿಯಲ್ಲಿ ರಾಜಕವಿಗಳಾಗಿ ಕುಳಿತು ಶೋಭಿಸುವ ಸುಸಮಯವು ದೂರದಲ್ಲಿಲ್ಲವೆಂದು ನಮಗೆ ಭರವಸೆ ಇದೆ. ಭಗವತ್ಕೃಪೆಯಿಂದಲೂ ಕರ್ನಾಟಕಮಾತೆಯ ಅಭಿಮಾನದಿಂದಲೂ ನಿಮ್ಮ ಸೇವೆ ಇತೋಪ್ಯತಿಶಯವಾಗಿ ನಡೆಯಲು, ನಿಮಗೆ ಆಯುರಾರೋಗ್ಯ ಐಶ್ವರ್ಯಾದಿಗಳು ಕೈಗೂಡಲೆಂದು ಬಗೆಯುವ,

ಮಡಿಕೇರಿ, ೨-೧೨-೩೮. ತಮ್ಮವರು,

ಕೊಡಗು ಕರ್ನಾಟಕ ಸಂಘದ ಸದಸ್ಯರು.

### 'ಶ್ರೀ' ಯವರ ಭಾಷಣದ ಸಾರಾಂಶ

"ಕಳೆದ ನವರಾತ್ರಿ ಸಮಯದಲ್ಲಿ ನಾನು ಮೊದಲಾಗಿ ತಮ್ಮಲ್ಲಿಗೆ ಬಂದು ಕೊಡಗಿನವರ ವಿಶ್ವಾಸವನ್ನು ಸವಿದು ಮುಂದಕ್ಕೆ ಪ್ರಯಾಣ ಮಾಡಿದ್ದೆ. ನಾವು ಮಾಡತಕ್ಕದ್ದು ನಾಡಸೇವೆ. 'ನಮ್ಮಲ್ಲಿ ಏನಾದರೂ ಸ್ವಲ್ಪ ಶಕ್ತಿಯಿದ್ದರೆ ಅದನ್ನು ಸರ್ವರ ಪ್ರಯೋಜನಕ್ಕಾಗಿ ಉಪಯೋಗ ಮಾಡತಕ್ಕದ್ದು ನಮ್ಮ ಕರ್ತವ್ಯ. ಜನಗಳ ಸಂತೋಷವೇ ತಮ್ಮ ಸಂತೋಷವೆಂದು ನಮ್ಮ ಶ್ರೀಮನ್ಮಹಾರಾಜರವರು ಭಾವಿಸಿಕೊಂಡಿದ್ದಾರೆ. ಯಾರಾದರೂ ಜನಸೇವೆ ಮಾಡುತ್ತಿದ್ದಾರೆಂಬುದು ಮಹಾಸ್ವಾಮಿಯವರ ದೃಷ್ಟಿಗೆ ಬಂದರೆ, ಅವರು ಪ್ರಸನ್ನರಾಗುತ್ತಾರೆ. ನಿಮ್ಮೆಲ್ಲರ ಸಹಾಯ ಸಹಾನುಭೂತಿಗಳಿಂದ ನನಗಿದೊಂದು ಬಹುಮಾನ ದೊರೆಯಿತೆಂದು ನಾನು ಭಾವಿಸಿದ್ದೇನೆ. ಕೊಡಗಿನಲ್ಲಿರತಕ್ಕ ತಾವು ಮೈಸೂರಿನಲ್ಲಿರತಕ್ಕ ನನಗೆ ಈ ಸಮಯದಲ್ಲಿ ಮರ್ಯಾದೆ ಮಾಡಿದ್ದು ನನ್ನ ಮೇಲಿನ ಅಭಿಮಾನದಿಂದ, ನಾವೆಲ್ಲರೂ ಒಂದುಗೂಡಿರುವುದರಿಂದ, ನಮ್ಮೆಲ್ಲರೊಳಗೆ ಆ ಒಂದು ಮೈತ್ರಿ ಬೆಳೆದದ್ದರಿಂದ. ಕನ್ನಡನಾಡಿಗೆಲ್ಲಾ ಒಂದು ಸಂತೋಷವಾದರೆ, ನಾನು ಧನ್ಯ.

"ನೀವು 'ಕನ್ನಡದ ಬಾವುಟ'ವನ್ನು ಎತ್ತಿ ಕಟ್ಟಿರುತ್ತೀರಿ" ಎಂದು ಹೇಳಿರುತ್ತೀರಿ. ನಿಮ್ಮೆಲ್ಲರ ಬೆಂಬಲವೊದಗಿದರೆ ಮಾತ್ರ ಆ ಬಾವುಟವನ್ನು ಎತ್ತಿ ಹಿಡಿಯುವ ಶಕ್ತಿ ನನಗೆ ಬರುತ್ತದೆ. ಆ 'ಕನ್ನಡದ ಬಾವುಟ'ದಲ್ಲಿ ಹಿಂದಿನ ನೆನಪು, ಇಂದಿನ ಇರವು, ಮುಂದಿನ ಗುರಿ ಇವೆಲ್ಲಾ ಉಂಟು.

ನಮ್ಮ ಪರಿಷತ್ತು ಕನ್ನಡಿಗರನ್ನು ಕೂಡಿಸುವುದಕ್ಕೆ, ಆರು ಅಧ್ಯಾಯಗಳುಳ್ಳ ಸುಮಾರು ೩೦೦ ಪುಟಗಳ "ಕನ್ನಡನಾಡಿನ ಚರಿತ್ರೆ"ಯನ್ನು ಪ್ರಕಟಿಸಲು ಏರ್ಪಾಡು ಮಾಡಿದೆ. ಕಳೆದ ಎರಡು ಸಾವಿರದ ಐನೂರು ವರ್ಷಗಳ ಕನ್ನಡನಾಡಿನ ಚರಿತ್ರೆ ಅದರಲ್ಲಿ ಪ್ರತಿಬಿಂಬಿತವಾಗುವುದು. ಕನ್ನಡನಾಡು ಪರರಾಜರ ಹೊಡೆತ ತಿಂದು ತಲೆಬಗ್ಗಿಸಿ, ಆಮೇಲೆ ಸಿಂಹದಂತೆ ಎದ್ದು ತಲೆಯೆತ್ತಿ ಮೆರೆದ ನಾಡು. ಕನ್ನಡಿಗರ ಔದಾರ್ಯ, ತೇಜಸ್ಸು, ಕನ್ನಡನಾಡಿನ ಸುಭಿಕ್ಷ, ಸೌಂದರ್ಯ ಇವೆಲ್ಲವೂ ಸೇರಿದ ತಮ್ಮ ಸ್ವರೂಪವನ್ನು ಕನ್ನಡಿಗರು ಅರಿಯಬೇಕಾಗಿದೆ. ಆತ್ಮಸ್ವರೂಪ ತಿಳಿದು ನಡೆದರೇ ಮುಕ್ತಿ.

ಕೊನೆಯಲ್ಲಿ, ಅಧ್ಯಕ್ಷರಾದ ಶ್ರೀ|| ಸಿ. ಎರ್. ವೆಂಕಪ್ಪಯ್ಯ, ಬಿ.ಎ.,ಬಿ.ಎಲ್. ಅವರು 'ಶ್ರೀ'ಯವರ ಔದಾರ್ಯ, ಅವರಿಂದ ಪರಿಷತ್ತಿಗೆ ಸಂದಿರುವ ಮತ್ತು ಸಲ್ಲುತ್ತಿರುವ ತನುಮನಧನರೂಪವಾದ ಸಹಾಯಗಳು, ಅವರು ಕನ್ನಡ ಭಾಷೆಗಾಗಿ ಕನ್ನಡ ಜನಕ್ಕಾಗಿ, ಕನ್ನಡನಾಡಿಗಾಗಿ ದುಡಿಯುತ್ತಿರುವ ರೀತಿ ಇವನ್ನು ವಿವರಿಸಿ, ಅವರಿಗೆ ಸಂಘದ ವಂದನೆಗಳನ್ನು ಸಮರ್ಪಿಸಿದರು.

ಎಂ. ಎಸ್. ಅನಂತಪದ್ಮನಾಭರಾವ್,
ಗೌರವ ಕಾರ್ಯದರ್ಶಿ.

---

## ಗದುಗಿನ ಭಾರತ

(ಪರಿಷತ್ತಿನ ಪ್ರಕಟನ ಶಾಖೆಯಿಂದ)

ಇದೇ ಡಿಸೆಂಬರ್ ೧ನೆಯ ತಾರೀಖು ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಬೆಂಗಳೂರು ಡಿಸ್ಟ್ರಿಕ್ಟ್ ಸರ್ವೆ ಆಫೀಸರಾದ ಶ್ರೀ|| ಬಿ. ವೆಂಕಟಸ್ವಾಮಯ್ಯ, ಬಿ.ಎ. ಅವರು ಗದುಗಿನ ಭಾರತವನ್ನು ಕುರಿತು ಉಪನ್ಯಾಸಮಾಡಿದರು. "ಶ್ರೀ ವೆಂಕಟಸ್ವಾಮಯ್ಯನವರು ಕನ್ನಡ ಇಂಗ್ಲಿಷ್ ಎರಡು ಸಾಹಿತ್ಯಗಳಲ್ಲಿಯೂ ವಿಶೇಷ ಪರಿಶ್ರಮವುಳ್ಳವರು. ಆದರೂ ಬೂದಿಮುಚ್ಚಿದ ಕೆಂಡದಂತಿರುವುದೇ ಇವರ ಸ್ವಭಾವ" ಎಂದು ಉಪನ್ಯಾಸಗಳ ವ್ಯವಸ್ಥಾಪಕರಾದ ಶ್ರೀ|| ಡಿ. ಸಿ. ಸುಬ್ಬರಾಯಪ್ಪನವರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿಕೊಟ್ಟರು.

### ಉಪನ್ಯಾಸದ ಸಾರಾಂಶ

"ಕವಿಯ ಊರು ಗದುಗಿನ ಹತ್ತಿರ ಇರುವ ಕೋಳಿವಾಡವೆಂಬ ಹಳ್ಳಿ. ಇವನ ಕಾಲ ಸು|| ಕ್ರಿ. ಶ. ೧೪೩೦. ಅಶ್ವತ್ಥಾಮನ ಅನುಗ್ರಹ ಪಡೆದು, ಗದುಗಿನ ವೀರನಾರಾಯಣ ಸ್ವಾಮಿಯ ದೇವಸ್ಥಾನದ ಕೊಳದಲ್ಲಿ ಸ್ನಾನಮಾಡಿ ಭಕ್ತಿಯಿಂದ ಭಾರತವನ್ನು ರಚಿಸಿದನಂತೆ. ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ ಎಂದು ವಿನಯದಿಂದ ಹೇಳಿಕೊಂಡಿದ್ದಾನೆ. ಇದರ ಜೊತೆಗೆ "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ......ರುಕರೂಪನಲ್ಲವೆ ಕುಮಾರವ್ಯಾಸ......" ಎಂದು ತನ್ನ ಹೆಚ್ಚನ್ನು ಸೂಚಿಸಿದ್ದಾನೆ.

"ಕುಮಾರವ್ಯಾಸ ಪಂಡಿತ ಕವಿಯಲ್ಲ. ಉತ್ತಮ ಕವಿತ್ವಕ್ಕೆ ಪಾಂಡಿತ್ಯ ಮುಖ್ಯವಲ್ಲ. ವಾಣಿಯ ಪ್ರಸಾದ ಬೇಕು. ಕವಿತೆಯ ವಾಣಿ ಇವನಲ್ಲಿ ನುಡಿಯುತ್ತದೆ. ಕೇಳಿದವರಿಗೆ ಎಣೆಯಿಲ್ಲದ ಸುಖ ಕೊಡುತ್ತವೆ. ಇವನ ಕಾವ್ಯದ ಶೈಲಿ ಬಹು ಸುಲಭ, ಬಹು ಸರಳ. ನವರಸಗಳನ್ನೂ ಉಕ್ಕಿಸಿ ಎಲ್ಲವೂ ಕಣ್ಣಿಗೆ ಕಟ್ಟುವಂತೆ ಎದೆ ಮುಟ್ಟುವಂತೆ ಹೇಳುತ್ತಾನೆ. ಎಲ್ಲೆಲ್ಲಿ ನೋಡಿದರೂ ಶ್ರೀಕೃಷ್ಣ ಪರಮಾತ್ಮನ ಲೀಲೆ ಎದ್ದು ಕಾಣುತ್ತದೆ. ಭಕ್ತಿ ಉಕ್ಕಿ ಹರಿಯುತ್ತದೆ. ಶ್ರೀಕೃಷ್ಣ ಮಹಿಮೆ, ಶರಣಜನ ವಾತ್ಸಲ್ಯ, ಭೀಷ್ಮನ ಮಹಿಮೆ, ದ್ರೋಣನ ಶಿಷ್ಯಪ್ರೇಮ; ವಿದುರನ ಭಕ್ತಿ; ದುರ್ಯೋಧನನ ಅಭಿಮಾನ; ಕೌರವ ಕರ್ಣರ ಸ್ನೇಹ; ಕರ್ಣನ ಸ್ವಾಮಿಭಕ್ತಿ, ಅಪಾರವಾದ ತ್ಯಾಗ, ಅವನ ದುರಂತವು ಬಾಳು; ಅಭಿಮನ್ಯುಕುಮಾರನ ರಣಪರಾಕ್ರಮ; ಅರ್ಜುನನ ಮಹಾಶೌರ್ಯ, ಪಾಂಡವರ ಧರ್ಮ; ಕೌರವನ ಕಡೆಗಾಲದ ಕರುಣಾಜನಕವಾದ ಸ್ಥಿತಿ— ಈ ಎಲ್ಲವನ್ನೂ ಕವಿ ಸನ್ನಿವೇಶಕ್ಕೆ ತಕ್ಕಂತೆ ಲಲಿತವಾಗಿ ಬಿಗಿಯಾಗಿ ಹದವಾಗಿ, ಪಳಗಿದ ತನ್ನ ದಿವ್ಯವಾಣಿಯಲ್ಲಿ, ಕೇಳಿದವರು ಎಂದೆಂದಿಗೂ ಮರೆಯದಂತೆ ಚಿತ್ರಿಸಿದ್ದಾನೆ. ಆ ಅಮೃತವಾಣಿ ಕಿವಿ ಸೋಕಿದವರೆಲ್ಲ ಪಾವನರಾಗುತ್ತಾರೆ, ಧನ್ಯರಾಗುತ್ತಾರೆ. ಕುಮಾರವ್ಯಾಸ ಕನ್ನಡಕ್ಕೆ ಚಿನ್ನದ ಗಣಿಯಂತೆ."

ಹೀಗೆ ಹೇಳಿ, ಶ್ರೀ|| ವೆಂಕಟಸ್ವಾಮಯ್ಯನವರು ಕುಮಾರವ್ಯಾಸನ ಸ್ವರೂಪ ಬೆಳಗುವಂತೆ, ಅವನ ಅಂತರಂಗ ತೆರೆದು ತೋರುವಂತೆ ಭಾರತದ ಪದ್ಯಗಳನ್ನೂ ಪದ್ಯಭಾಗಗಳನ್ನೂ ನೆನಪಿನಿಂದಲೇ ಎತ್ತಿ ಹೇಳುತ್ತ ಭಾರತಕಥೆಯ ಕೆಲವು ಮುಖ್ಯ ಸನ್ನಿವೇಶಗಳನ್ನು ಕವಿಯ ಮಾತಿನಲ್ಲೇ ವಿವರಿಸಿ ಭಾಷಣವನ್ನು ಮುಗಿಸಿದರು.

---

ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ, ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

## ರಾಜಸೇವಾಸಕ್ತ ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಗೆ ಬಿನ್ನವತ್ತಳೆಯ ಸಮರ್ಪಣೆ

(ಕೊಡಗು ಕರ್ನಾಟಕ ಸಂಘ, ಮಡಿಕೇರಿ)

ತಾ॥ ೨-೧೨-೧೯೩೮ನೆಯ ಶುಕ್ರವಾರ ಸಾಯಂಕಾಲ ೬ ಘಂಟೆಗೆ ಸೆಂಟ್ರಲ್ ಹೈಸ್ಕೂಲ್ ಹಾಲಿನಲ್ಲಿ, ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರಿಗೆ ಸಂಘದವರು ಬಿನ್ನವತ್ತಳೆಯನ್ನು ಅರ್ಪಿಸಿದರು.

ಬಿನ್ನವತ್ತಳೆಯನ್ನೂ, ಅದಕ್ಕೆ ಉತ್ತರವಾಗಿ "ಶ್ರೀ" ಯವರು ಆಡಿದ ನುಡಿಯನ್ನೂ ಕೆಳಗೆ ಕೊಟ್ಟಿದೆ—

### ಬಿನ್ನವತ್ತಳೆ

ಮಾನ್ಯರೆ,

ಮೈಸೂರಿನ ಶ್ರೀಮನ್ಮಹಾರಾಜರವರು ನಿಮ್ಮ ಅಮೋಘವಾದ ಕರ್ನಾಟಕ ಸೇವೆಯನ್ನು ಮನಗಂಡು, ಸಂತೋಷಿಸಿ, ದಸರಾ ಮಹೋತ್ಸವಕಾಲದಲ್ಲಿ ಸ್ವಹಸ್ತದಿಂದ "ರಾಜಸೇವಾಸಕ್ತ" ಎಂಬ ಬಿರುದನ್ನು ದಯಪಾಲಿಸಿದ್ದಾರೆಂಬುದರಿಂದ ನಾವೂ ನಮ್ಮ ನಾಡಿನವರೂ ತುಂಬಾ ಸಂತೋಷಗೊಂಡಿದ್ದೇವೆ. ನೀವು ಆಂಗ್ಲ ಮತ್ತು ಕರ್ನಾಟಕ ಸಾಹಿತ್ಯ ಕ್ಷೇತ್ರಗಳಲ್ಲಿ ನುರಿತವರಾಗಿರುತ್ತೀರಿ. ಆ ಕ್ಷೇತ್ರಗಳಲ್ಲಿ ನಿಮ್ಮಿಂದಾದಮಟ್ಟಿಗೂ ಅಮೂಲ್ಯವಾದ ಸೇವೆಯನ್ನು ನೀವು ಸಲ್ಲಿಸುತ್ತಿರುತ್ತೀರಿ. 'ಇಂಗ್ಲಿಷ್ ಗೀತೆಗಳ' ಮೂಲಕ ಆಂಗ್ಲ ಸಾಹಿತ್ಯವನ್ನು ಕನ್ನಡಿಸಿ, ಆಂಗ್ಲ ಭಾಷಾ ಕೀರ್ತಿಲತೆಯನ್ನು ಬೆಳೆಯಿಸಿದುದುಪಲ್ಲದೆ ಕನ್ನಡತಾಯಿಯ ತೇಜಸ್ಸನ್ನು ಹೆಚ್ಚಿಸಿರುತ್ತೀರಿ. ಕರ್ನಾಟಕಾಭಿಮಾನಿಗಳಾದ ನೀವು ಎಲ್ಲೇ ಇದ್ದರೂ ಅಲ್ಲಿಂದಲೇ ಕೂಗಿ ನಮ್ಮ ತರುಣರ ನರನಾಡಿಗಳಲ್ಲಿ ಕನ್ನಡ ಭಕ್ತಿರಸವನ್ನು ತುಂಬಿಸಿ ಜಯಭೇರಿಯನ್ನು ಹೊಡೆದಿರುತ್ತೀರಿ. ಇಡೀ ಕರ್ನಾಟಕಕ್ಕೇ ತಿಲಕಪ್ರಾಯವಾದ 'ಪ್ರಬುದ್ಧ ಕರ್ಣಾಟಕ' ನಿಮ್ಮಿಂದ ಒಂದು ನಕ್ಷತ್ರಸ್ಥಾನವನ್ನು ಪಡೆದಿದೆ.

ಕರ್ನಾಟಕ ಸಾಹಿತ್ಯ ಪರಿಷತ್ತಿಗೂ ನಿಮಗೂ ಇರತಕ್ಕ ಸಂಬಂಧ ಕಾಳಿದಾಸನ ಉಕ್ತಿಯಂತೆ ವಾಗರ್ಥಗಳ ಸಂಬಂಧವಾಗಿದೆ. ನೀವು ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನಲಂಕರಿಸಿ ಎಲ್ಲಾ ದಿಕ್ಕುಗಳನ್ನೂ ಕನ್ನಡಮಯವನ್ನಾಗಿ ಮಾಡುತ್ತಿರುವಿರಿ. ಈಗ ಕರ್ನಾಟಕ ಭಾಷೆಗೊಂದು ರಾಜಮುದ್ರೆ ಬಿದ್ದಂತಾಯಿತು. ಪರಿಷತ್ತು ಕರ್ನಾಟಕ ಭಾಷೋಜ್ಜೀವನಕ್ಕೂ ಕನ್ನಡಿಗರೆಲ್ಲರ ಐಕಮತ್ಯಕ್ಕೂ ಕಂಕಣವನ್ನು ತೊಟ್ಟಿದೆ. ತಾರುಣ್ಯದಲ್ಲಿ ಕಾಲಿಟ್ಟು ಸಮಸ್ತ ಕರ್ನಾಟಕದಲ್ಲಿ ತನ್ನ ಕೀರ್ತಿಯನ್ನು ಹರಡುವ ಈ ಸಮಯದಲ್ಲಿ ನೀವು ಪರಿಷತ್ತಿನ ಆಡಳಿತವನ್ನು ವಹಿಸಿ 'ಕನ್ನಡದ ಬಾವುಟ'ವನ್ನು ಎತ್ತಿ ಕಟ್ಟಿರುತ್ತೀರಿ.

ಕನ್ನಡ ಕರ್ನಾಟಕದ್ದು. 'ಕನ್ನಡ ನುಡಿ' ರಾಜನುಡಿ. ಮಹತ್ವವುಳ್ಳ ಈ ನುಡಿಯ ಅಲಂಕಾರ, ರೀತಿ, ನೀತಿ, ರಹಸ್ಯಗಳ ಸವಿಗಂಡವರು ನೀವು. ನೀವು ರಾಜಸನ್ನಿಧಿಯಲ್ಲಿ ರಾಜಕವಿಗಳಾಗಿ ಕುಳಿತು ಶೋಭಿಸುವ ಸುಸಮಯವು ದೂರದಲ್ಲಿಲ್ಲವೆಂದು ನಮಗೆ ಭರವಸೆ ಇದೆ. ಭಗವತ್ಕೃಪೆಯಿಂದಲೂ ಕರ್ನಾಟಕಮಾತೆಯ ಅಭಿಮಾನದಿಂದಲೂ ನಿಮ್ಮ ಸೇವೆ ಇತೋಪ್ಯತಿಶಯವಾಗಿ ನಡೆಯಲು, ನಿಮಗೆ ಆಯುರಾರೋಗ್ಯ ಐಶ್ವರ್ಯಾದಿಗಳು ಕೈಗೂಡಲೆಂದು ಬಗೆಯುವ,

ಮಡಿಕೇರಿ, ೨-೧೨-೩೮. ತಮ್ಮವರು,

ಕೊಡಗು ಕರ್ನಾಟಕ ಸಂಘದ ಸದಸ್ಯರು.

### 'ಶ್ರೀ' ಯವರ ಭಾಷಣದ ಸಾರಾಂಶ

"ಕಳೆದ ನವರಾತ್ರಿ ಸಮಯದಲ್ಲಿ ನಾನು ಮೊದಲಾಗಿ ತಮ್ಮಲ್ಲಿಗೆ ಬಂದು ಕೊಡಗಿನವರ ವಿಶ್ವಾಸವನ್ನು ಸವಿದು ಮುಂದಕ್ಕೆ ಪ್ರಯಾಣ ಮಾಡಿದ್ದೆ. ನಾವು ಮಾಡತಕ್ಕದ್ದು ನಾಡಸೇವೆ. 'ನಮ್ಮಲ್ಲಿ ಏನಾದರೂ ಸ್ವಲ್ಪ ಶಕ್ತಿಯಿದ್ದರೆ ಅದನ್ನು ಸರ್ವರ ಪ್ರಯೋಜನಕ್ಕಾಗಿ ಉಪಯೋಗ ಮಾಡತಕ್ಕದ್ದು ನಮ್ಮ ಕರ್ತವ್ಯ. ಜನಗಳ ಸಂತೋಷವೇ ತಮ್ಮ ಸಂತೋಷವೆಂದು ನಮ್ಮ ಶ್ರೀಮನ್ಮಹಾರಾಜರವರು ಭಾವಿಸಿಕೊಂಡಿದ್ದಾರೆ. ಯಾರಾದರೂ ಜನಸೇವೆ ಮಾಡುತ್ತಿದ್ದಾರೆಂಬುದು ಮಹಾಸ್ವಾಮಿಯವರ ದೃಷ್ಟಿಗೆ ಬಂದರೆ, ಅವರು ಪ್ರಸನ್ನರಾಗುತ್ತಾರೆ. ನಿಮ್ಮೆಲ್ಲರ ಸಹಾಯ ಸಹಾನುಭೂತಿಗಳಿಂದ ನನಗಿದೊಂದು ಬಹುಮಾನ ದೊರೆಯಿತೆಂದು ನಾನು ಭಾವಿಸಿದ್ದೇನೆ. ಕೊಡಗಿನಲ್ಲಿರತಕ್ಕ ತಾವು ಮೈಸೂರಿನಲ್ಲಿರತಕ್ಕ ನನಗೆ ಈ ಸಮಯದಲ್ಲಿ ಮರ್ಯಾದೆ ಮಾಡಿದ್ದು ನನ್ನ ಮೇಲಿನ ಅಭಿಮಾನದಿಂದ, ನಾವೆಲ್ಲರೂ ಒಂದುಗೂಡಿರುವುದರಿಂದ, ನಮ್ಮೆಲ್ಲರೊಳಗೆ ಆ ಒಂದು ಮೈತ್ರಿ ಬೆಳೆದದ್ದರಿಂದ. ಕನ್ನಡನಾಡಿಗೆಲ್ಲಾ ಒಂದು ಸಂತೋಷವಾದರೆ, ನಾನು ಧನ್ಯ.

"ನೀವು 'ಕನ್ನಡದ ಬಾವುಟ'ವನ್ನು ಎತ್ತಿ ಕಟ್ಟಿರುತ್ತೀರಿ" ಎಂದು ಹೇಳಿರುತ್ತೀರಿ. ನಿಮ್ಮೆಲ್ಲರ ಬೆಂಬಲವೊದಗಿದರೆ ಮಾತ್ರ ಆ ಬಾವುಟವನ್ನು ಎತ್ತಿ ಹಿಡಿಯುವ ಶಕ್ತಿ ನನಗೆ ಬರುತ್ತದೆ. ಆ 'ಕನ್ನಡದ ಬಾವುಟ'ದಲ್ಲಿ ಹಿಂದಿನ ನೆನಪು, ಇಂದಿನ ಇರವು, ಮುಂದಿನ ಗುರಿ ಇವೆಲ್ಲಾ ಉಂಟು.

ನಮ್ಮ ಪರಿಷತ್ತು ಕನ್ನಡಿಗರನ್ನು ಕೂಡಿಸುವುದಕ್ಕೆ, ಆರು ಅಧ್ಯಾಯಗಳುಳ್ಳ ಸುಮಾರು ೩೦೦ ಪುಟಗಳ "ಕನ್ನಡನಾಡಿನ ಚರಿತ್ರೆ"ಯನ್ನು ಪ್ರಕಟಿಸಲು ಏರ್ಪಾಡು ಮಾಡಿದೆ. 'ಕಳೆದ ಎರಡು ಸಾವಿರದ ಐನೂರು ವರ್ಷಗಳ ಕನ್ನಡನಾಡಿನ ಚರಿತ್ರೆ ಅದರಲ್ಲಿ ಪ್ರತಿಬಿಂಬಿತವಾಗುವುದು. ಕನ್ನಡನಾಡು ಪರರಾಜರ ಹೊಡೆತ ತಿಂದು ತಲೆಬಗ್ಗಿಸಿ, ಆಮೇಲೆ ಸಿಂಹದಂತೆ ಎದ್ದು ತಲೆಯೆತ್ತಿ ಮೆರೆದ ನಾಡು. ಕನ್ನಡಿಗರ ಔದಾರ್ಯ, ತೇಜಸ್ಸು, ಕನ್ನಡನಾಡಿನ ಸುಭಿಕ್ಷ, ಸೌಂದರ್ಯ ಇವೆಲ್ಲವೂ ಸೇರಿದ ತಮ್ಮ ಸ್ವರೂಪವನ್ನು ಕನ್ನಡಿಗರು ಅರಿಯಬೇಕಾಗಿದೆ. ಆತ್ಮಸ್ವರೂಪ ತಿಳಿದು ನಡೆದರೇ ಮುಕ್ತಿ.

ಕೊನೆಯಲ್ಲಿ, ಅಧ್ಯಕ್ಷರಾದ ಶ್ರೀ॥ ಸಿ. ಎನ್. ವೆಂಕಪ್ಪಯ್ಯ, ಬಿ.ಎ.,ಬಿ.ಎಲ್. ಅವರು 'ಶ್ರೀ'ಯವರ ಔದಾರ್ಯ, ಅವರಿಂದ ಪರಿಷತ್ತಿಗೆ ಸಂದಿರುವ ಮತ್ತು ಸಲ್ಲುತ್ತಿರುವ ತನುಮನಧನರೂಪವಾದ ಸಹಾಯಗಳು, ಅವರು ಕನ್ನಡ ಭಾಷೆಗಾಗಿ ಕನ್ನಡ ಜನಕ್ಕಾಗಿ, ಕನ್ನಡನಾಡಿಗಾಗಿ ದುಡಿಯುತ್ತಿರುವ ರೀತಿ ಇವನ್ನು ವಿವರಿಸಿ, ಅವರಿಗೆ ಸಂಘದ ವಂದನೆಗಳನ್ನು ಸಮರ್ಪಿಸಿದರು.

ಎಂ. ಎಸ್. ಅನಂತಪದ್ಮನಾಭರಾವ್,
ಗೌರವ ಕಾರ್ಯದರ್ಶಿ.

---

## ಗದುಗಿನ ಭಾರತ

(ಪರಿಷತ್ತಿನ ಪ್ರಕಟನ ಶಾಖೆಯಿಂದ)

ಇದೇ ಡಿಸೆಂಬರ್ ೧ನೆಯ ತಾರೀಖು ಗುರುವಾರ ಸಂಜೆ ಪರಿಷನ್ಮಂದಿರದಲ್ಲಿ ಬೆಂಗಳೂರು ಡಿಸ್ಟ್ರಿಕ್ಟ್ ಸರ್ವೆ ಆಫೀಸರಾದ ಶ್ರೀ॥ ಬಿ. ವೆಂಕಟಸ್ವಾಮಯ್ಯ, ಬಿ.ಎ. ಅವರು ಗದುಗಿನ ಭಾರತವನ್ನು ಕುರಿತು ಉಪನ್ಯಾಸಮಾಡಿದರು. "ಶ್ರೀ ವೆಂಕಟಸ್ವಾಮಯ್ಯನವರು ಕನ್ನಡ ಇಂಗ್ಲಿಷ್ ಎರಡು ಸಾಹಿತ್ಯಗಳಲ್ಲಿಯೂ ವಿಶೇಷ ಪರಿಶ್ರಮವುಳ್ಳವರು. ಆದರೂ ಬೂದಿಮುಚ್ಚಿದ ಕೆಂಡದಂತಿರುವುದೇ ಇವರ ಸ್ವಭಾವ" ಎಂದು ಉಪನ್ಯಾಸಗಳ ವ್ಯವಸ್ಥಾಪಕರಾದ ಶ್ರೀ॥ ಡಿ. ಸಿ. ಸುಬ್ಬರಾಯಪ್ಪನವರು ಉಪನ್ಯಾಸಕರನ್ನು ಸಭೆಗೆ ಪರಿಚಯಮಾಡಿಕೊಟ್ಟರು.

### ಉಪನ್ಯಾಸದ ಸಾರಾಂಶ

"ಕವಿಯ ಊರು ಗದುಗಿನ ಹತ್ತಿರ ಇರುವ ಕೋಳಿವಾಡವೆಂಬ ಹಳ್ಳಿ. ಇವನ ಕಾಲ ಸು॥ ಕ್ರಿ. ಶ. ೧೩೩೦. ಅಶ್ವತ್ಥಾಮನ ಅನುಗ್ರಹ ಪಡೆದು, ಗದುಗಿನ ವೀರನಾರಾಯಣ ಸ್ವಾಮಿಯ ದೇವಸ್ಥಾನದ ಕೊಳದಲ್ಲಿ ಸ್ನಾನಮಾಡಿ ಭಕ್ತಿಯಿಂದ ಭಾರತವನ್ನು ರಚಿಸಿದನಂತೆ. ವೀರನಾರಾಯಣನೆ ಕವಿ, ಲಿಪಿಕಾರ ಕುಮಾರವ್ಯಾಸ ಎಂದು ವಿನಯದಿಂದ ಹೇಳಿಕೊಂಡಿದ್ದಾನೆ. ಇದರ ಜೊತೆಗೆ "ಹಲಗೆ ಬಳಪವ ಹಿಡಿಯದೊಂದಗ್ಗಳಿಕೆ ......ರುಕರೂಪನಲ್ಲದೆ ಕುಮಾರವ್ಯಾಸ ...." ಎಂದು ತನ್ನ ಹೆಚ್ಚನ್ನು ಸಾರಿದ್ದಾನೆ.

"ಕುಮಾರವ್ಯಾಸ ಪಂಡಿತ ಕವಿಯಲ್ಲ. ಉತ್ತಮ ಕವಿತ್ವಕ್ಕೆ ಪಾಂಡಿತ್ಯ ಮುಖ್ಯವಲ್ಲ. ವಾಣಿಯ ಪ್ರಸಾದ ಬೇಕು. ಕವಿತೆಯ ವಾಣಿ ಇವನಲ್ಲಿ ನುಡಿಯುತ್ತದೆ. ಕೇಳಿದವರಿಗೆ ಎಣೆಯಿಲ್ಲದ ಸುಖ ಕೊಡುತ್ತದೆ. ಇವನ ಕಾವ್ಯದ ಶೈಲಿ ಬಹು ಸುಲಭ, ಬಹು ಸರಳ. ನವರಸಗಳನ್ನೂ ಉಕ್ಕಿಸಿ ಎಲ್ಲವೂ ಕಣ್ಣಿಗೆ ಕಟ್ಟುವಂತೆ ಎದೆ ಮುಟ್ಟುವಂತೆ ಹೇಳುತ್ತಾನೆ. ಎಲ್ಲೆಲ್ಲಿ ನೋಡಿದರೂ ಶ್ರೀಕೃಷ್ಣ ಪರಮಾತ್ಮನ ಲೀಲೆ ಎದ್ದು ಕಾಣುತ್ತದೆ. ಭಕ್ತಿ ಉಕ್ಕಿ ಹರಿಯುತ್ತದೆ. ಶ್ರೀಕೃಷ್ಣ ಮಹಿಮೆ, ಶರಣಜನ ವಾತ್ಸಲ್ಯ, ಭೀಷ್ಮನ ಮಹಿಮೆ, ದ್ರೋಣನ ಶಿಷ್ಯಪ್ರೇಮ ; ವಿದುರನ ಭಕ್ತಿ ; ದುರ್ಯೋಧನನ ಅಭಿಮಾನ; ಕೌರವ ಕರ್ಣರ ಸ್ನೇಹ; ಕರ್ಣನ ಸ್ವಾಮಿಭಕ್ತಿ, ಅಪಾರವಾದ ತ್ಯಾಗ, ಅವನ ದುರಂತವಾದ ಬಾಳು; ಅಭಿಮನ್ಯು ಕುಮಾರನ ರಣಪರಾಕ್ರಮ; ಅರ್ಜುನನ ಮಹಾಶೌರ್ಯ, ಪಾಂಡವರ ಧರ್ಮ; ಕೌರವನ ಕಡೆಗಾಲದ ಕರುಣಾಜನಕವಾದ ಸ್ಥಿತಿ— ಈ ಎಲ್ಲವನ್ನೂ ಕವಿ ಸನಿವೇಶನಕ್ಕೆ ತಕ್ಕಂತೆ ಲಲಿತವಾಗಿ ಬಿಗಿಯಾಗಿ ಹದವಾಗಿ, ಪಳಗಿದ ತನ್ನ ದಿವ್ಯವಾಣಿಯಲ್ಲಿ, ಕೇಳಿದವರು ಎಂದೆಂದಿಗೂ ಮರೆಯದಂತೆ ಚಿತ್ರಿಸಿದ್ದಾನೆ. ಆ ಅಮೃತವಾಣಿ ಕಿವಿ ಸೋಕಿದವರೆಲ್ಲ ಪಾವನರಾಗುತ್ತಾರೆ, ಧನ್ಯರಾಗುತ್ತಾರೆ. ಕುಮಾರವ್ಯಾಸ ಕನ್ನಡಕ್ಕೆ ಚಿನ್ನದ ಗಣಿಯಂತೆ."

ಹೀಗೆ ಹೇಳಿ, ಶ್ರೀ॥ ವೆಂಕಟಸ್ವಾಮಯ್ಯನವರು ಕುಮಾರವ್ಯಾಸನ ಸ್ವರೂಪ ಬೆಳಗುವಂತೆ, ಅವನ ಅಂತರಂಗ ತೆರೆದು ತೋರುವಂತೆ ಭಾರತದ ಪದ್ಯಗಳನ್ನೂ ಪದ್ಯಭಾಗಗಳನ್ನೂ ನೆನಪಿನಿಂದಲೇ ಎತ್ತಿ ಹೇಳುತ್ತ ಭಾರತಕಥೆಯ ಕೆಲವು ಮುಖ್ಯ ಸನ್ನಿವೇಶಗಳನ್ನು ಕವಿಯ ಮಾತಿನಲ್ಲೇ ವಿವರಿಸಿ ಭಾಷಣವನ್ನು ಮುಗಿಸಿದರು.

---

ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚು ಮಾಡಿ, ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಕನ್ನಡ ನುಡಿ



ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಸಂಪಾದಕ: ಅ. ನ. ಕೃಷ್ಣರಾಯ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨೩, ೧೯೩೮ [ಸಂಚಿಕೆ ೧೨

ಕನ್ನಡದ ಅಸ್ತಿಭಾರ ಹಾಕಿದ ಹಿರಿಯರು



ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್
ದಿವಂಗತ ಆರ್. ನರಸಿಂಹಾಚಾರ್ಯ, ಎಂ.ಎ., ಎಂ.ಆರ್.ಎ.ಎಸ್. ಅವರು

# ಕನ್ನಡ ನುಡಿ

ಕರ್ನಾಟಕ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಸಂಪಾದಕ: ಅ. ನ. ಕೃಷ್ಣರಾಯ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಡಿಸೆಂಬರ್ ೨೩, ೧೯೩೮ [ಸಂಚಿಕೆ ೧೨

ಕನ್ನಡದ ಅಸ್ತಿಭಾರ ಹಾಕಿದ ಹಿರಿಯರು



ಪ್ರಾಕ್ತನ ವಿಮರ್ಶ ವಿಚಕ್ಷಣ ರಾವ್ ಬಹದ್ದೂರ್
ದಿವಂಗತ ಆರ್. ನರಸಿಂಹಾಚಾರ್ಯ, ಎಂ.ಎ., ಎಂ.ಆರ್.ಎ.ಎಸ್. ಅವರು

॥ ಸಿರಿಗನ್ನಡಂ ಗೆಲ್ಗೆ ॥

ಕನ್ನಡ ನುಡಿ

ಶುಕ್ರವಾರ, ಡಿಸೆಂಬರ್ ೨೩, ೧೯೩೮


## ಮಂಗಳೂರಿನಲ್ಲಿ ಕನ್ನಡ

ಮದರಾಸು ನ್ಯಾಯವಿಧಾಯಕ ಸಭೆಯ ಸದಸ್ಯರಾದ ಶ್ರೀ॥ ಜೆ. ಎ. ಸಾಲ್ಡಾನಾ ಅವರು ಈ ತಿಂಗಳು ಆನೆಯ ತಾರೀಖಿನ 'ಹಿಂದೂ ಪತ್ರಿಕೆ'ಗೆ ಒಂದು ಲೇಖನವನ್ನು ಬರೆದು ಮಂಗಳೂರಿನಲ್ಲಿ ಕನ್ನಡದ ಸ್ವಾಮ್ಯವನ್ನು ವಿರೋಧಿಸಿದ್ದಾರೆ. 'ಕೊಂಕಣಿಗೆ ಲಿಪಿ ಇಲ್ಲದಿದ್ದರೂ ಚಿಂತೆಯಿಲ್ಲ. ನಾಳೆ ನಾವು ರೋಮನ್ ಲಿಪಿಯನ್ನೇ ಕೊಂಕಣಿಗೂ ಉಪಯೋಗಿಸಿಕೊಳ್ಳುವೆವು, ನಮಗೆ ಕನ್ನಡ ಬೇಡ' ಎಂದು ಸಾಲ್ಡಾನಾ ಅವರು ವಾದಿಸಿದ್ದಾರೆ. ಕರ್ನಾಟಕ ಪ್ರಾಂತ್ಯದ ಪ್ರಯತ್ನ ನಡೆಯುತ್ತಿರುವಾಗ ಸಾಲ್ಡಾನಾಯವರಂತಹ ದೇಶಭಕ್ತರು ಇಂತಹ ಅಪಪ್ರಚಾರವನ್ನಾರಂಭಿಸಿರುವುದು ತುಂಬ ಶೋಚನೀಯ. ದೇಶಭಕ್ತ ಸಾಲ್ಡಾನಾ ಅವರಿಗೆ ಇಂಗ್ಲಿಷಾದರೂ ಆಗಬಹುದಂತೆ - ಕನ್ನಡ ಬೇಕಿಲ್ಲವಂತೆ! ಕೊಂಕಣಿ ಆರ್ಯಭಾಷೆಯಂತೆ, ಅದು ಇಂಗ್ಲಿಷಿಗೆ ಬಹು ಸಮೀಪವಂತೆ, ಕನ್ನಡ ಒರಟು ಭಾಷೆಯಂತೆ! ಜವಾಬ್ದಾರಿ ಸ್ಥಾನದಲ್ಲಿರುವ ದೇಶಭಕ್ತರೇ ಇಂತಹ ಹರಕುಮಾತುಗಳಲ್ಲಿ ಆಸಕ್ತರಾದರೆ ನಾಡಿನ ಗತಿಯೇನು?

ಮಂಗಳೂರಿನ ಇತಿಹಾಸ, ಸಂಸ್ಕೃತಿಗಳನ್ನು ಅವಲೋಕಿಸಿ ಮದರಾಸಿನ ಶ್ರೀ॥ ಬಿ. ಎಸ್. ಕೃಷ್ಣಮೂರ್ತಿ ಶರ್ಮರವರೂ, ಮಂಗಳೂರಿನ ವಿದ್ವಾನ್ ನಾರಾಯಣ ಭಟ್ಟರೂ ದೇಶಭಕ್ತರಿಗೆ ಸದುತ್ತರವನ್ನಿತ್ತಿದ್ದಾರೆ. ಮಂಗಳೂರು ಕನ್ನಡನಾಡು. ಕನ್ನಡಸಾರ್ವಭೌಮರು, ಕವಿಗಳು, ಕಲಾವಿದರು ಮೆರೆದ ನಾಡು. ಇಂದಿಗೂ ಕನ್ನಡದ ಕಳಸಪ್ರಾಯರಾಗಿರುವ ಅನೇಕ ಸಾಹಿತಿಗಳು, ಕಲಾವಿದರು ಇರುವ ನಾಡು. ಕೊಂಕಣಸ್ಥರು ೧೬ನೆಯ ಶತಮಾನದಲ್ಲಿ ಮಂಗಳೂರಿಗೆ ಬಂದವರು. ಕನ್ನಡನಾಡು ಅಂದು ತೋರಿದ ಆದರಾತಿಥ್ಯ, ಔದಾರ್ಯಗಳಿಗೆ ಕೊಂಕಣಸ್ಥರು ಇಂದು ಮಂಗಳೂರಿನ ದೇಶಭಾಷೆಯನ್ನು ಹೊಡೆದೋಡಿಸುವ ಪ್ರಯತ್ನವನ್ನು ಮಾಡುವರೇನು? ಮರಾಟಿ, ಹಿಂದಿಗಳನ್ನು ಹೊಗಳಿ ಕನ್ನಡ ಒರಟು ಭಾಷೆಯೆಂದಿರುವ ಸಾಲ್ಡಾನಾ ಅವರ ಪಾಂಡಿತ್ಯವನ್ನು ಎಷ್ಟು ಪ್ರಶಂಸಿಸಿದರೂ ಸಾಲದು.

ಮಂಗಳೂರಿನ ಮಹಾಜನಗಳೂ, ಪತ್ರಿಕಾಕರ್ತರೂ ಸರ್ವವಿಧದಲ್ಲಿಯೂ ಶ್ರೀ ಸಾಲ್ಡಾನಾ ಅವರ ಅಪಪ್ರಚಾರವನ್ನು ತಡೆಗಟ್ಟಬೇಕು. ಇವರ ಪ್ರಚಾರದಿಂದ ಮಂತ್ರಿಮಂಡಳದ ಮೇಲೆ ಯಾವ ಪರಿಣಾಮವೂ ಉಂಟಾಗದಂತೆ ನೋಡಿಕೊಂಡು, ಕರ್ನಾಟಕ ಪ್ರಾಂತ್ಯ ಚಳುವಳಿಯನ್ನು ಹೆಚ್ಚು ಉತ್ಸಾಹದಿಂದ ನಡೆಸಬೇಕಾಗಿ ನಮ್ಮ ಸೂಚನೆ.

## ಕರ್ನಾಟಕ ನೃತ್ಯ

ಯೂರೋಪಿನ ಪ್ರವಾಸದಿಂದ ಈಗತಾನೆ ಹಿಂದಿರುಗಿರುವ ಶ್ರೀಮತಿ ಮೇನಕಾ (ಮಿಸಸ್ ಲೀಲಾ ಸೋಖಿ) ಅವರು ತಮ್ಮ ಪ್ರವಾಸಾನುಭವವನ್ನು ಹೀಗೆ ಹೇಳಿದ್ದಾರೆ—

> 'ಭಾರತೀಯ ನೃತ್ಯಕ್ಕೆ ಜರ್ಮನಿಯಲ್ಲಿ ಬಹಳ ಮನ್ನಣೆ ದೊರೆಯಿತು. ನಾನು ಹರ್ ಹಿಟ್ಲರನೇ ಮೊದಲಾದ ಎಲ್ಲ ನಾತ್ಸಿ ನಾಯಕರ ಮುಂದೆ ನೃತಮಾಡಿದೆ. ಅವರೂ ಮತ್ತು ಸಾಧಾರಣ ಕೂಲಿಗಾರರೂ ಕೂಡ ನಮ್ಮ ನೃತ್ಯ ಕಲೆಯನ್ನು ಬಹಳ ಮೆಚ್ಚುತ್ತಾರೆ. ಆ ಅಭಿಮಾನ ನಮ್ಮಲ್ಲಿ ಇದ್ದರೆ ಎಷ್ಟು ಚೆನ್ನಾಗಿರುತ್ತದೆ'

ಭಾರತೀಯ ನೃತ್ಯಕಲೆಯಲ್ಲಿ ಸಾರ್ವಜನಿಕ ಅಭಿಮಾನವನ್ನು ಬೆಳಸುವುದಕ್ಕೆ ಶ್ರೀಮತಿಯವರು ಎರಡು ಸಲಹೆಗಳನ್ನಿತ್ತಿದ್ದಾರೆ.

೧ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ನೃತ್ಯ ಕಲಾಮಂಡಲವನ್ನು ತೆರೆದು ಆಯಾ ಭಾಗದ ಕಲೆಯನ್ನು ಸಂಗ್ರ[illegible]

೨ ಸರ್ಕಾರ ಆದಷ್ಟು ಕಡೆ ನೃತ್ಯಶಾಲೆಗಳನ್ನು [illegible] ನೃತ್ಯವನ್ನು ಬೋಧಿಸುವುದು.

ಅನಾದರಣೆಯಿಂದ ಖಿಲವಾಗುತ್ತಿರುವ ಭಾರತೀಯ [illegible] ನೃತ್ಯವೂ ಒಂದು. ರಷ್ಯಾದ ಸುಪ್ರಸಿದ್ಧ ನರ್ತಕಿಯಾದ [illegible] ಆನಾ ಪವಲೋವಾ 'ರಾಧಾ—ಕೃಷ್ಣ' ನೃತ್ಯವನ್ನು ಕೂಡಿಸಿ [illegible] ವರೆಗೆ ಪ್ರಾಚ್ಯಪಾಶ್ಚಾತ್ಯ ಜಗತ್ತುಗಳು ಭಾರತೀಯ ನೃ[illegible] ಕಡೆಗೆ ಗಮನವಿಡಲಿಲ್ಲ. ಇಂದು ಉದಯಶಂಕರ್, [illegible] ಗೋಪೀನಾಥ, ರಾಗಿಣಿದೇವಿಯವರ ಮತ್ತು ಕೇರಳ ಕಲಾಮಂ[illegible] ಮಹಾಕವಿ ವಳ್ಳತ್ತೋಳರ ಪ್ರಯತ್ನದಿಂದ ವಿದ್ವಜ್ಜನದ [illegible] ಭಾರತೀಯ ನೃತ್ಯಕಲೆಯ ಕಡೆಗೆ ಬೀಳುತ್ತಿದೆ.

ಭಾರತೀಯ ನೃತ್ಯಕಲೆಯಲ್ಲಿ ದಕ್ಷಿಣದ್ದೇ ಒಂದು ಸಂಪ್ರದಾಯಬದ್ಧವಾದ ಕಲಾತ್ಮಕ ಮಾರ್ಗವಿದೆ. ಅದು ಸ್ವಲ್ಪಮಟ್ಟಿಗೆ ಕೇರಳ ಕಲಾಮಂಡಲದ 'ಕಥಾಕಳಿ' ನೃತ್ಯಗಳಿಂದಲೂ, ಮಂಗಳೂರಿನ ಯಕ್ಷಗಾನದಿಂದಲೂ ಹೊರಬಿದ್ದಿದೆ. ಈಚೆಗೆ ಡಾ॥ ರಾಘವನ್‌ರವರ ಪ್ರಯತ್ನದಿಂದ ಶ್ರೀಮತಿ ಭಾನುಮತಿ 'ಜಲಜಾ' ಎನ್ನುವ ತಮಿಳು ಚಲನ ಚಿತ್ರದಲ್ಲಿ ಕೆಲವು ಸಾಂಪ್ರದಾಯಿಕ ದಕ್ಷಿಣಾದಿ ನೃತ್ಯಗಳನ್ನು ಪ್ರದರ್ಶಿಸಿವಳು. ವೇಶ್ಯೆಯರು ಮತ್ತು ದೇವದಾಸಿಯರ ಕೈಗೆ ಸಿಲುಕಿದ್ದ ಈ ಕಲೆ ಈಗ ನಾಮಾವಶೇಷವಾಗುತ್ತಿದೆ. ಮೈಸೂರಿನಲ್ಲಿ ಸಾಮಾನ್ಯವಾಗಿ ಪ್ರತಿ ಮದುವೆಯ ಸಂದರ್ಭದಲ್ಲಿಯೂ ಕಾಣುತ್ತಿದ್ದ "ತಾಫೆ" ಈಗ ಗ್ರಾಮಫೋನ್ ಸಂಗೀತಕ್ಕೆ ಎಡೆಕೊಟ್ಟಿದೆ.

ಕರ್ನಾಟಕದಲ್ಲಿ ಶ್ರೀ ಕಾರಂತರೂ, ಶ್ರೀ ಕುಲಕರ್ಣಿ ಶ್ರೀನಿವಾಸರೂ ನೃತ್ಯಕಲೆಯ ಪುನರುಜ್ಜೀವನ ಕಾರ್ಯದಲ್ಲಿ ತೊಡಗಿದ್ದಾರೆ. ಅವರಿಗೆ ಬೆಂಬಲವಾಗಿ ಒಂದು ಕರ್ನಾಟಕ ನೃತ್ಯಮಂಡಲವು ಸ್ಥಾಪನೆಯಾಗಬೇಕಾದುದು ಅವಶ್ಯಕ.

ಎಲ್ಲ ಕಲೆಗಳಲ್ಲಿ ಕರ್ನಾಟಕವು ಹೇಗೆ ತನ್ನದೊಂದು ಒಂದು ವೈಶಿಷ್ಟ್ಯವನ್ನು ಕಾಪಾಡಿಕೊಂಡಿದೆಯೋ ನೃತ್ಯದಲ್ಲಿಯೂ ಹಾಗೇ ಕಾಪಾಡಿಕೊಂಡಿದೆ. ಬೇಲೂರು, ಹಳೆಯಬೀಡು ದೇವಾಲಯಗಳೂ, ಅಜಂತಾ, ಬಾದಾಮಿಯ ಚಿತ್ರಕೃತಿಗಳೂ ಕರ್ನಾಟಕ ನೃತ್ಯ ಕಲಾ ವಿಧಾನದ ಕೈಪಿಡಿಗಳಾಗಿವೆ. ಭಾರತೇಶ ವೈಭವ, ಮೋಹನ ತರಂಗಿಣಿ ಕಾವ್ಯಗಳಲ್ಲಿ ನೃತ್ಯಕಲೆಯ ಬಗ್ಗೆ ಅನೇಕ ಉಪಯುಕ್ತ ವಿಷಯಗಳು ದೊರೆಯುತ್ತವೆ. ನಮ್ಮ ಲಕ್ಷಣಕಾರರು ಅನೇಕ ರಸ, ಅಲಂಕಾರ ಗ್ರಂಥಗಳಲ್ಲಿ ನೃತ್ಯಕಲೆಯ ತತ್ವಗಳನ್ನು ವಿವೇಚಿಸಿದ್ದಾರೆ.

ಉಡುಗೆ ತೊಡಿಗೆ, ಹಾವಭಾವ, ರಸ ಅಭಿನಯ ಎಲ್ಲವುಗಳಲ್ಲಿಯೂ 'ಕರ್ನಾಟಕ'ದ ಅಚ್ಚೊತ್ತಿದ ನೃತ್ಯಕಲಾ ಸಂಪ್ರದಾಯವು ನಮ್ಮಲ್ಲಿ ಬೆಳೆಯಬೇಕು. ಉತ್ತರ ಕರ್ನಾಟಕದಲ್ಲಿ ಪ್ರಸಾರವಲ್ಲಿರುವ "ಕಥಕ್" ಮತ್ತು ಮೈಸೂರು ಕರ್ನಾಟಕದಲ್ಲಿರುವ 'ತಾಫೆ' ಮಾದರಿಗಳು ಹೊಸ ರೂಪದಲ್ಲಿ ಆವಿರ್ಭವಿಸಬೇಕು.

ಕನ್ನಡ ಕಲಾಭಿಮಾನಿಗಳು ಈ ಕಡೆಗೆ ಲಕ್ಷ್ಯಕೊಡುವರೇ?

## ಶ್ರೀರಂಗಪಟ್ಟಣ

ಶ್ರೀ ಲೂಯಿ ಬ್ರೂಮ್‌ಫೀಲ್ಡ್ ಎಂಬುವರು ಪ್ರಸಿದ್ಧ ಗ್ರಂಥಕರ್ತರು. ಅವರ ಜನ್ಮಸ್ಥಳ ಅಮೇರಿಕಾ; ಈಗ ವಾಸಿಸುವುದು ಫ್ರಾನ್ಸ್. ಲಕ್ಷ್ಮಿ ಸರಸ್ವತಿಯರಿಬ್ಬರ ಒಲವಿಗೂ ಪಾತ್ರರಾದವರು. ಬ್ರೂಮ್‌ಫೀಲ್ಡ್‌ರಿಗೆ ಭಾರತವರ್ಷವೆಂದರೆ ಬಹಳ ಪ್ರೇಮ; ಭಾರತವರ್ಷದ ಮೇಲೆ ಎರಡು ಉತ್ಕೃಷ್ಟ ಗ್ರಂಥಗಳನ್ನು ಬರೆದಿದ್ದಾರೆ. ಅವರನ್ನು ಸಂದರ್ಶಿಸಿದ ಒಬ್ಬರಿಗೆ—

> "ಭಾರತವರ್ಷ ನನ್ನ ಅಂತರಂಗದ ಮೇಲೆ ಪ್ರಭುತ್ವ ಮಾಡುತ್ತಿದೆ. ಆ ದೇಶವೆಂದರೆ ನನ್ನ ಪಂಚಪ್ರಾಣಗಳು ಎದ್ದು ಕುಣಿಯುತ್ತವೆ. ಎಂದಾದರೂ ಭಾರತದಲ್ಲಿಯೇ ನೆಲಸಬೇಕೆಂದಿದ್ದೇನೆ. ಹಾಗೆ ಮಾಡುವಾಗ ಶ್ರೀರಂಗಪಟ್ಟಣದಲ್ಲಿ ಮನೆಮಾಡಿ ಇರಬೇಕೆಂದು ಆಸೆ"

ಎಂದು ಹೇಳಿದ್ದಾರೆ. ಮಾತೆತ್ತಿದ್ದರೆ ಮೈಸೂರನ್ನೂ, ಆಧುನಿಕ ಮೈಸೂರಿನ ನಿರ್ಮಾಣಕರ್ತರನ್ನೂ ಹಳಿಯುವ ಮಹನೀಯರು ಬ್ರೂಮ್‌ಫೀಲ್ಡರ ಈ ಮಾತನ್ನು ಗಮನಿಸುವರೇ?

॥ ಸಿರಿಗನ್ನಡಂ ಗೆಲ್ಗೆ ॥

# ಕನ್ನಡನುಡಿ

ಶುಕ್ರವಾರ, ಡಿಸೆಂಬರ್ ೨೩, ೧೯೩೮

## ಮಂಗಳೂರಿನಲ್ಲಿ ಕನ್ನಡ

ಮದರಾಸು ನ್ಯಾಯವಿಧಾಯಕ ಸಭೆಯ ಸದಸ್ಯರಾದ ಶ್ರೀ॥ ಜೆ. ಎ. ಸಾಲ್ಡಾನಾ ಅವರು ಈ ತಿಂಗಳು ೪ನೆಯ ತಾರೀಖಿನ 'ಹಿಂದೂ ಪತ್ರಿಕೆ'ಗೆ ಒಂದು ಲೇಖನವನ್ನು ಬರೆದು ಮಂಗಳೂರಿನಲ್ಲಿ ಕನ್ನಡದ ಸ್ವಾಮ್ಯವನ್ನು ವಿರೋಧಿಸಿದ್ದಾರೆ. 'ಕೊಂಕಣಿಗೆ ಲಿಪಿ ಇಲ್ಲದಿದ್ದರೂ ಚಿಂತೆಯಿಲ್ಲ. ನಾಳೆ ನಾವು ರೋಮನ್ ಲಿಪಿಯನ್ನೇ ಕೊಂಕಣಿಗೂ ಉಪಯೋಗಿಸಿಕೊಳ್ಳುವೆವು, ನಮಗೆ ಕನ್ನಡ ಬೇಡ' ಎಂದು ಸಾಲ್ಡಾನಾ ಅವರು ವಾದಿಸಿದ್ದಾರೆ. ಕರ್ನಾಟಕ ಪ್ರಾಂತ್ಯದ ಪ್ರಯತ್ನ ನಡೆಯುತ್ತಿರುವಾಗ ಸಾಲ್ಡಾನಾಯವರಂತಹ ದೇಶಭಕ್ತರು ಇಂತಹ ಅಪಪ್ರಚಾರವನ್ನಾರಂಭಿಸಿರುವುದು ತುಂಬ ಶೋಚನೀಯ. ದೇಶಭಕ್ತ ಸಾಲ್ಡಾನಾ ಅವರಿಗೆ ಇಂಗ್ಲಿಷಾದರೂ ಆಗಬಹುದಂತೆ - ಕನ್ನಡ ಬೇಕಿಲ್ಲವಂತೆ! ಕೊಂಕಣಿ ಆರ್ಯಭಾಷೆಯಂತೆ, ಅದು ಇಂಗ್ಲಿಷಿಗೆ ಬಹು ಸಮೀಪವಂತೆ, ಕನ್ನಡ ಒರಟು ಭಾಷೆಯಂತೆ! ಜವಾಬ್ದಾರಿ ಸ್ಥಾನದಲ್ಲಿರುವ ದೇಶಭಕ್ತರೇ ಇಂತಹ ಹರಕುಮಾತುಗಳಲ್ಲಿ ಆಸಕ್ತರಾದರೆ ನಾಡಿನ ಗತಿಯೇನು ?

ಮಂಗಳೂರಿನ ಇತಿಹಾಸ, ಸಂಸ್ಕೃತಿಗಳನ್ನು ಅವಲೋಕಿಸಿ ಮದರಾಸಿನ ಶ್ರೀ॥ ಬಿ. ಎಸ್. ಕೃಷ್ಣಮೂರ್ತಿ ಶರ್ಮರವರೂ, ಮಂಗಳೂರಿನ ವಿದ್ವಾನ್ ನಾರಾಯಣ ಭಟ್ಟರೂ ದೇಶಭಕ್ತರಿಗೆ ಸದುತ್ತರವನ್ನಿತ್ತಿದ್ದಾರೆ. ಮಂಗಳೂರು ಕನ್ನಡನಾಡು. ಕನ್ನಡಸಾರ್ವಭೌಮರು, ಕವಿಗಳು, ಕಲಾವಿದರು ಮೆರೆದ ನಾಡು. ಇಂದಿಗೂ ಕನ್ನಡದ ಕಳಸಪ್ರಾಯರಾಗಿರುವ ಅನೇಕ ಸಾಹಿತಿಗಳು, ಕಲಾವಿದರು ಇರುವ ನಾಡು. ಕೊಂಕಣಸ್ಥರು ೧೭ನೆಯ ಶತಮಾನದಲ್ಲಿ ಮಂಗಳೂರಿಗೆ ಬಂದವರು. ಕನ್ನಡನಾಡು ಅಂದು ತೋರಿದ ಆದರಾತಿಥ್ಯ ಔದಾರ್ಯಗಳಿಗೆ ಕೊಂಕಣಸ್ಥರು ಇಂದು ಮಂಗಳೂರಿನ ದೇಶಭಾಷೆಯನ್ನು ಹೊಡೆದೋಡಿಸುವ ಪ್ರಯತ್ನವನ್ನು ಮಾಡುವರೇನು ? ಮರಾಟಿ, ಹಿಂದಿಗಳನ್ನು ಹೊಗಳಿ ಕನ್ನಡ ಒರಟು ಭಾಷೆಯೆಂದಿರುವ ಸಾಲ್ಡಾನಾ ಅವರ ಪಾಂಡಿತ್ಯವನ್ನು ಎಷ್ಟು ಪ್ರಶಂಸಿಸಿದರೂ ಸಾಲದು.

ಮಂಗಳೂರಿನ ಮಹಾಜನಗಳೂ, ಪತ್ರಿಕಾಕರ್ತರೂ ಸರ್ವವಿಧದಲ್ಲಿಯೂ ಶ್ರೀ ಸಾಲ್ಡಾನಾ ಅವರ ಅಪಪ್ರಚಾರವನ್ನು ತಡೆಗಟ್ಟಬೇಕು. ಇವರ ಪ್ರಚಾರದಿಂದ ಮಂತ್ರಿಮಂಡಳದ ಮೇಲೆ ಯಾವ ಪರಿಣಾಮವೂ ಉಂಟಾಗದಂತೆ ನೋಡಿಕೊಂಡು, ಕರ್ನಾಟಕ ಪ್ರಾಂತ್ಯ ಚಳುವಳಿಯನ್ನು ಹೆಚ್ಚು ಉತ್ಸಾಹದಿಂದ ನಡೆಸಬೇಕಾಗಿ ನಮ್ಮ ಸೂಚನೆ.

## ಕರ್ನಾಟಕ ನೃತ್ಯ

ಯೂರೋಪಿನ ಪ್ರವಾಸದಿಂದ ಈಗತಾನೆ ಹಿಂದಿರುಗಿರುವ ಶ್ರೀಮತಿ ಮೇನಕಾ (ಮಿಸಸ್ ಲೀಲಾ ಸೋಖೆ) ಅವರು ತಮ್ಮ ಪ್ರವಾಸಾನುಭವವನ್ನು ಹೀಗೆ ಹೇಳಿದ್ದಾರೆ—

> 'ಭಾರತೀಯ ನೃತ್ಯಕ್ಕೆ ಜರ್ಮನಿಯಲ್ಲಿ ಬಹಳ ಮನ್ನಣೆ ದೊರೆಯಿತು. ನಾನು ಹರ್ ಹಿಟ್ಲರನೇ ಮೊದಲಾದ ಎಲ್ಲ ನಾತ್ಸಿ ನಾಯಕರ ಮುಂದೆ ನೃತಮಾಡಿದೆ. ಅವರೂ ಮತ್ತು ಸಾಧಾರಣ ಕೂಲಿಗಾರರೂ ಕೂಡ ನಮ್ಮ ನೃತ್ಯ ಕಲೆಯನ್ನು ಬಹಳ ಮೆಚ್ಚುತ್ತಾರೆ. ಆ ಅಭಿಮಾನ ನಮ್ಮಲ್ಲಿ ಇದ್ದರೆ ಎಷ್ಟು ಚೆನ್ನಾಗಿರುತ್ತದೆ'

ಭಾರತೀಯ ನೃತ್ಯಕಲೆಯಲ್ಲಿ ಸಾರ್ವಜನಿಕ ಅಭಿಮಾನವನ್ನು ಬೆಳೆಸುವುದಕ್ಕೆ ಶ್ರೀಮತಿಯವರು ಎರಡು ಸಲಹೆಗಳನ್ನಿತ್ತಿದ್ದಾರೆ.

೧ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ನೃತ್ಯ ಕಲಾ ಮಂಡಲವನ್ನು ತೆರೆದು ಆಯಾ ಭಾಗದ ಕಲೆಯನ್ನು ಸಂಗ್ರ

೨ ಸರ್ಕಾರ ಆದಷ್ಟು ಕಡೆ ನೃತ್ಯಶಾಲೆಗಳನ ನೃತ್ಯವನ್ನು ಬೋಧಿಸುವುದು.

ಅನಾದರಣೆಯಿಂದ ಖಿಲವಾಗುತ್ತಿರುವ ಭಾರತೀಯ ನೃತ್ಯವೂ ಒಂದು. ರಷ್ಯಾದ ಸುಪ್ರಸಿದ್ಧ ನರ್ತಕಿಯಾದ ಆನಾ ಪವಲೋವಾ 'ರಾಧಾ—ಕೃಷ್ಣ' ನೃತ್ಯವನ್ನು ಕೂಡಿಸಿ ವವರೆಗೆ ಪ್ರಾಚ್ಯಪಾಶ್ಚಾತ್ಯ ಜಗತ್ತುಗಳು ಭಾರತೀಯ ನೃ ಕಡೆಗೆ ಗಮನವಿಡಲಿಲ್ಲ. ಇಂದು ಉದಯಶಂಕರ್, ಗೋಪೀನಾಥ, ರಾಗಿಣಿದೇವಿಯವರ ಮತ್ತು ಕೇರಳ ಕಲಾಮ ಮಹಾಕವಿ ವಳ್ಳತ್ತೋಳರ ಪ್ರಯತ್ನದಿಂದ ವಿದ್ವಜ್ಜನದ ಭಾರತೀಯ ನೃತ್ಯಕಲೆಯ ಕಡೆಗೆ ಬೀಳುತ್ತಿದೆ.

ಭಾರತೀಯ ನೃತ್ಯಕಲೆಯಲ್ಲಿ ದಕ್ಷಿಣದ್ದೇ ಒಂದು ಸಂಪ್ರದಾಯಬದ್ಧವಾದ ಕಲಾತ್ಮಕ ಮಾರ್ಗವಿದೆ. ಅದು ಸ್ವಲ್ಪಮಟ್ಟಿಗೆ ಕೇರಳ ಕಲಾಮಂಡಲದ 'ಕಥಾಕಳಿ' ನೃತ್ಯಗಳಿಂದಲೂ, ಮಂಗಳೂರಿನ ಯಕ್ಷಗಾನದಿಂದಲೂ ಹೊರಬಿದ್ದಿದೆ. ಈಚೆಗೆ ಡಾ॥ ರಾಘವನ್‌ರವರ ಪ್ರಯತ್ನದಿಂದ ಶ್ರೀಮತಿ ಭಾನುಮತಿ 'ಜಲಜಾ' ಎನ್ನುವ ತಮಿಳು ಚಲನ ಚಿತ್ರದಲ್ಲಿ ಕೆಲವು ಸಾಂಪ್ರದಾಯಿಕ ದಕ್ಷಿಣಾದಿ ನೃತ್ಯಗಳನ್ನು ಪ್ರದರ್ಶಿಸಿದಳು. ವೇಶ್ಯೆಯರು ಮತ್ತು ದೇವದಾಸಿಯರ ಕೈಗೆ ಸಿಲುಕಿದ್ದ ಈ ಕಲೆ ಈಗ ನಾಮಾವಶೇಷವಾಗುತ್ತಿದೆ. ಮೈಸೂರಿನಲ್ಲಿ ಸಾಮಾನ್ಯವಾಗಿ ಪ್ರತಿ ಮದುವೆಯ ಸಂದರ್ಭದಲ್ಲಿಯೂ ಕಾಣುತ್ತಿದ್ದ "ತಾಫೆ" ಈಗ ಗ್ರಾಮಫೋನ್ ಸಂಗೀತಕ್ಕೆ ಎಡೆಕೊಟ್ಟಿದೆ.

ಕರ್ನಾಟಕದಲ್ಲಿ ಶ್ರೀ ಕಾರಂತರೂ, ಶ್ರೀ ಕುಲಕರ್ಣಿ ಶ್ರೀನಿವಾಸರೂ ನೃತ್ಯಕಲೆಯ ಪುನರುಜ್ಜೀವನ ಕಾರ್ಯದಲ್ಲಿ ತೊಡಗಿದ್ದಾರೆ. ಅವರಿಗೆ ಬೆಂಬಲವಾಗಿ ಒಂದು ಕರ್ನಾಟಕ ನೃತ್ಯಮಂಡಲವು ಸ್ಥಾಪನೆಯಾಗಬೇಕಾದುದು ಅವಶ್ಯಕ.

ಎಲ್ಲ ಕಲೆಗಳಲ್ಲಿ ಕರ್ನಾಟಕವು ಹೇಗೆ ತನ್ನದೊ ಆದ ಒಂದು ವೈಶಿಷ್ಟ್ಯವನ್ನು ಕಾಪಾಡಿಕೊಂಡಿದೆಯೋ ನೃತ್ಯದಲ್ಲಿಯೂ ಹಾಗೇ ಕಾಪಾಡಿಕೊಂಡಿದೆ. ಬೇಲೂರು, ಹಳೆಯಬೀಡು ದೇವಾಲಯಗಳೂ, ಅಜಂತಾ, ಬಾದಾಮಿಯ ಚಿತ್ರಕೃತಿಗಳೂ ಕರ್ನಾಟಕ ನೃತ್ಯ ಕಲಾವಿಧಾನದ ಕೈಪಿಡಿಗಳಾಗಿವೆ. ಭಾರತೇಶ ವೈಭವ, ಮೋಹನ ತರಂಗಿಣಿ ಕಾವ್ಯಗಳಲ್ಲಿ ನೃತ್ಯಕಲೆಯ ಬಗ್ಗೆ ಅನೇಕ ಉಪಯುಕ್ತ ವಿಷಯಗಳು ದೊರೆಯುತ್ತವೆ. ನಮ್ಮ ಲಕ್ಷಣಕಾರರು ಅನೇಕ ರಸ, ಅಲಂಕಾರ ಗ್ರಂಥಗಳಲ್ಲಿ ನೃತ್ಯಕಲೆಯ ತತ್ವಗಳನ್ನು ವಿವೇಚಿಸಿದ್ದಾರೆ.

ಉಡುಗೆ ತೊಡಿಗೆ, ಹಾವಭಾವ, ರಸ ಅಭಿನಯ ಎಲ್ಲವುಗಳಲ್ಲಿಯೂ 'ಕರ್ನಾಟಕ'ದ ಅಚ್ಚೊತ್ತಿದ ನೃತ್ಯಕಲಾ ಸಂಪ್ರದಾಯವು ನಮ್ಮಲ್ಲಿ ಬೆಳೆಯಬೇಕು. ಉತ್ತರ ಕರ್ನಾಟಕವಲ್ಲಿ ಪ್ರಸಾರದಲ್ಲಿರುವ "ಕಥಕ್" ಮತ್ತು ಮೈಸೂರು ಕರ್ನಾಟಕದಲ್ಲಿರುವ 'ತಾಫೆ' ಮಾದರಿಗಳು ಹೊಸ ರೂಪದಲ್ಲಿ ಆವಿರ್ಭವಿಸಬೇಕು.

ಕನ್ನಡ ಕಲಾಭಿಮಾನಿಗಳು ಈ ಕಡೆಗೆ ಲಕ್ಷ್ಯಕೊಡುವರೇ ?

## ಶ್ರೀರಂಗಪಟ್ಟಣ

ಶ್ರೀ ಲೂಯಿ ಬ್ರೂಮ್‌ಫೀಲ್ಡ್ ಎಂಬುವರು ಪ್ರಸಿದ್ಧ ಗ್ರಂಥಕರ್ತರು. ಅವರ ಜನ್ಮಸ್ಥಳ ಅಮೇರಿಕಾ; ಈಗ ವಾಸಿಸುವುದು ಫ್ರಾನ್ಸ್. ಲಕ್ಷ್ಮಿ ಸರಸ್ವತಿಯರಿಬ್ಬರ ಒಲವಿಗೂ ಪಾತ್ರರಾದವರು. ಬ್ರೂಮ್‌ಫೀಲ್ಡ್‌ರಿಗೆ ಭಾರತವರ್ಷವೆಂದರೆ ಬಹಳ ಪ್ರೇಮ. ಭಾರತವರ್ಷದ ಮೇಲೆ ಎರಡು ಉತ್ಕೃಷ್ಟ ಗ್ರಂಥಗಳನ್ನು ಬರೆದಿದ್ದಾರೆ. ಅವರನ್ನು ಸಂದರ್ಶಿಸಿದ ಒಬ್ಬರಿಗೆ—

> "ಭಾರತವರ್ಷ ನನ್ನ ಅಂತರಂಗದ ಮೇಲೆ ಪ್ರಭುತ್ವ ಮಾಡುತ್ತಿದೆ. ಆ ದೇಶವೆಂದರೆ ನನ್ನ ಪಂಚಪ್ರಾಣಗಳು ಎದ್ದು ಕುಣಿಯುತ್ತವೆ. ಎಂದಾದರೂ ಭಾರತದಲ್ಲಿಯೇ ನೆಲಸಬೇಕೆಂದಿದ್ದೇನೆ. ಹಾಗೆ ಮಾಡುವಾಗ ಶ್ರೀರಂಗಪಟ್ಟಣದಲ್ಲಿ ಮನೆಮಾಡಿ ಇರಬೇಕೆಂದು ಆಸೆ"

ಎಂದು ಹೇಳಿದ್ದಾರೆ. ಮಾತೆತ್ತಿದ್ದರೆ ಮೈಸೂರನ್ನೂ, ಆಧುನಿಕ ಮೈಸೂರಿನ ನಿರ್ಮಾಣಕರ್ತರನ್ನೂ ಹಳಿಯುವ ಮಹನೀಯರು ಬ್ರೂಮ್‌ಫೀಲ್ಡರ ಈ ಮಾತನ್ನು ಗಮನಿಸುವರೇ ?

# ಗತ ಆರ್. ನರಸಿಂಹಾಚಾರ್ಯರ ವಚಿತ್ರದ ಅನಾವರಣೋತ್ಸವ

ಬರ್ ೧೬ನೆಯ ತಾರೀಖು ಶುಕ್ರವಾರ ಸಂಜೆ ಪರಿಷತ್ತಿನ ಸಭಾ ಸಕಾರ್ಯ ಪ್ರಸಕ್ತ, ರಾವ್ ಬಹದ್ದೂರ್ ಎಂ. ಶಾಮರಾವ್, ಅಧ್ಯಕ್ಷತೆಯುಲ್ಲಿ ಪ್ರಾಕ್ತನ ವಿಮರ್ಶ ವಿಚಕ್ಷಣ, ಪ್ರಾಚ್ಯ ವಿದ್ಯಾ ಮಹೋಪಾಧ್ಯಾಯ, ರಾವ್ ಬಹದ್ದೂರ್ ದಿವಂಗತ ಆರ್. ್, ಎಂ. ಎ., ಎಂ.ಆರ್.ಎ.ಎಸ್., ಅವರ ಭಾವಚಿತ್ರದ ಣೋತ್ಸವ ಬಹು ವಿಜೃಂಭಣೆಯಿಂದ ನೆರವೇರಿತು.

ಗೌ॥ ಕಾರ್ಯದರ್ಶಿಗಳು ಮಾತಾಡುತ್ತ 'ಶ್ರೀ॥ ನರಸಿಂಹಾಚಾರ್ಯರು ಸ್ತಂಭರಾಗಿದ್ದರು. ತಮ್ಮ ಪಾಂಡಿತ್ಯ, ಗ್ರಂಥರಚನೆ ಮತ್ತು ನಾಡು ನುಡಿಗಳಿಗೆ ಅಪಾರ ಸೇವೆ ಸಲ್ಲಿಸಿ ದೇಶವಿದೇಶಗಳಲ್ಲಿ ಖ್ಯಾತರಾಗಿದ್ದರು. ಅಂಥವರ ಭಾವಚಿತ್ರ ಸಾಹಿತ್ಯ ಪರಿಷತ್ತಿನ ಸಭಾಂಗಣದಲ್ಲಿ ಇಲ್ಲದ್ದು ದೊಡ್ಡ ಕೊರತೆಯಾಗಿತ್ತು. ಈಗ ಅವರ ಮಕ್ಕಳು ಶ್ರೀ॥ ತಿರುನಾರಾಯಣ ಯ್ಯಂಗಾರ್ಯರು ಒಂದು ಅಂದವಾದ ದೊಡ್ಡ ಭಾವಚಿತ್ರವನ್ನು ಕೊಟ್ಟಿದ್ದಾರೆ. ಶ್ರೀ॥ ಶಾಮರಾಯರು ಈ ಪರಿಷತ್ತಿನ ಮೂಲಸ್ಥಾಪಕರಲ್ಲಿ ಒಬ್ಬರು; ದಿವಂಗತ ಶ್ರೀ॥ ನರಸಿಂಹಾಚಾರ್ಯರಲ್ಲಿ ತುಂಬ ಪ್ರೇಮವುಳ್ಳವರು' ಎಂದು ಹೇಳಿ ಅವರು ಸಭೆಯ ಅಧ್ಯಕ್ಷತೆ ವಹಿಸಿ ದಿವಂಗತರ ಭಾವಚಿತ್ರವನ್ನು ಅನಾವರಣ ಮಾಡಬೇಕೆಂದು ಪ್ರಾರ್ಥಿಸಿದರು.

ಶ್ರೀ॥ ಶಾಮರಾಯರು ದಿವಂಗತ ಶ್ರೀ॥ ನರಸಿಂಹಾಚಾರ್ಯರ ನೆನಪಿನ ಈ ಉತ್ಸವದಲ್ಲಿ ಭಾಗವಹಿಸಲು ಈ ಮುಪ್ಪಿನಲ್ಲೂ ತಮಗೆ ಬಹಳ ಉತ್ಸಾಹ ವುಂಟಾಯಿತೆಂದು ತಿಳಿಸಿ "೧೮೮೮ರಲ್ಲಿ ನನಗೆ ಶ್ರೀ॥ ನರಸಿಂಹಾಚಾರ್ಯರ ಪರಿಚಯವಾಯಿತು. ಅಂದಿನಿಂದ ನಮ್ಮ ಸ್ನೇಹ ದಿನದಿನಕ್ಕೆ ಬೆಳೆಯುತ್ತ ಬಂತು. ನಾವಿಬ್ಬರೂ ಸೆಂಟ್ರಲ್ ಕಾಲೇಜಿನಲ್ಲಿ ಒಟ್ಟಿಗೆ ಓದಿದೆವು; ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಇಬ್ಬರೂ ಉಪಾಧ್ಯಾಯರಾಗಿದ್ದೆವು. ಭಾಭಾ ಸಾಹೇಬರಲ್ಲಿ ಇಬ್ಬರೂ ಉದ್ಯೋಗಿಗಳಾಗಿದ್ದೆವು. ಶ್ರೀ॥ ನರಸಿಂಹಾಚಾರ್ಯರ ಸಾವಿನ ಸುದ್ದಿ ಕೇಳಿ ನನಗಾದ ದುಃಖ ಅಷ್ಟಿಷ್ಟಲ್ಲ. ದೇಶಕ್ಕೆ ಭೂಷಣವಾಗಿದ್ದ ಅವರ ಭಾವಚಿತ್ರ ಪರಿಷತ್ತಿನ ಸಭಾಂಗಣದಲ್ಲಿರುವುದು ಅತ್ಯವಶ್ಯಕ" ಎಂದು ಹೇಳಿ ಮುಪ್ಪಿನಿಂದ ತಮಗೆ ದೇಹಘಾಟವ ಕಡಿಮೆಯಾದ್ದರಿಂದ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರ ಮೂಲಕ ದಿವಂಗತರ ಭಾವಚಿತ್ರವನ್ನು ಅನಾವರಣ ಮಾಡಿಸಿದರು.

ಬಳಿಕ ದಿವಂಗತರ ಗುಣಕಥನರೂಪವಾದ ಪ್ರಶಂಸಾ ಭಾಷಣಗಳು ನಡೆದವು. ಮೊದಲು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಹೀಗೆ ಹೇಳಿದರು:—

ಅವರು ಕನ್ನಡನಾಡಿಗೆ ಕಲಶಪ್ರಾಯರು. ಕನ್ನಡ ವಿದ್ಯಾಪ್ರಾಬಲ್ಯಕ್ಕೆ ಮಾರ್ಗದರ್ಶಕರಾದರು. ಕನ್ನಡದ ಸ್ಥಾನಮಾನಗಳನ್ನು ಭದ್ರಪಡಿಸಿ ಅದರ ವಿಸ್ತಾರವನ್ನು ಹೆಚ್ಚಿಸಿದರು. ಅವರ ಪ್ರಭಾವ ಮತ್ತು ಬುದ್ಧಿವಾದದಿಂದ ಕನ್ನಡಕ್ಕೆ ವಿಶೇಷ ಪುಷ್ಟಿ ದೊರೆಯಿತು. ಅವರ ಕನ್ನಡದ ಒಲುಮೆ, ಕನ್ನಡ ಮುಂದಕ್ಕೆ ಬರಬೇಕೆಂಬ ಅವರ ಹಂಬಲಿಕೆ, ಅಳವಿಲ್ಲದ್ದು. ಅವರು ಪರಿಷತ್ತಿನ ಆಧಾರಸ್ತಂಭವಾಗಿದ್ದರು; ತಮ್ಮ ಸಾನಿಧ್ಯದ ಬಲವನ್ನು ಕೊಟ್ಟು ಆಶೀರ್ವಾದ ಮಾಡುತ್ತಿದ್ದರು. 'ಕನ್ನಡ ನಾಡು, ನುಡಿ, ಒಂದಾಗಬೇಕು' ಎಂಬುದು ಅವರ ಮೂಲ ಸೂತ್ರ. ಅವರ ಮಾತಿನಿಂದ, ಕಾರ್ಯದಿಂದ ಮತ್ತು ಗ್ರಂಥಗಳಿಂದ ಇದು ಚೆನ್ನಾಗಿ ವ್ಯಕ್ತವಾಗುತ್ತದೆ. ಕನ್ನಡದ ಮೇಲ್ಮೆಯನ್ನು ಸಾಧಿಸುವುದಕ್ಕಾಗಿ ಮಹಾರಾಜರ ಬಳಿ ಒಂದು ನಿಯೋಗ ಗೋಷ್ಠಿಯನ್ನು ತೆಗೆದುಕೊಂಡು ಹೋಗಬೇಕೆಂದೂ ಯೋಚಿಸುತ್ತಿದ್ದರು.

ನೀತಿಮಂಜರಿಯ ಎರಡು ಭಾಗಗಳು, ನಗೆಗಡಲು ಎಂಬ ಹಾಸ್ಯಕಥೆ—ಇವೆರಡೇ ಅವರು ರಚಿಸಿರುವ ಸಾಹಿತ್ಯ ಗ್ರಂಥಗಳು. ಆದರೆ ಅವರು ಪರಿಶೋಧನ ಕ್ಷೇತ್ರದಲ್ಲಿ ವಿಶೇಷವಾಗಿ ದುಡಿದರು. ಶೋಧನೆಯ ಶ್ರಮ, ಅನ್ವೇಷಣದ ಕಷ್ಟ, ಅಷ್ಟಿಷ್ಟಲ್ಲ. ಇವರು ತಮ್ಮ ಜೀವಮಾನವನ್ನೇ ಈ ಕೆಲಸಕ್ಕೆ ಮೀಸಲಿಟ್ಟು ದುಡಿದು ಕನ್ನಡನಾಡಿನ ಹೆಮ್ಮೆಗೆ ತಳಹದಿ ಹಾಕಿದರು; ನಮ್ಮ ಹಿರಿಯರ ಸಂಸ್ಕೃತಿಗೆ ರುಜುವಾತು ಒದಗಿಸಿಕೊಟ್ಟರು. ಕನ್ನಡ ನುಡಿಗೆ ಒಂದು ಸ್ಥಾನ ಕೊಟ್ಟರು. ಕವಿಚರಿತೆಯ ಮೂರು ಸಂಪುಟಗಳೂ ಇದಕ್ಕೆ ಸಾಕ್ಷಿ. ಇವಿಲ್ಲದೆ ಯಾರೂ ಕನ್ನಡದ ವಿಚಾರವಾಗಿ ಮಾತಾಡುವ ಹಾಗಿಲ್ಲ. ಇವುಗಳಿಂದ ಕನ್ನಡದ ವೈಶಾಲ್ಯ, ವೈವಿಧ್ಯ, ವೈಖರಿ ಚೆನ್ನಾಗಿ ಬೆಳಗುತ್ತದೆ. ೧೫೦೦ರವರೆಗೆ ಅವರು ಹೇಳದೆ ಬಿಟ್ಟಿರುವುದು ಯಾವುದೂ ಇಲ್ಲ.

ಈ ಕೆಲಸದಲ್ಲಿ ಅವರಿಗೆ ನೆರವಾಗಿ ದುಡಿದ ಶ್ರೀ॥ ಎಸ್. ಜಿ. ನರಸಿಂಹಾಚಾರ್ಯರನ್ನು ಈ ಸಂದರ್ಭದಲ್ಲಿ ಜ್ಞಾಪಿಸಿಕೊಳ್ಳದೆ ಇರಲಾಗುವುದಿಲ್ಲ. ಅವರ ನೆರವಿನಿಂದ ಕವಿ ಚರಿತೆಯ ಮೊದಲನೆಯ ಸಂಪುಟ ಸರ್ವೋತ್ತಮವಾಯಿತು

ಅವರ ಭಾವ ಚಿತ್ರವನ್ನು ಪರಿಷತ್ತಿನಲ್ಲಿ ಇಡಬೇಕೆಂದು ಎಷ್ಟೋ ಪ್ರಯತ್ನ ಮಾಡಿ ಹುಡುಕಿದೆವು. ಒಂದು ಭಾವ ಚಿತ್ರವೂ ಇದುವರೆಗೆ ಸಿಕ್ಕಲಿಲ್ಲ. ಯಾರಲ್ಲಾದರೂ ಅದು ಇದ್ದು, ಒಂದು ಪ್ರತಿ ಕಳಿಸಿಕೊಟ್ಟರೆ ಪರಿಷತ್ತು ಅವರಿಗೆ ತುಂಬ ಋಣಿಯಾಗಿರುತ್ತದೆ.

ತಾರತಮ್ಯ ಜ್ಞಾನದಿಂದ, ತಾತ್ತ್ವಿಕ ದೃಷ್ಟಿಯಿಂದ, ದ್ರಾವಿಡ ಭಾಷೆಗಳನ್ನು ಹೋಲಿಸಿ ವಿಶ್ವವಿದ್ಯಾನಿಲಯದಲ್ಲಿ ಒಂದು ಉಪನ್ಯಾಸ ಮಾಡಿದರು ಈ ಉಪನ್ಯಾಸ ಪುಸ್ತಕ ರೂಪವಾಗಿ ಪ್ರಕಟವಾಗಿದೆ. ಇದು ಭಾಷಾಶಾಸ್ತ್ರವನ್ನು ಅಭ್ಯಾಸ ಮಾಡುವರಿಗೆ ಅಸ್ತಿವಾರದಂತಿದೆ. ವಿಶ್ವವಿದ್ಯಾನಿಲಯದವರು ಇವರ ಸಾಹಿತ್ಯ ಲೇಖನಗಳನ್ನು ಕೂಡ ಪ್ರಕಟಿಸಬಹುದು.

ಶಾಸನ ವಿಮರ್ಶೆಯಲ್ಲಿ ಇವರು ರೈಸ್ ಮತ್ತು ಕಿಟ್ಟೆಲ್ ಅವರ ಕೆಲಸವನ್ನು ಮುಂದುವರಿಸಿದರು. ತಮ್ಮ ಭಾಷಾಶಾಸ್ತ್ರ ಸಾಹಿತ್ಯ ಪಾಂಡಿತ್ಯವನ್ನು ಉಪಯೋಗಿಸಿಕೊಂಡು ಶಾಸನ ಪರಿಶೋಧನೆ ಮಾಡಿದರು. ಈಗ ಎಷ್ಟು ಹುಡುಕಿದರೂ ಹೊಸ ಶಾಸನದ ಒಂದು ಚೂರುಕೂ ಸಿಕ್ಕಲಾರದು ಎಂಬಷ್ಟು ಪೂರ್ತಿಯಾಗಿ ಶಾಸನಗಳನ್ನೆಲ್ಲ ಶೇಖರಿಸಿದರು. ತಪ್ಪಾಗಿದ್ದ ಎಷ್ಟೋ ಪಾಠಗಳನ್ನು ತಿದ್ದಿದರು. ಅವರು ಶೋಧಿಸಿ ಹೇಳಿದ ಮಾತು ಸುಲಭವಾಗಿ ತೆಗೆಯತಕ್ಕದ್ದಾಗಿರಲಿಲ್ಲ".

ಬಳಿಕ ಶ್ರೀ॥ ಆರ್. ಆಳ್ವಾರಯ್ಯಂಗಾರ್ಯರು ಶ್ರೀ॥ ನರಸಿಂಹಾಚಾರ್ಯರ ಹುಟ್ಟು, ಬಾಲ್ಯ, ವಿದ್ಯಾಭ್ಯಾಸ, ನಡೆ ನುಡಿಗಳು, ಗೃಹಕೃತ್ಯ ಜೀವನ, ರಾಜಭಕ್ತಿ, ದೇಶಭಕ್ತಿ, ದೈವಭಕ್ತಿ, ಮೊದಲಾದ ಆತ್ಮೀಯ ವಿಷಯಗಳನ್ನು ವಿವರಿಸುತ್ತ ಹೊರಗಿನವರಿಗೆ ತಿಳಿಯಲಾಗದ ಅನೇಕ ಸಂಗತಿಗಳನ್ನು ತಿಳಿಯಪಡಿಸಿದರು.

ಆಮೇಲೆ ಶ್ರೀ॥ ಎಂ. ಎ. ನರಸಿಂಹಾಚಾರ್ಯರು ಭಾಷಣ ಮಾಡುತ್ತ, 'ಸರಸ್ವತೀ ಮಂದಿರದಲ್ಲಿ ಸರಸ್ವತಿಯ ಪ್ರೀತಿಪುತ್ರನಿಗೆ ಭಕ್ತಿಯ ಕಾಣಿಕೆ ಸಲ್ಲಿಸಲು ನಾವಿಲ್ಲಿ ಸೇರಿದ್ದೇವೆ. ಶ್ರೀ ನರಸಿಂಹಾಚಾರ್ಯರು ದಿವಂಗತರಾದಾಗ ಜೈನ, ವೀರಶೈವ, ಬ್ರಾಹ್ಮಣ ಮೊದಲಾದ ಎಲ್ಲ ಮತದವರೂ ಸಭೆ ಸೇರಿ ಅನುತಾಪ ತೋರಿದರು. ಅವರ ಕೃತಿಗಳಲ್ಲಿ ಎಲ್ಲರಿಗೂ ಮೆಚ್ಚು. ಮಕ್ಕಳಿಗೆ ನಗೆಗಡಲು; ದೊಡ್ಡವರಿಗೆ ಗ್ರಂಥಗಳ ರಾಶಿ! ಅವರ ಓದುವ ಕೊಟಡಿಯಲ್ಲಿ ಸುತ್ತಲೂ ಕಾಗದದ ಕಟ್ಟು, ಪುಸ್ತಕಗಳ ರಾಶಿ. ತಮ್ಮ ಅದ್ಭುತವಾದ ಜ್ಞಾಪಕ ಶಕ್ತಿಯಿಂದ ಯಾವಾಗ ಯಾವುದು ಬೇಕಾದರೂ ಸುಲಭವಾಗಿ ತೆಗೆದುಬಿಡುತ್ತಿದ್ದರು. ಅವರಿಗೆ ಸರ್ಕಾರದಿಂದ ನಿವೃತ್ತಿಯಾಯಿತೆ ಹೊರತು ಅವರ ಕೆಲಸದಿಂದ ನಿವೃತ್ತಿಯಾಗಲಿಲ್ಲ. ಪ್ರತಿದಿನವೂ ಪದ್ಯ, ನಾಟ್ಯ, ಶಾಸನ, ದೇವಾಲಯ ಮೊದಲಾದುವುಗಳಿಗೆ ಸಂಬಂಧಿಸಿದ ಬಗೆಬಗೆಯ ಸಮಸ್ಯೆಗಳ ವಿಷಯದಲ್ಲಿ ಅವರಿಗೆ ಅನೇಕ ಪ್ರಶ್ನೆಗಳು ಬರುತ್ತಿದ್ದವು. ಅವನ್ನೆಲ್ಲ ಗುರುತು ಹಾಕಿಕೊಂಡು ಆಲೋಚಿಸಿ ತಮ್ಮ ಅಭಿಪ್ರಾಯವನ್ನು ಬರೆದಿಡುತ್ತಿದ್ದರು. ಸಾಯುವ ಒಂದು ವಾರ ಮೊದಲೂ ಹಾಗೆ ಬರೆದಿಟ್ಟಿದ್ದಾರೆ.

ಹೀಗೆ ಸಂತತವಾಗಿ ದುಡಿಯುತ್ತಿದ್ದ ಖ್ಯಾತಿ ಯೂರೋಪು ಮೊದಲಾಗಿ ಪ್ರಪಂಚದ ಎಲ್ಲ ಕಡೆಗಳಲ್ಲೂ ಹಬ್ಬಿತು. ಒಂದು ಸಲ ಮೈಸೂರಿನ ಕೆಲವರು ವಿದ್ಯಾರ್ಥಿಗಳನ್ನು "ನಿಮ್ಮ ಸೀಮೆ ನರಸಿಂಹಾಚಾರ್ಯರ ಮೈಸೂರೋ ?" ಎಂದು ಕೇಳಿದ್ದರಂತೆ.

ಇವರಿಗೆ ಸಮಯನಿಷ್ಠೆ ಬಹಳ ಹೆಚ್ಚು. ಯಾವ ಕೆಲಸವನ್ನೂ ನಾಳೆಗೆಂದು ಮುಂದೆ ತಳ್ಳುತ್ತಿರಲಿಲ್ಲ.

ಈಗ ೫೦ ವರ್ಷಗಳ ಹಿಂದೆ ಕನ್ನಡ ಪುಸ್ತಕಗಳನ್ನು ಕೂಡಿಸುವುದು ಬಹು ಕಷ್ಟವಾಗಿತ್ತು. ಆಗ ಆರ್. ನರಸಿಂಹಾಚಾರ್ಯರು, ಎಸ್. ಜಿ. ನರಸಿಂಹಾಚಾರ್ಯರು, ಎಂ. ಎ. ರಾಮಾನುಜ ಅಯ್ಯಂಗಾರ್ಯರೂ—ಈ ಮೂವರೂ ಒಗ್ಗೂಡಿ ದುಡಿದರು.

ಉಭಯ ವೇದಾಂತ ಸಭೆಯನ್ನು ನಡೆಸುವುದು ಸುಲಭವಾದ ಕೆಲಸವಲ್ಲ. ತೆಂಗಲೆ ಬಡಗಲೆ ಪಂಗಡಗಳ ಜಗಳ ಪ್ರಸಿದ್ಧವಾಗಿವೆ. ಇವರು ಎರಡು ಪಂಗಡಗಳನ್ನು ಒಟ್ಟಿಗೆ ಸೇರಿಸಿ ಐಕಮತ್ಯದಿಂದಿರುವಂತೆ ೩೫ ವರ್ಷ ನಡೆಸಿಕೊಂಡು ಬಂದರು. ಸರಳಜೀವನ, ಉಚ್ಚಧ್ಯೇಯ ಇವೇ ಇವರ ಹಿರಿಮೆ" ಎಂದು ಹೇಳಿ ದೇಶವಿದೇಶಗಳ ಪಂಡಿತರ ಹಲವು ಪ್ರಶಸ್ತಿ ಪತ್ರಗಳನ್ನು ಓದಿದರು.

ಬಳಿಕ ಶ್ರೀ॥ ಎಂ. ಸಿ. ಕೃಷ್ಣಸ್ವಾಮಿ ಅಯ್ಯಂಗಾರ್ಯರು ಮಲ್ಲೇಶ್ವರವನ್ನು ನಿರ್ಮಿಸಿದ ತ್ರಿಮೂರ್ತಿಗಳಲ್ಲಿ ಶ್ರೀ॥ ನರಸಿಂಹಾಚಾರ್ಯರೂ ಒಬ್ಬರೆಂದು ಮಲ್ಲೇಶ್ವರದ ನಿವಾಸಿಗಳಿಗೆ ಅವರಿಂದಾಗಿರುವ ಸೇವೆಯನ್ನು ವಿವರಿಸಿದರು.

ಸಭಾಧ್ಯಕ್ಷರು ಶ್ರೀ॥ ನರಸಿಂಹಾಚಾರ್ಯರ ವಿನಯ ಗುಣವನ್ನು ಶ್ಲಾಘಿಸಿ ಅವರು ಅಧಿಕಾರ ಐಶ್ವರ್ಯಗಳಿಂದ ಸ್ವಲ್ಪವೂ ಬದಲಾಯಿಸದೆ ಚಿಕ್ಕಂದಿನಿಂದ ಕೊನೆಗಾಲದವರೆಗೂ ಒಂದೇರೀತಿ ವಿನಯ ಗುಣಸಂಪನ್ನರಾಗಿದ್ದರೆಂದೂ ಹಣಕ್ಕಾಗಲ್ಲದೆ ನಿಜವಾದ ಅಕ್ಕರೆಯಿಂದ ಶಾಸನ ಶೋಧನೆಯಲ್ಲಿ ತೊಡಗಿದರೆಂದೂ ಅಂಥವರಿಗೆ ಗೌರವದ ಕಾಣಿಕೆಯನ್ನು ಒಪ್ಪಿಸಬೇಕೆಂದು ತಮಗಿದ್ದ ಆಸೆ ನೆರವೇರಿತೆಂದೂ ತಿಳಿಸಿದರು. ಸರ್ವರಿಗೂ ವಂದನೆಗಳನ್ನರ್ಪಿಸಿದಮೇಲೆ ಸಭೆ ಮುಕ್ತಾಯವಾಯಿತು. (ಪ. ಪ್ರಕಟನಶಾಖೆಯಿಂದ)

---

[ ಕನ್ನಡ ಸುದ್ದಿ

**ಚನ್ನರಾಯಪಟ್ಟಣ**

ಕರ್ನಾಟಕ ಸಂಘಕ್ಕೆ ದಿವಾನಸಾಹೇಬರವರು ೩೦ ರೂಪಾಯಿಗಳ ಸಹಾಯ ದ್ರವ್ಯವನ್ನಿತ್ತರು.

**ಮಂಡ್ಯ**

ಕರ್ನಾಟಕ ಸಂಘಕ್ಕೆ ಪ್ರಿನ್ಸ್ ಜಯಚಾಮರಾಜ ಒಡೆಯರವರು ೫೦ ರೂಪಾಯಿಗಳನ್ನು ದಾನಮಾಡಿರುತ್ತಾರೆ.

**ಶಿವಮೊಗ್ಗ**

ಕರ್ನಾಟಕ ಸಂಘದ ಆಶ್ರಯದಲ್ಲಿ ಹದಿನೆಂಟನೆಯ ಉಪನ್ಯಾಸ ಮಾಲೆ ವಿಶ್ವವಿದ್ಯಾನಿಲಯದ ಅಧ್ಯಾಪಕ ಸಂಘದವರಿಂದ ೨೩ರಿಂದ ೨೭ರವರೆಗೆ ನಡೆಸಲಡುತ್ತದೆ.

# ಪರಿಷತ್ತಿನ ಸುದ್ದಿ

## ಉಪನ್ಯಾಸ

ಕರ್ನಾಟಕದ ಪ್ರಸಿದ್ಧ ನೃತ್ತಕಲಾಕೋವಿದರಾದ ಶ್ರೀ ಕುಲಕರ್ಣಿ ಶ್ರೀನಿವಾಸ ಬಿ.ಎ., ಸಂಪಾದಕರು "ಪ್ರೇಮ ಗ್ರಂಥಮಾಲೆ"—ಅವರು ಈ ತಿಂಗಳು ೨೧ನೆಯ ತಾರೀಖು ಬುಧವಾರ ಸಂಜೆ ೬ ಗಂಟೆಗೆ 'ಭಾರತೀಯ ನೃತ್ಯಕಲೆ" ಎಂಬ ವಿಷಯವಾಗಿ ಭಾಷಣ ಮಾಡಿದರು.

## ೨೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಈ ಹಿಂದೆಯೇ ನಿಶ್ಚಯವಾಗಿರುವಂತೆ ೨೩ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಬಳ್ಳಾರಿಯಲ್ಲಿ (ವಾಣೀವಿಲಾಸ ಥಿಯೇಟರಿನಲ್ಲಿ) ಇದೇ ತಿಂಗಳು ೨೯ನೆಯ ತಾರೀಖು ಗುರುವಾರ ಬೆಳಗ್ಗೆ ೮-೩೦ಕ್ಕೆ ಪ್ರಾರಂಭವಾಗಿ ೩೦, ೩೧ನೆಯ ತಾರೀಖುಗಳಲ್ಲಿ ಸಹ ನಡೆಯುವುದು.

ಸರ್ವದರ್ಶನತೀರ್ಥ ವಿದ್ವಾನ್ ಶ್ರೀ. ವೈ. ನಾಗೇಶಶಾಸ್ತ್ರಿಗಳು ಸ್ವಾಗತ ಮಂಡಲಿಯ ಅಧ್ಯಕ್ಷರಾಗಿದ್ದಾರೆ; ಧಾರವಾಡದ ಶ್ರೀಮಾನ್ ಆರ್. ಆರ್. ದಿವಾಕರರವರು ಸಮ್ಮೇಳನದ ಅಧ್ಯಕ್ಷರಾಗಲು ಒಪ್ಪಿರುತ್ತಾರೆ. ಸಂಡೂರಿನ ಶ್ರೀಮಂತ ರಾಜಾಸಾಹೇಬರವರು ಸಮ್ಮೇಳನ ಪ್ರಾರಂಭೋತ್ಸವ ನೆರವೇರಿಸಲು ಒಪ್ಪಿರುತ್ತಾರೆ.

ಸಮ್ಮೇಳನದಲ್ಲಿ ಕನ್ನಡ ಭಾಷಾ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗೆ ಸಂಬಂಧಪಟ್ಟ ಅನೇಕ ಪ್ರಶ್ನೆಗಳು ಚರ್ಚೆಗೆ ಬರುವುವು; ಸಮ್ಮೇಳನದ ಅಂಗಗಳಾಗಿ ಕವಿಗೋಷ್ಠಿಯೂ, ನಾಟಕ ಗೋಷ್ಠಿಯೂ ಏರ್ಪಾಡಾಗಿವೆ. ಅಲ್ಲದೆ, ಎಂದಿನಂತೆ ಉಪನ್ಯಾಸಗಳು, ಸಾಹಿತ್ಯವಾಚನ, ಕಾವ್ಯಗಾಯನ, ಸಂಗೀತ, ನೃತ್ಯ, ನಾಟಕ ಪ್ರದರ್ಶನ, ಶಾರೀರಕಶಕ್ತಿ ಪ್ರದರ್ಶನ, ಐತಿಹಾಸಿಕ ವಸ್ತುಪ್ರದರ್ಶನ ಮುಂತಾದ ಬಗೆಬಗೆಯ ಕಾರ್ಯಗಳು ಏರ್ಪಾಡಾಗಲಿವೆ.

ಶಾಲೆಯ ಉಪಾಧ್ಯಾಯರುಗಳು ಸಮ್ಮೇಳನಕ್ಕೆ ಹೋಗಲು ಬಯಸಿದರೆ ಅವರಿಗೆ ಅವಕಾಶ ಕೊಡಲಾಗುವುದೆಂದು ಸಾಂಗ್ಲಿ ಸಂಸ್ಥಾನದ ವಿದ್ಯಾ ಇಲಾಖೆಯ ಅಧಿಕಾರಿಗಳೂ, ಮೈಸೂರು ಸಂಸ್ಥಾನದ ವಿದ್ಯಾಭ್ಯಾಸ ಇಲಾಖೆಯ ಡೈರೆಕ್ಟರವರೂ ತಿಳಿಸಿದ್ದಾರೆ. ಮೈಸೂರು ಮತ್ತು ಸಾಂಗ್ಲಿ ಸಂಸ್ಥಾನಗಳ ಅಭಿಮಾನಿಗಳಾದ ಉಪಾಧ್ಯಾಯರುಗಳು ಈ ಸದವಕಾಶವನ್ನು ಉಪಯೋಗಿಸಿಕೊಂಡು, ಬಳ್ಳಾರಿಗೆ ಬಂದು ಸಮ್ಮೇಳನದಲ್ಲಿ ಭಾಗವಹಿಸಬೇಕೆಂದು ಬೇಡುತ್ತೇವೆ.

ಕರ್ನಾಟಕದ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ಹೆಚ್ಚು ಸಂಖ್ಯೆಯಲ್ಲಿ ದಯಮಾಡಿ ಬಂದು, ಸಮ್ಮೇಳನವನ್ನು ಯಶಸ್ವಿಯಾಗಿ ಮಾಡಬೇಕೆಂದು ಸ್ವಾಗತ ಮಂಡಲಿ ಪರಿಷತ್ತುಗಳ ಪರವಾಗಿ ಬೇಡುತ್ತೇವೆ.

## ಪರಿಷತ್ತಿನ ಪರವಾಗಿ ರಾಜಸೇವಾಸಕ್ತ "ಶ್ರೀ"ಯವರಿಗೆ ಅಭಿನಂದನೆ

ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಗೆ ನಮ್ಮನ್ನಾಳುವ ಮಹಾಸ್ವಾಮಿಯವರು "ರಾಜಸೇವಾಸಕ್ತ" ಎಂಬ ಬಿರುದನ್ನು ದಯಪಾಲಿಸಿರುವುದಕ್ಕಾಗಿ ಪರಿಷತ್ತಿನ ಸದಸ್ಯರ ಸಂತೋಷ ಅಭಿನಂದನೆಯನ್ನು ವ್ಯಕ್ತಪಡಿಸಲು, ತಾ॥ ೨೯—೧೨—೧೯೩೮ನೆಯ ಗುರುವಾರ ಸಂಜೆ ೫-೩೦ಕ್ಕೆ ಬಳ್ಳಾರಿಯ ಸಮ್ಮೇಳನ ಮಂಟಪದಲ್ಲಿ ಒಂದು ಸಭೆ ಏರ್ಪಾಡಾಗಿದೆ. 'ಶ್ರೀ' ಯವರಿಗೆ ಬಿನ್ನವತ್ತಳೆಯನ್ನು ಅರ್ಪಿಸಲಾಗುವುದು. ಶ್ರೀ॥ ಬೆನಗಲ್ ರಾಮರಾಯರವರು ಸಭಾಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುತ್ತಾರೆ.

## ಭಾಸ್ಕರರಾಯ ಸ್ಮಾರಕ ಸ್ಪರ್ಧೆ: ಫಲಿತಾಂಶ.

ಪರಿಷತ್ತಿನ ಈ ವರ್ಷದ ದಿವಂಗತ ಭಾಸ್ಕರರಾಯ ಸ್ಪರ್ಧೆಯಲ್ಲಿ ಮೈಸೂರಿನ ಶ್ರೀ॥ ಟಿ. ಎಸ್. ಶಾಮರಾಯರಿಗೆ ಪ್ರಥಮ ಬಹುಮಾನ ದೊರೆತಿದೆ. ಮೈಸೂರಿನ ಶ್ರೀ॥ ಕೆ. ನರಸಿಂಹಮೂರ್ತಿ ಎಂಬವರಿಗೆ ಗೌರವ ಪ್ರಶಸ್ತಿ (Honorable Mention) ದೊರೆತಿದೆ.

## ಕಂಠಪಾಠ ಸ್ಪರ್ಧೆಯ ಬಹುಮಾನ ವಿನಿಯೋಗ

ಈ ವರ್ಷ ಪರಿಷತ್ತು ಇದೇ ೧೯ನೆಯ ತಾರೀಖು ಸೋಮವಾರ ಸಂಜೆ ಏರ್ಪಡಿಸಿದ್ದ ಕಂಠಪಾಠ ಸ್ಪರ್ಧೆಗಳಲ್ಲಿ ಗೆದ್ದ ಬಾಲಕ ಬಾಲಕಿಯರಿಗೆ ಬಹುಮಾನ ಹಂಚಲು ಪರಿಷನ್ಮಂದಿರದಲ್ಲಿ ಸಭೆ ಸೇರಿತ್ತು. ಮೈಸೂರು ಸರ್ಕಾರದ ದ್ವಿತೀಯ ಸಚಿವರಾದ ಶ್ರೀ॥ ಕೆ. ವಿ. ಅನಂತರಾಮನ್, ಬಿ.ಎ., ಅವರು ಅಧ್ಯಕ್ಷತೆ ವಹಿಸಿದ್ದರು.

ಈ ವರ್ಷ ಒಟ್ಟು ೩೫ ಶಾಲೆಗಳ ೩೭೯ ಮಂದಿ ಬಾಲಕ ಬಾಲಕಿಯರು ಸ್ಪರ್ಧೆಗಳಲ್ಲಿ ಭಾಗವಹಿಸಿದ್ದರು. ಒಟ್ಟು ೫೨ ಮಂದಿಗೆ ಬಹುಮಾನ ಹಂಚಲಾಗಿದೆ. ಇದರ ವಿವರ:—

ಪ್ರೈಮರಿ ಸ್ಕೂಲು ಬಾಲಕರ ೧೨ ಮಂದಿ, ಬಾಲಕಿಯರು ೧೪ ಮಂದಿ
ಮಿಡಲ್ ಸ್ಕೂಲು ,, ೬ ,, ,, ೯ ,,
ಹೈಸ್ಕೂಲು ,, ,, ,, ,,

ಈ ಸಲ ಪರ್ಯಾಯ ಪಾರಿತೋಷಿಕ ಒಟ್ಟಿನಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಾಣೀವಿಲಾಸ ಇನ್‌ಸ್ಟಿಟ್ಯೂಟಿಗೆ ದೊರೆಯಿತು.

# ಕನ್ನಡ ಸುದ್ದಿ

## ಬೆಂಗಳೂರು

ಶರಣ ಸಾಹಿತ್ಯ ಕಾರ್ಯಾಲಯದವರು ಇದೇ ತಿಂಗಳು ೨೨ ಗುರುವಾರ ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಸಾಯಂಕಾಲ ಅಭಿನವ ಕಾಳಿದಾಸ ಶ್ರೀ ಬಸವಪ್ಪಶಾಸ್ತ್ರಿಗಳ ಜಯಂತ್ಯುತ್ಸವವ ಶ್ರೀ ಎಫ್. ಸಿ. ದೇವರಾಜ ಅರಸಿನವರ ಅಧ್ಯಕ್ಷತೆಯಲ್ಲಿ ನೆ ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಆರಂಭೋತ್ಸವವನ್ನು ನೆ ಕಾರ್ಯಕ್ರಮ: ಪ್ರಾಸ್ತಾವಿಕ ಭಾಷಣ ಮತ್ತು ಭಾವಚಿತ್ರ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್; ಅಧ್ಯಕ್ಷರ ಭಾಷಣ; ಗಳು. i ಬಸಪ್ಪಶಾಸ್ತ್ರಿಗಳೂ ಅವರ ನಾಟಕಗಳೂ—ಶ್ರೀ ಸಿ. ಕೆ. ಮಯ್ಯ. ii ಕವಿಯ ವಿಚಾರ ನಾಲ್ಕು ಮಾತುಗಳು: ಶ್ರೀ ಜಿ. ಶೀಲ್. iii ಬಸವಪ್ಪಶಾಸ್ತ್ರಿಗಳು: ಶ್ರೀ ಟಿ. ಎಲ್. ಚನ್ನಪ್ಪ. iv ಬಸವಪ್ಪ ಭಾಷಾಂತರ ಶಕ್ತಿ - ಶ್ರೀ ಎಸ್. ರಾಮಚಂದ್ರರಾವ್. v ಬಸವಪ್ಪಶಾಸ್ತ್ರಿಗಳ ಕಾವ್ಯಗಳು: ಶ್ರೀ ಅ. ನ. ಕೃಷ್ಣರಾಯ; ಕಾವ್ಯವಾಚನಗಳು; ಶ್ರೀಮತಿ ಲಲಿತಮ್ಮನವರು 'ಸಾವಿತ್ರಿ ಚರಿತ್ರೆ'ಯ ಕೆಲಭಾಗವನ್ನೂ, ಶ್ರೀ ಕಳಲೆ ಸಂಪತ್ಕುಮಾರಾಚಾರ್ಯರು 'ದಮಯಂತಿ ಸ್ವಯಂವರ'ದ ಕೆಲಭಾಗಗಳನ್ನೂ ಓದುತ್ತಾರೆ.

ಶರಣ ಸಾಹಿತ್ಯ ಕಾರ್ಯಾಲಯದವರು ಇದೇ ತಿಂಗಳು ೨೩ನೆಯ ತಾರೀಖು ಶುಕ್ರವಾರ ನಾಟಕ ಸಾರ್ವಭೌಮ ಶ್ರೀ ಜಿ. ಹೆಚ್. ವೀರಣ್ಣನವರಿಗೆ ಅಭಿನಂದನ ಸಭೆಯನ್ನು ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಏರ್ಪಡಿಸಿದ್ದಾರೆ. ಶ್ರೀಗಳಾದ ಬೆನಗಲ್ ರಾಮರಾಯರು, ಅ. ನ. ಕೃಷ್ಣರಾಯರು, ಬಿ. ಶಿವಮೂರ್ತಿಶಾಸ್ತ್ರಿಗಳು ಅಭಿನಂದನ ಭಾಷಣಗಳನ್ನು ಮಾಡುತ್ತಾರೆ. ರಾಜಕಾರ್ಯ ಪ್ರಸಕ್ತ ರಾವ್ ಬಹದ್ದೂರ್ ಎಂ.ವಿ. ರಾಮರಾಯರು ಅಧ್ಯಕ್ಷತೆ ವಹಿಸುತ್ತಾರೆ.

ಅದೇ ಸಂಜೆ ೭ ಗಂಟೆಗೆ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ "ಶರಣ ಸಾಹಿತ್ಯ"ದ ವಾರ್ಷಿಕೋತ್ಸವವು ನಡೆಯುತ್ತದೆ. ವಿದ್ವಾನ್ ಮುನಿರಾಮಯ್ಯ ಮತ್ತು ಮಂಡಳಿಯ ಸಂಗೀತ ವ್ಯವಸ್ಥಿತವಾಗಿದೆ.

## ಚಿಂತಾಮಣಿ

ಈ ತಿಂಗಳು ೯ನೆಯ ತಾರೀಖು ಸ್ಕೂಲ್ ಟೀಚರ್ ಅಸಿಸ್ಟೆಂಟರಾದ ಶ್ರೀ ಬಿ. ವಿ. ರಾಜಪ್ಪನವರ ಅಧ್ಯಕ್ಷತೆಯಲ್ಲಿ ಊರಿನ ಮಹಾ ಜನಗಳು ಸಭೆ ಸೇರಿ "ಕರ್ನಾಟಕ ಸಂಘ"ವೊಂದನ್ನು ಸ್ಥಾಪಿಸಬೇಕೆಂದು ನಿರ್ಣಯಿಸಿದರು.

## ಬಳ್ಳಾರಿ

ಬಳ್ಳಾರಿಯಲ್ಲಿ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ಸೇರುವ ಕವಿಗೋಷ್ಠಿಗೆ ಶ್ರೀ ಜಿ. ಪಿ. ರಾಜರತ್ನಂ, ಎಂ.ಎ. ಅವರು ಅಧ್ಯಕ್ಷರಾಗಿ ಆಹ್ವಾನಿಸಲ್ಪಟ್ಟಿದ್ದಾರೆ.



ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚು ಮಾಡಿ, ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಪರಿಷತ್ತಿನ ಸುದ್ದಿ

## ಉಪನ್ಯಾಸ

ಕರ್ನಾಟಕದ ಪ್ರಸಿದ್ಧ ನೃತ್ಯಕಲಾಕೋವಿದರಾದ ಶ್ರೀ ಕುಲಕರ್ಣಿ ಶ್ರೀನಿವಾಸ ಬಿ.ಎ., ಸಂಪಾದಕರು "ಪ್ರೇಮ ಗ್ರಂಥಮಾಲೆ"—ಅವರು ಈ ತಿಂಗಳು ೨೧ನೆಯ ತಾರೀಖು ಬುಧವಾರ ಸಂಜೆ ೬ ಗಂಟೆಗೆ 'ಭಾರತೀಯ ನೃತ್ಯಕಲೆ" ಎಂಬ ವಿಷಯವಾಗಿ ಭಾಷಣ ಮಾಡಿದರು.

## ೩೩ನೆಯ ಕನ್ನಡ ಸಾಹಿತ್ಯ ಸಮ್ಮೇಳನ

ಈ ಹಿಂದೆಯೇ ನಿಶ್ಚಯವಾಗಿರುವಂತೆ ೩೩ ನೆಯ ಕನ್ನಡ ಸಾಹಿತ್ಯ ಸಮ್ಮೇಳನವು ಬಳ್ಳಾರಿಯಲ್ಲಿ (ವಾಣೀವಿಲಾಸ ಥಿಯೇಟರಿನಲ್ಲಿ) ಇದೇ ತಿಂಗಳು ೨೯ನೆಯ ತಾರೀಖು ಗುರುವಾರ ಬೆಳಗ್ಗೆ ೮-೩೦ಕ್ಕೆ ಪ್ರಾರಂಭವಾಗಿ ೩೦, ೩೧ನೆಯ ತಾರೀಖುಗಳಲ್ಲಿ ಸಹ ನಡೆಯುವುದು.

ಸರ್ವದರ್ಶನತೀರ್ಥ ವಿದ್ವಾನ್ ಶ್ರೀ. ವೈ. ನಾಗೇಶಶಾಸ್ತ್ರಿಗಳು ಸ್ವಾಗತ ಮಂಡಲಿಯ ಅಧ್ಯಕ್ಷರಾಗಿದ್ದಾರೆ; ಧಾರವಾಡದ ಶ್ರೀಮಾನ್ ಆರ್. ಆರ್. ದಿವಾಕರರವರು ಸಮ್ಮೇಳನದ ಅಧ್ಯಕ್ಷರಾಗಲು ಒಪ್ಪಿರುತ್ತಾರೆ. ಸಂಡೂರಿನ ಶ್ರೀಮಂತ ರಾಜಾಸಾಹೇಬರವರು ಸಮ್ಮೇಳನ ಪ್ರಾರಂಭೋತ್ಸವ ನೆರವೇರಿಸಲು ಒಪ್ಪಿರುತ್ತಾರೆ.

ಸಮ್ಮೇಳನದಲ್ಲಿ ಕನ್ನಡ ಭಾಷಾ ಸಾಹಿತ್ಯ ಸಂಸ್ಕೃತಿಗಳ ಏಳಿಗೆಗೆ ಸಂಬಂಧಪಟ್ಟ ಅನೇಕ ಪ್ರಶ್ನೆಗಳು ಚರ್ಚೆಗೆ ಬರುವುವು; ಸಮ್ಮೇಳನದ ಅಂಗಗಳಾಗಿ ಕವಿಗೋಷ್ಠಿಯೂ, ನಾಟಕ ಗೋಷ್ಠಿಯೂ ಏರ್ಪಾಡಾಗಿವೆ. ಅಲ್ಲದೆ, ಎಂದಿನಂತೆ ಉಪನ್ಯಾಸಗಳು, ಸಾಹಿತ್ಯವಾಚನ, ಕಾವ್ಯಗಾಯನ, ಸಂಗೀತ, ನೃತ್ಯ, ನಾಟಕ ಪ್ರದರ್ಶನ, ಶಾರೀರಕಶಕ್ತಿ ಪ್ರದರ್ಶನ, ಐತಿಹಾಸಿಕ ವಸ್ತುಪ್ರದರ್ಶನ ಮುಂತಾದ ಬಗೆಬಗೆಯ ಕಾರ್ಯಗಳು ಏರ್ಪಾಡಾಗಲಿವೆ.

ಶಾಲೆಯ ಉಪಾಧ್ಯಾಯರುಗಳು ಸಮ್ಮೇಳನಕ್ಕೆ ಹೋಗಲು ಬಯಸಿದರೆ ಅವರಿಗೆ ಅವಕಾಶ ಕೊಡಲಾಗುವುದೆಂದು ಸಾಂಗ್ಲಿ ಸಂಸ್ಥಾನದ ವಿದ್ಯಾ ಇಲಾಖೆಯ ಅಧಿಕಾರಿಗಳೂ, ಮೈಸೂರು ಸಂಸ್ಥಾನದ ವಿದ್ಯಾಭ್ಯಾಸ ಇಲಾಖೆಯ ಡೈರೆಕ್ಟರವರೂ ತಿಳಿಸಿದ್ದಾರೆ. ಮೈಸೂರು ಮತ್ತು ಸಾಂಗ್ಲಿ ಸಂಸ್ಥಾನಗಳ ಅಭಿಮಾನಿಗಳಾದ ಉಪಾಧ್ಯಾಯರುಗಳು ಈ ಸದವಕಾಶವನ್ನು ಉಪಯೋಗಿಕೊಂಡು, ಬಳ್ಳಾರಿಗೆ ಬಂದು ಸಮ್ಮೇಳನದಲ್ಲಿ ಭಾಗವಹಿಸಬೇಕೆಂದು ಬೇಡುತ್ತೇವೆ.

ಕರ್ನಾಟಕದ ಎಲ್ಲ ಭಾಗಗಳಿಂದಲೂ ಅಭಿಮಾನಿಗಳು ಹೆಚ್ಚು ಸಂಖ್ಯೆಯಲ್ಲಿ ದಯಮಾಡಿ ಬಂದು, ಸಮ್ಮೇಳನವನ್ನು 'ಯಶಸ್ವಿಯಾಗಿ' ಮಾಡಬೇಕೆಂದು ಸ್ವಾಗತ ಮಂಡಲಿ ಪರಿಷತ್ತುಗಳ ಪರವಾಗಿ ಬೇಡುತ್ತೇವೆ.

## ಪರಿಷತ್ತಿನ ಪರವಾಗಿ ರಾಜಸೇವಾಸಕ್ತ "ಶ್ರೀ"ಯವರಿಗೆ ಅಭಿನಂದನೆ

ಶ್ರೀ. ಬಿ. ಎಂ. ಶ್ರೀಕಂಠಯ್ಯನವರಿಗೆ ನಮ್ಮನ್ನಾಳುವ ಮಹಾಸ್ವಾಮಿಯವರು "ರಾಜಸೇವಾಸಕ್ತ" ಎಂಬ ಬಿರುದನ್ನು ದಯಪಾಲಿಸಿರುವುದಕ್ಕಾಗಿ ಪರಿಷತ್ತಿನ ಸದಸ್ಯರ ಸಂತೋಷ ಅಭಿನಂದನೆಯನ್ನು ವ್ಯಕ್ತಪಡಿಸಲು, ತಾ|| ೨೯—೧೨—೧೯೪೮ನೆಯ ಗುರುವಾರ ಸಂಜೆ ೫-೩೦ಕ್ಕೆ ಬಳ್ಳಾರಿಯ ಸಮ್ಮೇಳನ ಮಂಟಪದಲ್ಲಿ ಒಂದು ಸಭೆ ಏರ್ಪಾಡಾಗಿದೆ. 'ಶ್ರೀ' ಯವರಿಗೆ ಬಿನ್ನವತ್ತಳೆಯನ್ನು ಅರ್ಪಿಸಲಾಗುವುದು. ಶ್ರೀ|| ಬೆನಗಲ್ ರಾಮರಾಯರವರು ಸಭಾಧ್ಯಕ್ಷತೆ ವಹಿಸಲು ದಯಮಾಡಿ ಒಪ್ಪಿರುತ್ತಾರೆ.

## ಭಾಸ್ಕರರಾಯ ಸ್ಮಾರಕ ಸ್ಪರ್ಧೆ: ಫಲಿತಾಂಶ

ಪರಿಷತ್ತಿನ ಈ ವರ್ಷದ ದಿವಂಗತ ಭಾಸ್ಕರರಾಯ ಸ್ಪರ್ಧೆಯಲ್ಲಿ ಮೈಸೂರಿನ ಶ್ರೀ|| ಟಿ. ಎಸ್. ಶಾಮರಾಯರಿಗೆ ಪ್ರಥಮ ಬಹುಮಾನ ದೊರೆತಿದೆ. ಮೈಸೂರಿನ ಶ್ರೀ|| ಕೆ. ನರಸಿಂಹಮೂರ್ತಿ ಎಂಬವರಿಗೆ ಗೌರವ ಪ್ರಶಸ್ತಿ (Honorable Mention) ದೊರೆತಿದೆ.

## ಕಂಠಪಾಠ ಸ್ಪರ್ಧೆಯ ಬಹುಮಾನ ವಿನಿಯೋಗ

ಈ ವರ್ಷ ಪರಿಷತ್ತು ಇದೇ ೧೯ನೆಯ ತಾರೀಖು ಸೋಮವಾರ ಸಂಜೆ ಏರ್ಪಡಿಸಿದ್ದ ಕಂಠಪಾಠ ಸ್ಪರ್ಧೆಗಳಲ್ಲಿ ಗೆದ್ದ ಬಾಲಕ ಬಾಲಕಿಯರಿಗೆ ಬಹುಮಾನ ಹಂಚಲು ಪರಿಷನ್ಮಂದಿರದಲ್ಲಿ ಸಭೆ ಸೇರಿತ್ತು. ಮೈಸೂರು ಸರ್ಕಾರದ ದ್ವಿತೀಯ ಸಚಿವರಾದ ಶ್ರೀ|| ಕೆ. ವಿ. ಅನಂತರಾಮನ್, ಬಿ.ಎ., ಅವರು ಅಧ್ಯಕ್ಷತೆ ವಹಿಸಿದ್ದರು.

ಈ ವರ್ಷ ಒಟ್ಟು ೩೫ ಶಾಲೆಗಳ ೩೭೯ ಮಂದಿ ಬಾಲಕ ಬಾಲಕಿಯರು ಸ್ಪರ್ಧೆಗಳಲ್ಲಿ ಭಾಗವಹಿಸಿದ್ದರು. ಒಟ್ಟು ೫೭ ಮಂದಿಗೆ ಬಹುಮಾನ ಹಂಚಲಾಗಿದೆ. ಇದರ ವಿವರ:—

ಪ್ರೈಮರಿ ಸ್ಕೂಲು ಬಾಲಕರ ೧೨ ಮಂದಿ, ಬಾಲಕಿಯರು ೧೪ ಮಂದಿ
ಮಿಡಲ್ ಸ್ಕೂಲು ,, ೭ ,, ,, ೯ ,,
ಹೈಸ್ಕೂಲು ,, ೫ ,, ,, ೪ ,,

ಈ ಸಲ ಪರ್ಯಾಯ ಪಾರಿತೋಷಿಕ ಒಟ್ಟಿನಲ್ಲಿ ಹೆಚ್ಚು ಅಂಕಗಳನ್ನು ಪಡೆದ ವಾಣೀವಿಲಾಸ ಇನ್ಸ್ಟಿಟ್ಯೂಟಿಗೆ ದೊರೆಯಿತು.

# ಕನ್ನಡ ಸುದ್ದಿ

## ಬೆಂಗಳೂರು

ಶರಣ ಸಾಹಿತ್ಯ ಕಾರ್ಯಾಲಯದವರು ಇದೇ ತಿಂಗಳು ೨೩ ಗುರುವಾರ ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಸಾಯಂಕಾಲ ಅಭಿನವ ಕಾಳಿದಾಸ ಶ್ರೀ ಬಸವಪ್ಪಶಾಸ್ತ್ರಿಗಳ ಜಯಂತ್ಯುತ್ಸವವ ಶ್ರೀ ಎಫ್. ಸಿ. ದೇವರಾಜ ಅರಸಿನವರ ಅಧ್ಯಕ್ಷತೆಯಲ್ಲಿ ನೆ ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರ್ಯರು ಆರಂಭೋತ್ಸವವನ್ನು ನೆ ಕಾರ್ಯಕ್ರಮ: ಪ್ರಾಸ್ತಾವಿಕ ಭಾಷಣ ಮತ್ತು ಭಾವಚಿತ್ರ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್; ಅಧ್ಯಕ್ಷರ ಭಾಷಣ; ಗಳು. i ಬಸಪ್ಪಶಾಸ್ತ್ರಿಗಳೂ ಅವರ ನಾಟಕಗಳೂ—ಶ್ರೀ ಸಿ. ಕೆ. ಮಯ್ಯ. ii ಕವಿಯ ವಿಚಾರ ನಾಲ್ಕು ಮಾತುಗಳು: ಶ್ರೀ ಜಿ. ಶಾಂಲ್. iii ಬಸವಪ್ಪಶಾಸ್ತ್ರಿಗಳು: ಶ್ರೀ ಟಿ. ಎಮ್. ಚನ್ನಪ್ಪ. iv ಬಸವಪ್ಪ ಭಾಷಾಂತರ ಶಕ್ತಿ - ಶ್ರೀ ಎಸ್. ರಾಮಚಂದ್ರರಾವ್. v ಬಸವಪ್ಪಶಾಸ್ತ್ರಿಗಳ ಕಾವ್ಯಗಳು: ಶ್ರೀ ಅ. ನ. ಕೃಷ್ಣರಾಯ; ಕಾವ್ಯವಾಚನಗಳು; ಶ್ರೀಮತಿ ಲಲಿತಮ್ಮನವರು 'ಸಾವಿತ್ರಿ ಚರಿತ್ರೆ'ಯ ಕೆಲಭಾಗವನ್ನೂ, ಶ್ರೀ ಕಳಲೆ ಸಂಪತ್ಕುಮಾರಾಚಾರ್ಯರು 'ದಮಯಂತಿ ಸ್ವಯಂವರ'ದ ಕೆಲಭಾಗಗಳನ್ನೂ ಓದುತ್ತಾರೆ.

ಶರಣ ಸಾಹಿತ್ಯ ಕಾರ್ಯಾಲಯದವರು ಇದೇ ತಿಂಗಳು ೨೪ನೆಯ ತಾರೀಖು ಶುಕ್ರವಾರ ನಾಟಕ ಸಾರ್ವಭೌಮ ಶ್ರೀ ಜಿ. ಹೆಚ್. ವೀರಣ್ಣನವರಿಗೆ ಅಭಿನಂದನ ಸಭೆಯನ್ನು ಕರ್ನಾಟಕ ಸಾಹಿತ್ಯ ಪರಿಷನ್ಮಂದಿರದಲ್ಲಿ ಏರ್ಪಡಿಸಿದ್ದಾರೆ. ಶ್ರೀಗಳಾದ ಬೆನಗಲ್ ರಾಮರಾಯರು, ಅ. ನ. ಕೃಷ್ಣರಾಯರು, ಬಿ. ಶಿವಮೂರ್ತಿಶಾಸ್ತ್ರಿಗಳು ಅಭಿನಂದನ ಭಾಷಣಗಳನ್ನು ಮಾಡುತ್ತಾರೆ. ರಾಜಕಾರ್ಯ ಪ್ರಸಕ್ತ ರಾವ್ ಬಹದ್ದೂರ್ ಎಂ. ಎ. ರಾಮರಾಯರು ಅಧ್ಯಕ್ಷತೆ ವಹಿಸುತ್ತಾರೆ.

ಅದೇ ಸಂಜೆ ೭ ಗಂಟೆಗೆ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ "ಶರಣ ಸಾಹಿತ್ಯ"ದ ವಾರ್ಷಿಕೋತ್ಸವವು ನಡೆಯುತ್ತದೆ. ವಿದ್ವಾನ್ ಮುನಿರಾಮಯ್ಯ ಮತ್ತು ಮಂಡಳಿಯ ಸಂಗೀತ ವ್ಯವಸ್ಥಿತವಾಗಿದೆ.

## ಚಿಂತಾಮಣಿ

ಈ ತಿಂಗಳು ೯ನೆಯ ತಾರೀಖು ಸ್ಕೂಲ್ ಬೋರ್ಡ್ ಅಸಿಸ್ಟೆಂಟರಾದ ಶ್ರೀ ಬಿ. ವಿ. ರಾಚಪ್ಪನವರ ಅಧ್ಯಕ್ಷತೆಯಲ್ಲಿ ಊರಿನ ಮಹಾ ಜನಗಳು ಸಭೆ ಸೇರಿ "ಕರ್ನಾಟಕ ಸಂಘ"ವೊಂದನ್ನು ಸ್ಥಾಪಿಸಲು ನಿರ್ಣಯಿಸಿದರು.

## ಬಳ್ಳಾರಿ

ಬಳ್ಳಾರಿಯಲ್ಲಿ ಸಾಹಿತ್ಯ ಸಮ್ಮೇಳನ ಕಾಲದಲ್ಲಿ ನಡೆವ ಕವಿಗೋಷ್ಠಿಗೆ ಶ್ರೀ ಜಿ. ಪಿ. ರಾಜರತ್ನಂ, ಎಂ.ಎ. ಅವರು ಅಧ್ಯಕ್ಷರಾಗಿ ಆಹ್ವಾನಿಸಲ್ಪಟ್ಟಿದ್ದಾರೆ.



ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ, ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಕನ್ನಡ ನುಡಿ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಸಂಪಾದಕ: ಅ. ನ. ಕೃಷ್ಣರಾಯ

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಜನವರಿ ೬, ೧೯೩೯ [ಸಂಚಿಕೆ ೧೪



# ಕನ್ನಡ ನುಡಿ



ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ
ಸಂಪಾದಕ: ಅ. ನ. ಕೃಷ್ಣರಾಯ

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಜನವರಿ ೬, ೧೯೩೯ [ಸಂಚಿಕೆ ೧೪



॥ ಸಿರಿಗನ್ನಡಂ ಗೆಲ್ಗೆ ॥

# ಕನ್ನಡ ನುಡಿ

ಶುಕ್ರವಾರ, ಜನವರಿ ೬, ೧೯೩೯


## ಹೊಸ ವರ್ಷದ ಹಾರೈಕೆ

ಇಂದು ಹೊಸವರ್ಷ ಬಂದು ಮುಂದಡಿಯಿಡುತ್ತಿದೆ. ಪರಿಷತ್ತೂ, ಅದರ ಕಹಳೆಯಾದ 'ಕನ್ನಡನುಡಿ'ಯೂ ಹೊಸ ವರ್ಷದ ಹೊಸ ಬಾಳಿಗೆ ಕಾಲಿಟ್ಟಿವೆ. ಈ ಸಂದರ್ಭದಲ್ಲಿ ಪರಿಷತ್ತಿನ ಪೂಜ್ಯ ಮಹಾ ಪೋಷಕರಾದ ಶ್ರೀಮನ್ಮಹಾರಾಜರವರಿಗೂ, ಪರಿಷತ್ತಿನ ಪೋಷಕರೂ, ಪೂಜ್ಯ ಅಧ್ಯಕ್ಷರೂ ಆದ ಶ್ರೀಮದ್ಯುವರಾಜರವರಿಗೂ ಮತ್ತು ಪರಿಷತ್ತಿನ ಅಭಿಮಾನಿಗಳಾದ ಶ್ರೀ ಜಯಚಾಮರಾಜ ಒಡೆಯರವರಿಗೂ ಎಲ್ಲ ಶಾಂತಿ ಸುಖಗಳೂ, ವೈಭವಗಳೂ ದೊರೆಯಲೆಂದು ಹಾರೈಸುವುದಲ್ಲದೆ, ಅವರು ಪರಿಷತ್ತಿನ ಮತ್ತು ಕನ್ನಡದ ಏಳಿಗೆಯ ವಿಷಯದಲ್ಲಿ ತೋರುತ್ತಿರುವ ವಿಶೇಷ ಆದರ ಪ್ರೋತ್ಸಾಹಗಳಿಗಾಗಿ ಅವರಿಗೆ ಪರಿಷತ್ತಿನ ಪರವಾದ ಕೃತಜ್ಞತೆಯನ್ನು ಭಕ್ತಿಪುರಸ್ಸರವಾಗಿ ಸಮರ್ಪಿಸುತ್ತೇವೆ.

ಪರಿಷತ್ತಿನ ಸದಸ್ಯರಿಗೂ ಮತ್ತು ನಮ್ಮ ವಾಚಕವೃಂದಕ್ಕೂ ಸಹ ಈ ಹೊಸ ವರ್ಷದಲ್ಲಿ ಎಲ್ಲ ಸುಖ ಸಂಪತ್ತುಗಳೂ ದೊರೆಯಲೆಂದು ಹಾರೈಸಲು ಸಂತೋಷಿಸುತ್ತೇವೆ.

ಈ ಹೊಸ ವರ್ಷದಲ್ಲಿ ಕನ್ನಡಕ್ಕೆ ಎಲ್ಲ ಬಗೆಯಲ್ಲೂ ಶ್ರೇಯಸ್ಸುಂಟಾಗಲಿ, ಕನ್ನಡ ಮುಂದಾಗಲಿ, ಕನ್ನಡನಾಡು ಮುಂದಾಗಿ ಒಂದಾಗಲಿ, ಕನ್ನಡ ಗೆಲ್ಲಲಿ, ಕನ್ನಡತಾಯ ಗುಡಿಯಾದ ಪರಿಷತ್ತು ಹೆಚ್ಚಿನ ಕಳೆಯಿಂದ ಬೆಳಗಲಿ, ಕನ್ನಡ ಬಾವುಟ ವೈಭವದಿಂದ ಹಾರಾಡುತ್ತಿರಲಿ!

## ಪರಿಷತ್ತಿನಲ್ಲಿ ಹೊಸ ಮಾರ್ಪಾಟುಗಳು

ಹೊಸವರ್ಷದ ಹೊಸತನದ ಕುರುಹೆಂಬಂತೆ ಪರಿಷತ್ತಿನಲ್ಲಿ ಕೆಲವು ಹೊಸ ಮಾರ್ಪಾಟುಗಳಾಗಿವೆ. ಆದರೆ ಹೊಸತನವೊಂದೇ ಅವುಗಳ ಮುಖ್ಯ ಲಕ್ಷಣವಲ್ಲ: ಬರಿಯ ಮಾರ್ಪಾಟೊಂದೇ ಹೊಸತನವೂ ಅಲ್ಲ. ಹಳೆಯದರ, ಹಳೆತನದ, ಹಿರಿಯರ ಅನುಭವದ ಸಾರವನ್ನು ಉಳಿಸಿಕೊಂಡು, ಪ್ರಗತಿಸಾಧಕವಾದ ಬದಲಾವಣೆ ಹೊಂದುವುದೇ ನಿಜವಾದ ಹೊಸತನ. ಈ ದೃಷ್ಟಿಯಿಂದ ಪರಿಷತ್ತಿನ ಇತಿಹಾಸದಲ್ಲಿ ಈಗ ಒಂದು ಹೊಸತನ ಮೂಡಿದೆ, ಒಂದು ಹೊಸಯುಗ ಮೊದಲಾಗಿದೆ—ಎಂದು ಹೇಳಿದರೆ ತಪ್ಪಾಗದೆಂದು ನಾವು ಭಾವಿಸುತ್ತೇವೆ.

## ಹೆಸರು ಬದಲಾವಣೆ: ಕನ್ನಡ ಸಾಹಿತ್ಯ ಪರಿಷತ್ತು

ಬಳ್ಳಾರಿಯಲ್ಲಿ ತಾ|| ೨೦—೧೨—೧೯೩೮ರಲ್ಲಿ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಆದ ಒಂದೆರಡು ಮುಖ್ಯ ತೀರ್ಮಾನಗಳು ಪರಿಷತ್ತಿನ ಹೊಸ ಯುಗವನ್ನು ಪ್ರಾರಂಭಿಸಿವೆಯೆಂದು ಹೇಳಬಹುದು. ಒಂದು ಪರಿಷತ್ತಿನ ಹೊಸ ಹೆಸರು. ಮತ್ತೊಂದು ಪರಿಷತ್ತಿನ ಅಂಗರಚನೆಯ ಪುನರ್ಘಟನೆ.

ದ್ರಾವಿಡ ಭಾಷಾಶಾಸ್ತ್ರದ ದೃಷ್ಟಿಯಿಂದ 'ಕರ್ನಾಟಕ' ಎಂಬ ಶಬ್ದರೂಪವು "ಕರ್ಣಾಟಕ" ಎಂಬ 'ಸಂಸ್ಕೃತ' ಶಬ್ದರೂಪಕ್ಕೆ ಮೂಲವೆಂದೂ, ಅದರಷ್ಟೇ ಸಾಧುವಾದದ್ದೆಂದೂ, ಕನ್ನಡನಾಡಿನಲ್ಲೆಲ್ಲ ಒಂದೇರೂಪ ಬಳಕೆಯಲ್ಲಿರಬೇಕೆಂದೂ ಭಾವಿಸಿ ಪರಿಷತ್ಪತ್ರಿಕೆಯಲ್ಲಿಯೂ ವ್ಯವಹಾರದಲ್ಲಿಯೂ ಪರಿಷತ್ತಿನ ಹೆಸರಿನಲ್ಲಿ "ಕರ್ನಾಟಕ" ಎಂಬ ರೂಪವನ್ನೇ ಬಳಕೆಗೆ ತಂದದ್ದೂ, ಕೆಲವು ಮಹನೀಯರು ಈ ಬದಲಾವಣೆಗೆ ಆಕ್ಷೇಪಿಸಿದ್ದೂ ತಿಳಿದ ಸಂಗತಿಗಳು. ಈ ವಿಷಯವನ್ನು ಮೊನ್ನೆ ಬಳ್ಳಾರಿಯಲ್ಲಿ ಸಕಲ ಸದಸ್ಯರ ತೀರ್ಮಾನಕ್ಕೆ ಇರಿಸಲಾಗಿ, "ಕರ್ಣಾಟಕ" ರೂಪವನ್ನೇ ಉಳಿಸಿಕೊಳ್ಳಬೇಕೆಂಬ ಸೂಚನೆ ಬಹುಮತದಿಂದ ಬಿದ್ದುಹೋಯಿತು. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ 'ಕರ್ನಾಟಕ' ಎಂಬ ರೂಪವನ್ನೇ ಇಟ್ಟುಕೊಳ್ಳತಕ್ಕದ್ದೆಂದೂ, ನಿಬಂಧನ ಪರಿಷ್ಕರಣ ಸಮಿತಿಯವರು 'ಕರ್ನಾಟಕ' ಅಥವಾ 'ಕನ್ನಡ' ಎಂಬ ರೂಪವನ್ನು ಇಟ್ಟುಕೊಳ್ಳಬಹುದೆಂದೂ ಸೂಚಿಸಿದ್ದರು. ಸರ್ವಸಮ್ಮತವಾದ "ಕನ್ನಡ" ಎಂಬ ರೂಪವನ್ನೇ ಬಳಕೆಗೆ ತರಬಹುದೆಂದು "ಪರಿಷತ್ಪತ್ರಿಕೆ"ಯ ಸಂಪಾದಕರೂ ಹಿಂದೆ ಸೂಚನೆ ಕೊಟ್ಟಿದ್ದರು. 'ಕನ್ನಡ' ಎಂಬುದರ ಪರವಾಗಿ ಸದಸ್ಯರಿಂದಲೂ ಸೂಚನೆ ಬಂದಿತ್ತು. ಈ ಎರಡು ರೂಪಗಳನ್ನೂ ಸಭೆಯ ಅಭಿಮತಕ್ಕೆ ಒಡ್ಡಲಾಗಿ, ಮೊದಲು ಎರಡರ ಪರವಾಗಿಯೂ ಸಮಸಮವಾಗಿ ಮತಗಳು ಬಂದದ್ದರಿಂದ ಉಪಾಧ್ಯಕ್ಷರು ತಮ್ಮ ನಿರ್ಧಾರಕ ಅಭಿಮತವನ್ನು (casting vote) ಕೊಡದೆ ಮತ್ತೆ ಅಭಿಮತವನ್ನು ತೆಗೆದುಕೊಳ್ಳಲಾಗಿ, 'ಕನ್ನಡ'ಕ್ಕೇ ಬಹುಮತದ ಒಪ್ಪಿಗೆ ದೊರೆತು, ಪರಿಷತ್ತಿನ ಹೆಸರು '**ಕನ್ನಡ**' ಸಾಹಿತ್ಯ **ಪರಿಷತ್ತು** ಎಂದು ಬದಲಾವಣೆ ಹೊಂದಿತು.

"ಕನ್ನಡ" ಎಂಬ ಮಾತಿನಲ್ಲಿ ಕನ್ನಡಿಗರಿಗೆಲ್ಲಾ ನಿಜವಾಗಿಯೂ ಒಂದು ಇಂಪಿದೆ, ಒಂದು ಸೊಂಪಿದೆ. "ಕವಿರಾಜಮಾರ್ಗ"ವನ್ನು ಹಾಕಿದ ನೃಪತುಂಗನ ಬಾಯಲ್ಲೂ, ಎಲ್ಲೆಲ್ಲೂ 'ಕನ್ನಡ'ವೇ: ನೃಪತುಂಗ, ಪಂಪ, ರನ್ನರು ತಿರುಳ್ಗನ್ನಡ, ಒಳ್ಗನ್ನಡ ಎಂದು ಪ್ರೀತಿಯಿಂದ ಕರೆದಿದ್ದಾರೆ. ಕವಿಪರಂಪರೆಯಾಗಿ ಸಾವಿರ ವರ್ಷದಿಂದ 'ಕನ್ನಡ' ಎಂಬುದೇ ಪ್ರಿಯವಾದ ಮಾತಾಗಿದೆ. ಪರಿಷತ್ತಿನ ಹೆಸರಿನಲ್ಲಿ 'ಕನ್ನಡ' ನೆಲಸಿದ್ದು ಕನ್ನಡಿಗರಿಗೆಲ್ಲ ಸಂತೋಷದ ವಿಷಯವೆಂದೇ ನಮ್ಮ ದೃಢವಾದ ನಂಬಿಕೆ. 'ಕನ್ನಡ' ಮಾತಿನಲ್ಲಿರುವ ಮಂತ್ರಶಕ್ತಿಯಿಂದ ಕನ್ನಡ ಮಕ್ಕಳೆಲ್ಲರೂ ಒಡಕು ತೊಲಗಿ ಒಕ್ಕೂಟವಾಗಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ಪರಿಷತ್ತಿನ ಹೊಸ ಅಂಗರಚನೆ

೨೩ ವರ್ಷಗಳ ಹಿಂದೆ, ಕನ್ನಡ ಭಾಷೆ ಸಾಹಿತ್ಯಗಳನ್ನು ಬೆಳಸಿ, ಒಂದುಗೂಡಿಸಿ, ಸಾರ್ವಜನಿಕವಾಗಿ ಹರಡುವ ಉದ್ದೇಶದಿಂದ ಕನ್ನಡನಾಡಿನ ಹಿರಿಯರು ಸೇರಿ ಈ ಪರಿಷತ್ತನ್ನು ಸ್ಥಾಪಿಸಿದರು; ಪರಿಷತ್ತು ಅಖಿಲ ಕರ್ನಾಟಕ ಸಂಸ್ಥೆಯಾಗಬೇಕೆಂಬ ಉದ್ದೇಶದಿಂದ ಅದರ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕನ್ನಡನಾಡಿನ ಬೇರೆ ಬೇರೆ ೬ ಪ್ರಾಂತಗಳ ಪ್ರತಿನಿಧಿಗಳು ಇರಬೇಕೆಂಬ ಯೋಜನೆ ಮಾಡಿದರು. ಅದೇ ಮೇರೆಗೆ ಇಂದಿನವರೆಗೂ ಪರಿಷತ್ತು ಎಲ್ಲ ಕನ್ನಡಿಗರ ಪರವಾಗಿ, ಎಲ್ಲ ಕನ್ನಡಿಗರಿಗಾಗಿ ಕೆಲಸಮಾಡುತ್ತ ಬಂದಿತು: ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದು, ಪರಿಷತ್ಪತ್ರಿಕೆಯನ್ನು ಪ್ರಕಟಿಸುವುದು, ಪ್ರತಿವರ್ಷವೂ ಸಮ್ಮೇಳನ ನಡಸುವುದು—ಮುಂತಾದ ಉಪಯುಕ್ತ ಕಾರ್ಯಗಳನ್ನು ಪರಿಷತ್ತು ನಡಸಿಕೊಂಡು ಬಂದಿತು. ೫-೬ ವರ್ಷಗಳ ಕೆಳಗೆ ಪರಿಷತ್ತಿಗೆ ಒಂದು ಮಂದಿರವಾಯಿತು; ಕನ್ನಡಕ್ಕೆ ಯಾವ ಮಹಾಸ್ವಾಮಿಯವರು ಆಶ್ರಯದಾತರಾಗಿರುವರೋ ಆ ಮಹಾನುಭಾವರಾದ, ರಾಜರ್ಷಿಗಳಾದ ಶ್ರೀಮನ್ಮಹಾರಾಜರವರು ಕನ್ನಡದ ಮಂದಿರಕ್ಕೆ ತಮ್ಮ ದಿವ್ಯನಾಮಾಂಕಿತವನ್ನು ಕರುಣಿಸಿ ಅದನ್ನು ಹರಸಿದರು. ಶ್ರೀಮದ್ಯುವರಾಜರವರು ಮಮತೆ ವಾತ್ಸಲ್ಯದಿಂದ ಪರಿಷತ್ತಿನ ಅಧ್ಯಕ್ಷರಾಗಲೊಪ್ಪಿ, ಬಹು ಕಾಲದಿಂದ ಇಂದಿನವರೆಗೂ ಅಧ್ಯಕ್ಷರಾಗಿದ್ದುಕೊಂಡು ಪರಿಷತ್ತನ್ನು ಅಭಿಮಾನದಿಂದ ಪೋಷಿಸಿಕೊಂಡು ಬರುತ್ತಿದ್ದಾರೆ. ಪರಿಷತ್ತಿಗೊಂದು ಕಟ್ಟಡದೊರೆತ ತರುವಾಯದಲ್ಲಿಯೇ ಶ್ರೀ|| ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿ, ೪ ವರ್ಷಕಾಲ ಒಂದೇ ಸಮವಾಗಿ ಪರಿಷತ್ತಿಗಾಗಿ ದುಡಿದು, ತಿಂಗಳು ತಿಂಗಳೂ ಕಾರ್ಯನಿರ್ವಾಹಕ ಮಂಡಲಿ ಕೂಡುವಂತೆ ಮಾಡಿ, ತಿಂಗಳು ತಿಂಗಳಿಗೂ ೩-೪ ಉಪನ್ಯಾಸ ನಡೆಯುವಂತೆ ಏರ್ಪಡಿಸಿ, ವಿಶೇಷ ಸಾಹಿತ್ಯೋತ್ಸವ, ಗ್ರಂಥಪ್ರದರ್ಶನ, ಸಂಘಸಮ್ಮೇಳನ ಮುಂತಾದ ಹೊಸ ಕಾರ್ಯಗಳನ್ನು ಹೂಡಿ, ಸಮ್ಮೇಳನದ ಏರ್ಪಾಟನ್ನು ವ್ಯವಸ್ಥೆಗೆ ತಂದು ಪರಿಷತ್ತಿನ ಕಾರ್ಯಕ್ಷೇತ್ರವನ್ನು ಬಹುಮುಖವಾಗಿ

॥ ಸಿರಿಗನ್ನಡಂ ಗೆಲ್ಗೆ ॥

# ಕನ್ನಡನುಡಿ

ಶುಕ್ರವಾರ, ಜನವರಿ ೬, ೧೯೫೬

## ಹೊಸ ವರ್ಷದ ಹಾರೈಕೆ

ಇಂದು ಹೊಸವರ್ಷ ಬಂದು ಮುಂದಡಿಯಿಡುತ್ತಿದೆ. ಪರಿಷತ್ತೂ, ಅದರ ಕಹಳೆಯಾದ 'ಕನ್ನಡನುಡಿ'ಯೂ ಹೊಸ ವರ್ಷದ ಹೊಸ ಬಾಳಿಗೆ ಕಾಲಿಟ್ಟಿವೆ. ಈ ಸಂದರ್ಭದಲ್ಲಿ ಪರಿಷತ್ತಿನ ಪೂಜ್ಯ ಮಹಾ ಪೋಷಕರಾದ ಶ್ರೀಮನ್ಮಹಾರಾಜರವರಿಗೂ, ಪರಿಷತ್ತಿನ ಪೋಷಕರೂ, ಪೂಜ್ಯ ಅಧ್ಯಕ್ಷರೂ ಆದ ಶ್ರೀಮದ್ಯುವರಾಜರವರಿಗೂ ಮತ್ತು ಪರಿಷತ್ತಿನ ಅಭಿಮಾನಿಗಳಾದ ಶ್ರೀ ಜಯಚಾಮರಾಜ ಒಡೆಯರವರಿಗೂ ಎಲ್ಲ ಶಾಂತಿ ಸುಖಗಳೂ, ವೈಭವಗಳೂ ದೊರೆಯಲೆಂದು ಹಾರೈಸುವುದಲ್ಲದೆ, ಅವರು ಪರಿಷತ್ತಿನ ಮತ್ತು ಕನ್ನಡದ ಏಳಿಗೆಯ ವಿಷಯದಲ್ಲಿ ತೋರುತ್ತಿರುವ ವಿಶೇಷ ಆದರ ಪ್ರೋತ್ಸಾಹಗಳಿಗಾಗಿ ಅವರಿಗೆ ಪರಿಷತ್ತಿನ ಪರವಾದ ಕೃತಜ್ಞತೆಯನ್ನು ಭಕ್ತಿಪುರಸ್ಸರವಾಗಿ ಸಮರ್ಪಿಸುತ್ತೇವೆ.

ಪರಿಷತ್ತಿನ ಸದಸ್ಯರಿಗೂ ಮತ್ತು ನಮ್ಮ ವಾಚಕವೃಂದಕ್ಕೂ ಸಹ ಈ ಹೊಸ ವರ್ಷದಲ್ಲಿ ಎಲ್ಲ ಸುಖ ಸಂಪತ್ತುಗಳೂ ದೊರೆಯಲೆಂದು ಹಾರೈಸಲು ಸಂತೋಷಿಸುತ್ತೇವೆ.

ಈ ಹೊಸ ವರ್ಷದಲ್ಲಿ ಕನ್ನಡಕ್ಕೆ ಎಲ್ಲ ಬಗೆಯಲ್ಲೂ ಶ್ರೇಯಸ್ಸುಂಟಾಗಲಿ, ಕನ್ನಡ ಮುಂದಾಗಲಿ, ಕನ್ನಡನಾಡು ಮುಂದಾಗಿ ಒಂದಾಗಲಿ, ಕನ್ನಡ ಗೆಲ್ಲಲಿ, ಕನ್ನಡತಾಯ ಗುಡಿಯಾದ ಪರಿಷತ್ತು ಹೆಚ್ಚಿನ ಕಳೆಯಿಂದ ಬೆಳಗಲಿ, ಕನ್ನಡ ಬಾವುಟ ವೈಭವದಿಂದ ಹಾರಾಡುತ್ತಿರಲಿ!

## ಪರಿಷತ್ತಿನಲ್ಲಿ ಹೊಸ ಮಾರ್ಪಾಟುಗಳು

ಹೊಸವರ್ಷದ ಹೊಸತನದ ಕುರುಹೆಂಬಂತೆ ಪರಿಷತ್ತಿನಲ್ಲಿ ಕೆಲವು ಹೊಸ ಮಾರ್ಪಾಟುಗಳಾಗಿವೆ. ಆದರೆ ಹೊಸತನವೊಂದೇ ಅವುಗಳ ಮುಖ್ಯ ಲಕ್ಷಣವಲ್ಲ: ಬರಿಯ ಮಾರ್ಪಾಟೊಂದೇ ಹೊಸತನವೂ ಅಲ್ಲ. ಹಳೆಯದರ, ಹಳೆತನದ, ಹಿರಿಯರ ಅನುಭವದ ಸಾರವನ್ನು ಉಳಿಸಿಕೊಂಡು, ಪ್ರಗತಿಸಾಧಕವಾದ ಬದಲಾವಣೆ ಹೊಂದುವುದೇ ನಿಜವಾದ ಹೊಸತನ. ಈ ದೃಷ್ಟಿಯಿಂದ ಪರಿಷತ್ತಿನ ಇತಿಹಾಸದಲ್ಲಿ ಈಗ ಒಂದು ಹೊಸತನ ಮೂಡಿದೆ, ಒಂದು ಹೊಸಯುಗ ಮೊದಲಾಗಿದೆ–ಎಂದು ಹೇಳಿದರೆ ತಪ್ಪಾಗದೆಂದು ನಾವು ಭಾವಿಸುತ್ತೇವೆ.

## ಹೆಸರು ಬದಲಾವಣೆ: ಕನ್ನಡ ಸಾಹಿತ್ಯ ಪರಿಷತ್ತು

ಬಳ್ಳಾರಿಯಲ್ಲಿ ತಾ॥ ೩೦—೧೨—೧೯೫೫ರಲ್ಲಿ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಆದ ಒಂದೆರಡು ಮುಖ್ಯ ತೀರ್ಮಾನಗಳು ಪರಿಷತ್ತಿನ ಹೊಸ ಯುಗವನ್ನು ಪ್ರಾರಂಭಿಸಿವೆಯೆಂದು ಹೇಳಬಹುದು. ಒಂದು ಪರಿಷತ್ತಿನ ಹೊಸ ಹೆಸರು. ಮತ್ತೊಂದು ಪರಿಷತ್ತಿನ ಅಂಗ ರಚನೆಯ ಪುನರ್ಘಟನೆ.

ದ್ರಾವಿಡ ಭಾಷಾಶಾಸ್ತ್ರದ ದೃಷ್ಟಿಯಿಂದ 'ಕರ್ನಾಟಕ' ಎಂಬ ಶಬ್ದರೂಪವು "ಕರ್ಣಾಟಕ" ಎಂಬ 'ಸಂಸ್ಕೃತ' ಶಬ್ದರೂಪಕ್ಕೆ ಮೂಲವೆಂದೂ, ಅದರಿಂದ್ಲೇ ಸಾಧುವಾದದ್ದೆಂದೂ, ಕನ್ನಡನಾಡಿನಲ್ಲೆಲ್ಲ ಒಂದೇರೂಪ ಬಳಕೆಯಲ್ಲಿರಬೇಕೆಂದೂ ಭಾವಿಸಿ ಪರಿಷತ್ಪತ್ರಿಕೆಯಲ್ಲಿಯೂ ವ್ಯವಹಾರದಲ್ಲಿಯೂ ಪರಿಷತ್ತಿನ ಹೆಸರಿನಲ್ಲಿ "ಕರ್ನಾಟಕ" ಎಂಬ ರೂಪವನ್ನೇ ಬಳಕೆಗೆ ತಂದದ್ದೂ, ಕೆಲವು ಮಹನೀಯರು ಈ ಬದಲಾವಣೆಗೆ ಆಕ್ಷೇಪಿಸಿದ್ದೂ ತಿಳಿದ ಸಂಗತಿಗಳು. ಈ ವಿಷಯವನ್ನು ಮೊನ್ನೆ ಬಳ್ಳಾರಿಯಲ್ಲಿ ಸಕಲ ಸದಸ್ಯರ ತೀರ್ಮಾನಕ್ಕೆ ಇರಿಸಲಾಗಿ, "ಕರ್ಣಾಟಕ" ರೂಪವನ್ನೇ ಉಳಿಸಿಕೊಳ್ಳಬೇಕೆಂಬ ಸೂಚನೆ ಬಹುಮತದಿಂದ ಬಿದ್ದುಹೋಯಿತು. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ 'ಕರ್ನಾಟಕ' ಎಂಬ ರೂಪವನ್ನೇ ಇಟ್ಟುಕೊಳ್ಳತಕ್ಕದ್ದೆಂದೂ, ನಿಬಂಧನ ಪರಿಷ್ಕರಣ ಸಮಿತಿಯವರು 'ಕರ್ನಾಟಕ' ಅಥವಾ 'ಕನ್ನಡ' ಎಂಬ ರೂಪವನ್ನು ಇಟ್ಟುಕೊಳ್ಳಬಹುದೆಂದೂ ಸೂಚಿಸಿದ್ದರು. ಸರ್ವಸಮ್ಮತವಾದ "ಕನ್ನಡ" ಎಂಬ ರೂಪವನ್ನೇ ಬಳಕೆಗೆ ತರಬಹುದೆಂದು "ಪರಿಷತ್ಪತ್ರಿಕೆ"ಯ ಸಂಪಾದಕರೂ ಹಿಂದೆ ಸೂಚನೆ ಕೊಟ್ಟಿದ್ದರು. 'ಕನ್ನಡ' ಎಂಬುವರ ಪರವಾಗಿ ಸದಸ್ಯರಿಂದಲೂ ಸೂಚನೆ ಬಂದಿತ್ತು. ಈ ಎರಡು ರೂಪಗಳನ್ನೂ ಸಭೆಯ ಅಭಿಮತಕ್ಕೆ ಒಡ್ಡಲಾಗಿ, ಮೊದಲು ಎರಡರ ಪರವಾಗಿಯೂ ಸಮಸಮವಾಗಿ ಮತಗಳು ಬಂದದ್ದರಿಂದ ಉಪಾಧ್ಯಕ್ಷರು ತಮ್ಮ ನಿರ್ಧಾರಕ ಅಭಿಮತವನ್ನು (casting vote) ಕೊಡದೆ ಮತ್ತೆ ಅಭಿಮತವನ್ನು ತೆಗೆದುಕೊಳ್ಳಲಾಗಿ, 'ಕನ್ನಡ'ಕ್ಕೇ ಬಹುಮತದಒಪ್ಪಿಗೆ ದೊರೆತು, ಪರಿಷತ್ತಿನ ಹೆಸರು **'ಕನ್ನಡ' ಸಾಹಿತ್ಯ ಪರಿಷತ್ತು** ಎಂದು ಬದಲಾವಣೆ ಹೊಂದಿತು.

"ಕನ್ನಡ" ಎಂಬ ಮಾತಿನಲ್ಲಿ ಕನ್ನಡಿಗರಿಗೆಲ್ಲಾ ನಿಜವಾಗಿಯೂ ಒಂದು ಇಂಪಿದೆ, ಒಂದು ಸೊಂಪಿದೆ. "ಕವಿರಾಜಮಾರ್ಗ"ವನ್ನು ಹಾಕಿದ ನೃಪತುಂಗನ ಬಾಯಲ್ಲೂ, ಎಲ್ಲೆಲ್ಲೂ 'ಕನ್ನಡ'ವೇ: ನೃಪತುಂಗ, ಪಂಪ, ರನ್ನರು ತಿರುಳ್ಗನ್ನಡ, ಬಳ್ಗನ್ನಡ ಎಂದು ಪ್ರೀತಿಯಿಂದ ಕರೆದಿದ್ದಾರೆ. ಕವಿಪರಂಪರೆಯಾಗಿ ಸಾವಿರ ವರ್ಷದಿಂದ 'ಕನ್ನಡ' ಎಂಬುದೇ ಪ್ರಿಯವಾದ ಮಾತಾಗಿದೆ. ಪರಿಷತ್ತಿನ ಹೆಸರಿನಲ್ಲಿ 'ಕನ್ನಡ' ನೆಲಸಿದ್ದು ಕನ್ನಡಿಗರಿಗೆಲ್ಲ ಸಂತೋಷದ ವಿಷಯವೆಂದೇ ನಮ್ಮ ದೃಢವಾದ ನಂಬಿಕೆ. 'ಕನ್ನಡ' ಮಾತಿನಲ್ಲಿರುವ ಮಂತ್ರಶಕ್ತಿಯಿಂದ ಕನ್ನಡ ಮಕ್ಕಳೆಲ್ಲರೂ ಒಡಕು ತೊಲಗಿ ಒಕ್ಕೂಟವಾಗಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ಪರಿಷತ್ತಿನ ಹೊಸ ಅಂಗರಚನೆ

೪೨ ವರ್ಷಗಳ ಹಿಂದೆ, ಕನ್ನಡ ಭಾಷೆ ಸಾಹಿತ್ಯಗಳನ್ನು ಬೆಳಸಿ, ಒಂದುಗೂಡಿಸಿ, ಸಾರ್ವಜನಿಕವಾಗಿ ಹರಡುವ ಉದ್ದೇಶದಿಂದ ಕನ್ನಡ ನಾಡಿನ ಹಿರಿಯರು ಸೇರಿ ಈ ಪರಿಷತ್ತನ್ನು ಸ್ಥಾಪಿಸಿದರು; ಪರಿಷತ್ತು ಅಖಿಲ ಕರ್ನಾಟಕ ಸಂಸ್ಥೆಯಾಗಬೇಕೆಂಬ ಉದ್ದೇಶದಿಂದ ಅದರ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕನ್ನಡನಾಡಿನ ಬೇರೆ ಬೇರೆ ೬ ಪ್ರಾಂತಗಳ ಪ್ರತಿನಿಧಿಗಳು ಇರಬೇಕೆಂಬ ಯೋಜನೆ ಮಾಡಿದರು. ಅದೇ ಮೇರೆಗೆ ಇಂದಿನವರೆಗೂ ಪರಿಷತ್ತು ಎಲ್ಲ ಕನ್ನಡಿಗರ ಪರವಾಗಿ, ಎಲ್ಲ ಕನ್ನಡಿಗರಿಗಾಗಿ ಕೆಲಸಮಾಡುತ್ತ ಬಂದಿತು: ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದು, ಪರಿಷತ್ಪತ್ರಿಕೆಯನ್ನು ಪ್ರಕಟಿಸುವುದು, ಪ್ರತಿ ವರ್ಷವೂ ಸಮ್ಮೇಳನ ನಡಸುವುದು–ಮುಂತಾದ ಉಪಯುಕ್ತ ಕಾರ್ಯಗಳನ್ನು ಪರಿಷತ್ತು ನಡಸಿಕೊಂಡು ಬಂದಿತು. ೫-೬ ವರ್ಷಗಳ ಕೆಳಗೆ ಪರಿಷತ್ತಿಗೆ ಒಂದು ಮಂದಿರವಾಯಿತು; ಕನ್ನಡಕ್ಕೆ ಯಾವ ಮಹಾಸ್ವಾಮಿಯವರು ಆಶ್ರಯದಾತರಾಗಿರುವರೋ ಆ ಮಹಾನುಭಾವರಾದ, ರಾಜರ್ಷಿಗಳಾದ ಶ್ರೀಮನ್ಮಹಾರಾಜರವರು ಕನ್ನಡದ ಮಂದಿರಕ್ಕೆ ತಮ್ಮ ದಿವ್ಯನಾಮಾಂಕಿತವನ್ನು ಕರುಣಿಸಿ ಅದನ್ನು ಹರಸಿದರು. ಶ್ರೀಮದ್ಯುವರಾಜರವರು ಮಮತೆ ವಾತ್ಸಲ್ಯದಿಂದ ಪರಿಷತ್ತಿನ ಅಧ್ಯಕ್ಷರಾಗಲೊಪ್ಪಿ, ಬಹು ಕಾಲದಿಂದ ಇಂದಿನವರೆಗೂ ಅಧ್ಯಕ್ಷರಾಗಿದ್ದುಕೊಂಡು ಪರಿಷತ್ತನ್ನು ಅಭಿಮಾನದಿಂದ ಪೋಷಿಸಿಕೊಂಡು ಬರುತ್ತಿದ್ದಾರೆ. ಪರಿಷತ್ತಿಗೊಂದು ಕಟ್ಟಡದೊರೆತ ತರುವಾಯವಲ್ಲಿಯೇ ಶ್ರೀ॥ ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿ, ೪ ವರ್ಷಕಾಲ ಒಂದೇ ಸಮವಾಗಿ ಪರಿಷತ್ತಿಗಾಗಿ ದುಡಿದು, ತಿಂಗಳು ತಿಂಗಳೂ ಕಾರ್ಯನಿರ್ವಾಹಕ ಮಂಡಲಿ ಕೂಡುವಂತೆ ಮಾಡಿ, ತಿಂಗಳು ತಿಂಗಳಿಗೂ ೩-೪ ಉಪನ್ಯಾಸ ನಡೆಯುವಂತೆ ಏರ್ಪಡಿಸಿ, ವಿಶೇಷ ಸಾಹಿತ್ಯೋತ್ಸವ, ಗ್ರಂಥಪ್ರದರ್ಶನ, ಸಂಘಸಮ್ಮೇಳನ ಮುಂತಾದ ಹೊಸ ಕಾರ್ಯಗಳನ್ನು ಹೂಡಿ, ಸಮ್ಮೇಳನದ ಏರ್ಪಾಟನ್ನು ವ್ಯವಸ್ಥೆಗೆ ತಂದು ಪರಿಷತ್ತಿನ ಕಾರ್ಯಕ್ಷೇತ್ರವನ್ನು ಬಹುಮುಖವಾಗಿ

ವಿಸ್ತಾರ ಪಡಿಸಿದರು. ಅವರ ಕಾಲದಲ್ಲಿ ಪರಿಷತ್ತಿಗೆ ಒಂದು ಹೊಸ ಯುಗ ಪ್ರಾರಂಭವಾಯಿತೆಂದು ಹೇಳಬೇಕು.

ಪರಿಷತ್ತಿನ ಈಗಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಮುಂದಾಳುತನದಲ್ಲಿ ಕಳೆದ ವರ್ಷದಲ್ಲಿ ಪರಿಷತ್ತು ಮೈಸೂರಿನ ಒಂದು ಹಳ್ಳಿಯಲ್ಲಿ, ಉತ್ತರ ಕರ್ನಾಟಕದಲ್ಲಿ ವಸಂತೋತ್ಸವನ್ನು ನಡಸಿ, 'ಕನ್ನಡ ಬಾವುಟ'ವನ್ನು ಪ್ರಕಟಿಸಿ, 'ಕನ್ನಡನಾಡಿನ ಚರಿತ್ರೆ'ಯನ್ನು ಬರೆಸುವ ಏರ್ಪಾಡುಮಾಡಿ, ಮಹಿಳೆಯರನ್ನು ಪರಿಷತ್ತಿಗೆ ಹೆಚ್ಚಾಗಿ ಸೇರಿಸಿ, ಹೊಸಹೊಸ ಕಾರ್ಯಗಳನ್ನು ನಡಸಿದ್ದಲ್ಲದೆ, ಮುಖ್ಯವಾಗಿ ಪರಿಷತ್ತಿನ ಘಟನೆಯಲ್ಲಿ ಮಾರ್ಪಾಟುಗಳನ್ನು ಮಾಡಿ ಪರಿಷತ್ತಿನ ದೌರ್ಬಲ್ಯಗಳನ್ನು ನಿವಾರಿಸಿ, ಅದು ಹೆಚ್ಚು ಬಲದಿಂದಲೂ, ಕಾರ್ಯಶಕ್ತಿಯಿಂದಲೂ, ಪ್ರಾಂತಗಳ ವಿಜೃಂಭಣೆಯಿಂದಲೂ ಮುಂದೆ ಸಾಗುವುದಕ್ಕೆ ತಳಹದಿಯನ್ನು ಹಾಕಿದೆ.

೧೯೩೮ನೆಯ ಡಿಸೆಂಬರಿನಲ್ಲಿ ಜಮಖಂಡಿಯಲ್ಲಾದ ವಾರ್ಷಿಕಾಧಿವೇಶನದಲ್ಲಿ ಪರಿಷತ್ತಿನ ನಿಬಂಧನೆಗಳನ್ನೆಲ್ಲ ಪರಿಷ್ಕರಿಸುವ ಸಲುವಾಗಿ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕವಾಯಿತಷ್ಟೆ. ಆ ಸಮಿತಿ, ಪರಿಷತ್ತಿನ ಉದ್ದೇಶ ಸಾಧನೆ ಕಾರ್ಯಕಲಾಪಗಳಲ್ಲಿ ಸಹಕರಿಸಲು ಒಂದು ಪ್ರತಿನಿಧಿಮಂಡಲಿ ಇರತಕ್ಕದ್ದೆಂದೂ, ಪರಿಷತ್ತಿನ (ಹಿಂದಿನ) ಕಾರ್ಯನಿರ್ವಾಹಕ ಮಂಡಲಿಯ ಯೋಜನೆಯೇ ಇದಕ್ಕೂ ಅನ್ವಯಿಸತಕ್ಕದ್ದೆಂದೂ, ಪರಿಷತ್ತಿನ ಆಡಳಿತವನ್ನು ನೋಡಿಕೊಳ್ಳಲು ೧೨ ಮಂದಿ ಸದಸ್ಯರುಳ್ಳ ಒಂದು ಕಾರ್ಯಸಮಿತಿಯಿರತಕ್ಕದ್ದೆಂದೂ, ಇದಕ್ಕೆ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ಅರಮನೆಯ ಪ್ರತಿನಿಧಿಗಳು ಇವರ ಜೊತೆಗೆ ನಾಲ್ಕುಪ್ರಾಂತಗಳಿಂದ ಇಬ್ಬಿಬ್ಬರಂತೆ ಎಂಟುಮಂದಿ ಪ್ರಾಂತ ಪ್ರತಿನಿಧಿಗಳಿರಬೇಕೆಂದೂ, ಮೈಸೂರು – ಕೊಡಗು ಒಂದು ಪ್ರಾಂತವಾಗಿಯೂ ಉತ್ತರ ಕರ್ನಾಟಕ ಸಂಸ್ಥಾನಗಳು ಮುಂಬೈ ಕರ್ನಾಟಕದೊಂದಿಗೆ ಸೇರಿ ಒಂದು ಪ್ರಾಂತವಾಗಿಯೂ, ಎರಡು ಪ್ರಾಂತಗಳನ್ನು ಕಡಮೆ ಮಾಡಬೇಕೆಂದೂ, ಪ್ರಾಂತಗಳ ಕೆಲಸಗಳನ್ನು ನಿರ್ವಹಿಸಲು ಪ್ರಾಂತ ಪ್ರತಿನಿಧಿಗಳನ್ನೊಳಗೊಂಡ ಪ್ರಾಂತಸಮಿತಿಗಳಿರತಕ್ಕದ್ದೆಂದೂ, ಪ್ರಾಂತದ ಉತ್ಪನ್ನದಲ್ಲಿ ಶೇಕಡ ೭೦ರಷ್ಟನ್ನು ಪರಿಷತ್ತಿಗೆ ಸಲ್ಲಿಸಿ, ಉಳಿದದ್ದನ್ನು ಪ್ರಾಂತದ ಕೆಲಸಕ್ಕೆ ವಿನಿಯೋಗಿಸಿಕೊಳ್ಳತಕ್ಕದ್ದೆಂದೂ ಸಲಹೆ ಮಾಡಿತು. ಸಕಲ ಸದಸ್ಯರ ಅಧಿವೇಶನ ಈ ವಿಚಾರವನ್ನು ಕೂಲಂಕಷವಾಗಿ ಪರ್ಯಾಲೋಚಿಸಿ ಕೆಲವು ಬದಲಾವಣೆಗಳೊಡನೆ ಮುಖ್ಯಾಂಶಗಳನ್ನು ಒಪ್ಪಿತು. ಈ ಹೊಸ ಅಂಗರಚನೆ ಹೇಗೆಂದರೆ—

**(೧) ಪ್ರಾಂತಗಳು ನಾಲ್ಕು**

ಪರಿಷತ್ತಿನ ಘಟನೆಯ ದೃಷ್ಟಿಯಿಂದ ಕನ್ನಡನಾಡನ್ನು ಹಿಂದೆ ಮೈಸೂರು, ಬೊಂಬಾಯಿ, ಮದರಾಸು, ಹೈದರಾಬಾದು, ಕೊಡಗು, ಉತ್ತರ ಕರ್ನಾಟಕ ಸಂಸ್ಥಾನಗಳು ಎಂದು ೬ ಪ್ರಾಂತಗಳಾಗಿ ವಿಂಗಡಿಸಿತ್ತು. ಈಗ ನಾಲ್ಕುಪ್ರಾಂತಗಳಾಗಿ ಪುನರ್ವಿಭಾಗವಾಗಿದೆ :—

(೧) ಮೈಸೂರು ಕರ್ನಾಟಕ (ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮತ್ತೂರು, ಕೊಳ್ಳೇಗಾಲ, ಸೇಲಂಗಳ ಕನ್ನಡ ಭಾಗಗಳು), (೨) ಉತ್ತರ ಕರ್ನಾಟಕ (ಧಾರವಾಡ, ಉತ್ತರ ಕನ್ನಡ, ಬೆಳಗಾಂವಿ, ಬಿಜಾಪುರ, ಬಳ್ಳಾರಿ-ಅನಂತಪುರ, ಸೋಲಾಪುರ; ಸತಾರ ಜಿಲ್ಲೆಗಳ ಕನ್ನಡ ಭಾಗಗಳು, ಕೊಪ್ಪಳ ಮತ್ತು ಮುಂಬೈ ಕರ್ನಾಟಕ ಸಂಸ್ಥಾನಗಳು), (೩) ಹೈದರಾಬಾದು ಕರ್ನಾಟಕ (ಹೈದರಾಬಾದು ಸಂಸ್ಥಾನದ ಕನ್ನಡ ಜಿಲ್ಲೆಗಳು – ಕೊಪ್ಪಳವನ್ನು ಬಿಟ್ಟು) ಮತ್ತು (೪) ದಕ್ಷಿಣ ಕರ್ನಾಟಕ ದಕ್ಷಿಣ ಕನ್ನಡ ಮತ್ತು ಕೊಡಗು)

**(೨) ಪ್ರತಿನಿಧಿಗಳ ಮಂಡಲಿ**

ಮೇಲೆಕಂಡ ಪ್ರತಿಯೊಂದು ಪ್ರಾಂತದಿಂದಲೂ ಪ್ರತಿನಿಧಿಗಳನ್ನು ಆಯ್ದು ಪ್ರತಿನಿಧಿ ಮಂಡಲಿಯನ್ನು ಯೋಜಿಸಲಾಗಿದೆ. ಒಟ್ಟು ಪ್ರತಿನಿಧಿಗಳ ಸಂಖ್ಯೆ ೫೦ ಮಂದಿ. ಈ ಪೈಕಿ ೨೫ ಮಂದಿಯನ್ನು ಆಯಾಪ್ರಾಂತದ ಜನಸಂಖ್ಯಾನುಗುಣವಾಗಿಯೂ, ಉಳಿದ ೨೫ಮಂದಿಯನ್ನು ಆಯಾ ಪ್ರಾಂತದ ಸದಸ್ಯ ಸಂಖ್ಯಾನುಸಾರವಾಗಿಯೂ ಹಂಚತಕ್ಕದ್ದೆಂದು ತೀರ್ಮಾನವಾದ ಮೇರೆಗೆ **ಈ ವರ್ಷ** ಮೈಸೂರು ಪ್ರಾಂತಕ್ಕೆ ೨೯ ಮಂದಿ, ಉತ್ತರಕರ್ನಾಟಕ ಪ್ರಾಂತಕ್ಕೆ ೧೫ ಮಂದಿ, ದಕ್ಷಿಣಕರ್ನಾಟಕ ಪ್ರಾಂತಕ್ಕೆ ೩ ಮಂದಿ, ಹೈದರಾಬಾದು ಪ್ರಾಂತಕ್ಕೆ ೩ ಮಂದಿ ಈ ರೀತಿ ೫೦ಪ್ರತಿನಿಧಿಗಳ ಹಂಚಿಕೆಯಾಗಿದೆ.

**(೩) ಪ್ರಾಂತ ಸಮಿತಿಗಳು**

ಆಯಾ ಪ್ರಾಂತದ ಪ್ರತಿನಿಧಿಗಳೇ ಪ್ರಾಂತ ಸಮಿತಿಯಾಗಿರುವರು. ಪ್ರಾಂತ ಸಮಿತಿ ತನ್ನ ಪ್ರಾಂತದಲ್ಲಿ ಉತ್ಪನ್ನಮಾಡಿದ ಸಾಮಾನ್ಯ ಸದಸ್ಯರ, ಸಾಮಾನ್ಯ ಅಂಗಸಂಸ್ಥೆಗಳ ಮತ್ತು ಅಭಿಮಾನಿಗಳ ಚಂದಾ ಮೊಬಲಗಿನ ಮೊತ್ತದಲ್ಲಿ ಒಂದು ಅಂಶವನ್ನು ಪ್ರಾಂತದ ಕೆಲಸಕ್ಕೆ ಉಳಿಸಿಕೊಂಡು, ಎರಡು ಅಂಶಗಳನ್ನು ಪರಿಷತ್ತಿಗೆ ಸಲ್ಲಿಸತಕ್ಕದ್ದು.

**(೪) ಕಾರ್ಯಸಮಿತಿ**

ಕೇಂದ್ರದಲ್ಲಿ ಪರಿಷತ್ತಿನ ಆಡಳಿತಗಳನ್ನೂ, ಅಖಿಲ ಕರ್ನಾಟಕ ವ್ಯಾಪ್ತಿಯುಳ್ಳ ಮುಖ್ಯ ಮುಖ್ಯ ಕಾರ್ಯಗಳನ್ನೂ ನಿರ್ವಹಿಸಲು ಅಧ್ಯಕ್ಷರಲ್ಲದೆ ಅಧಿಕಾರಿಗಳು (೩); ಅರಮನೆಯ ಪ್ರತಿನಿಧಿಗಳು (೧) ಈ ನಾಲ್ವರನ್ನೂ ಬಿಟ್ಟು ೮ ಮಂದಿ ಪ್ರಾಂತಪ್ರತಿನಿಧಿಗಳಾದ ಸದಸ್ಯರನ್ನುಳ್ಳ ಕಾರ್ಯಸಮಿತಿ ಏರ್ಪಟ್ಟಿದೆ. ಉತ್ತರ ಕರ್ನಾಟಕ ಪ್ರಾಂತಕ್ಕೆ ೫ ಮಂದಿ, ಮೈಸೂರು ಪ್ರಾಂತಕ್ಕೆ ಒಬ್ಬರು (ಮೇಲೆ ಹೇಳಿದ ನಾಲ್ವರೂ ಕೂಡಿ ಒಟ್ಟು ೫), ದಕ್ಷಿಣ ಕರ್ನಾಟಕ ಪ್ರಾಂತಕ್ಕೆ ಒಬ್ಬರು, ಮತ್ತು ಹೈದರಾಬಾದು ಪ್ರಾಂತಕ್ಕೆ ಒಬ್ಬರು. ಹೀಗೆ ಕಾರ್ಯಸಮಿತಿಯಲ್ಲಿ ಇರತಕ್ಕ ಒಟ್ಟು ಸದಸ್ಯರ ಸಂಖ್ಯೆ ೧೨.

**(೫) ಚುನಾವಣೆಯ ಕ್ರಮ**

ಇದುವರೆಗೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರು ಸೂಚನೆಯನ್ನು (Nomination) ಆಯಾ ಪ್ರಾಂತದ ಸದಸ್ಯರು ಮಾಡಿ, ಎಲ್ಲ ಸದಸ್ಯರೂ ಆಯ್ಕೆ (Election) ಮಾಡುತ್ತಿದ್ದರು. ಈಗ ಯಾವ ಪ್ರಾಂತದ ಸದಸ್ಯರು ಬೇಕಾದರೂ ಹೆಸರು ಸೂಚನೆಯನ್ನು ಮಾಡಬಹುದು. ಇದರಿಂದ ಪರಿಷತ್ತಿನ ಸರ್ವಸದಸ್ಯರೂ ಪ್ರತಿನಿಧಿಗಳನ್ನೂ, ಕಾರ್ಯಸಮಿತಿಯ ಸದಸ್ಯರನ್ನೂ ಹೆಸರು ಸೂಚಿಸಲೂ, ಚುನಾವಣೆ ಮಾಡಲೂ ಅರ್ಹರಾಗುತ್ತಾರೆ. ಚುನಾವಣೆ ವಾರ್ಷಿಕಾಧಿವೇಶನದಲ್ಲಿ ನಡೆಯುತ್ತದೆ. ಎಂದಿನಂತೆ ಸಕಲ ಸದಸ್ಯರೇ ಉಪಾಧ್ಯಕ್ಷರನ್ನೂ ಚುನಾಯಿಸುತ್ತಾರೆ. ಕಾರ್ಯದರ್ಶಿಗಳನ್ನೂ ಕೋಶಾಧ್ಯಕ್ಷರನ್ನೂ ಉಪಾಧ್ಯಕ್ಷರೇ ನೇಮಿಸಿಕೊಳ್ಳುವಂತೆ ತೀರ್ಮಾನವಾಗಿದೆ. ಈ ರೀತಿಯಲ್ಲಿ ಕಾರ್ಯಸಮಿತಿ ಅರೆಪಾಲು "ಕ್ಯಾಬಿನೆಟ್" ತತ್ವವನ್ನು ಅಂಗೀಕರಿಸಿದಂತಾಯಿತು. ಉಪಾಧ್ಯಕ್ಷರೇ ಇತರ ಸದಸ್ಯರನ್ನೂ ನೇಮಕ ಮಾಡಿಕೊಂಡು, ಪೂರ್ತಿ ಕ್ಯಾಬಿನೆಟ್ ಮಾಡಿಕೊಳ್ಳಬಹುದೆಂಬ ಸೂಚನೆ ಬಂದು ದೀರ್ಘಚರ್ಚೆ ನಡೆಯಿತು. ಸದ್ಯಕ್ಕೆ ಉಪಾಧ್ಯಕ್ಷರಿಗೆ ಇಷ್ಟೊಂದು ಅಧಿಕಾರವೂ ಜವಾಬ್ದಾರಿಯೂ ಬೇಡವೆಂಬುದಾಗಿ ಅಭಿಪ್ರಾಯಪಟ್ಟು ಈ ಸೂಚನೆಗೆ ಉಪಾಧ್ಯಕ್ಷರೇ ಒಪ್ಪಲಿಲ್ಲ. ಸೂಚನೆಯನ್ನು ಅಭಿಮತಕ್ಕೆ ಒಡ್ಡಿದಾಗ ಅದು ಬಹುಮತದಿಂದ ಬಿದ್ದು ಹೋಯಿತು.

**ಈ ವರ್ಷದ ಆಯ್ಕೆಗಳು :**

ಮೇಲೆ ಕಂಡ ಹೊಸ ತೀರ್ಮಾನಗಳನ್ನು ಅನುಸರಿಸಿಯೇ ಈ ವರ್ಷದ ಪ್ರತಿನಿಧಿಮಂಡಲಿ ಮತ್ತು ಕಾರ್ಯಸಮಿತಿಯ ಸದಸ್ಯರು, ಉಪಾಧ್ಯಕ್ಷರು. ಮತ್ತು ಇತರ ಅಧಿಕಾರಿಗಳು ಇವರ ಆಯ್ಕೆಯಾಗಿದೆ. (ಪ್ರತಿನಿಧಿ ಮಂಡಲಿಯ ಸದಸ್ಯರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು ; ಕಾರ್ಯ ಸಮಿತಿಯ ಸದಸ್ಯರ ಹೆಸರನ್ನು ಇದೇ ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಕೊಟ್ಟಿದೆ.) ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ತಾವು ಎರಡು ವರ್ಷಕ್ಕೆ ಚುನಾಯಿತರಾಗಿದ್ದರೂ, ಹೊಸ ಅಂಗರಚನೆಯ ಕಾಲದಲ್ಲಿ ಸದಸ್ಯರು ಸ್ವತಂತ್ರರಾಗಿರತಕ್ಕದ್ದೆಂದು ತಮ್ಮ ಸ್ಥಳವನ್ನು ಬಿಟ್ಟುಕೊಟ್ಟರು. ಹೊಸ ಚುನಾವಣೆಯಲ್ಲಿ, ಶ್ರೀ॥ ಶ್ರೀಕಂಠಯ್ಯನವರೇ ಸರ್ವಾನುಮತದಿಂದ ಈ ವರ್ಷವೂ ಉಪಾಧ್ಯಕ್ಷರಾಗಿ ಆಯ್ದು ಬಂದರು; ಉಪಾಧ್ಯಕ್ಷರು ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರನ್ನು ಗೌರವ ಕಾರ್ಯದರ್ಶಿಯವರಾಗಿಯೂ, ಶ್ರೀ॥ ವಿ. ಸೀತಾರಾಮಯ್ಯನವರನ್ನು ಗೌರವ ಕೋಶಾಧ್ಯಕ್ಷರಾಗಿಯೂ ನೇಮಕ ಮಾಡಿದರು.

* * *

(೧೧೯ನೆಯ ಪುಟಕ್ಕೆ ಮುಂದುವರಿಸಿದೆ.)

ವಿಸ್ತಾರ ಪಡಿಸಿದರು. ಅವರ ಕಾಲದಲ್ಲಿ ಪರಿಷತ್ತಿಗೆ ಒಂದು ಹೊಸ ಯುಗ ಪ್ರಾರಂಭವಾಯಿತೆಂದು ಹೇಳಬೇಕು.

ಪರಿಷತ್ತಿನ ಈಗಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಮುಂದಾಳುತನದಲ್ಲಿ ಕಳೆದ ವರ್ಷದಲ್ಲಿ ಪರಿಷತ್ತು ಮೈಸೂರಿನ ಒಂದು ಹಳ್ಳಿಯಲ್ಲಿ, ಉತ್ತರ ಕರ್ನಾಟಕದಲ್ಲಿ ವಸಂತೋತ್ಸವನ್ನು ನಡಸಿ, 'ಕನ್ನಡ ಬಾವುಟ'ವನ್ನು ಪ್ರಕಟಿಸಿ, 'ಕನ್ನಡನಾಡಿನ ಚರಿತ್ರೆ'ಯನ್ನು ಬರಸುವ ಏರ್ಪಾಡುಮಾಡಿ, ಮಹಿಳೆಯರನ್ನು ಪರಿಷತ್ತಿಗೆ ಹೆಚ್ಚಾಗಿ ಸೇರಿಸಿ, ಹೊಸಹೊಸ ಕಾರ್ಯಗಳನ್ನು ನಡಸಿದ್ದಲ್ಲದೆ, ಮುಖ್ಯವಾಗಿ ಪರಿಷತ್ತಿನ ಘಟನೆಯಲ್ಲಿ ಮಾರ್ಪಾಟುಗಳನ್ನು ಮಾಡಿ ಪರಿಷತ್ತಿನ ದೌರ್ಬಲ್ಯಗಳನ್ನು ನಿವಾರಿಸಿ, ಅದು ಹೆಚ್ಚು ಬಲದಿಂದಲೂ, ಕಾರ್ಯಶಕ್ತಿಯಿಂದಲೂ, ಪ್ರಾಂತಗಳ ವಿಜೃಂಭಣೆಯಿಂದಲೂ ಮುಂದೆ ಸಾಗುವುದಕ್ಕೆ ತಳಹದಿಯನ್ನು ಹಾಕಿದೆ.

೧೯೩೮ನೆಯ ಡಿಸೆಂಬರಿನಲ್ಲಿ ಜಮಖಂಡಿಯಲ್ಲಾದ ವಾರ್ಷಿಕಾಧಿವೇಶನದಲ್ಲಿ ಪರಿಷತ್ತಿನ ನಿಬಂಧನೆಗಳನ್ನೆಲ್ಲ ಪರಿಷ್ಕರಿಸುವ ಸಲುವಾಗಿ ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕವಾಯಿತಷ್ಟೆ. ಆ ಸಮಿತಿ, ಪರಿಷತ್ತಿನ ಉದ್ದೇಶ ಸಾಧನೆ ಕಾರ್ಯಕಲಾಪಗಳಲ್ಲಿ ಸಹಕರಿಸಲು ಒಂದು ಪ್ರತಿನಿಧಿಮಂಡಲಿ ಇರತಕ್ಕದ್ದೆಂದೂ, ಪರಿಷತ್ತಿನ (ಹಿಂದಿನ) ಕಾರ್ಯನಿರ್ವಾಹಕ ಮಂಡಲಿಯ ಯೋಜನೆಯೇ ಇದಕ್ಕೂ ಅನ್ವಯಿಸತಕ್ಕದ್ದೆಂದೂ, ಪರಿಷತ್ತಿನ ಆಡಳಿತವನ್ನು ನೋಡಿಕೊಳ್ಳಲು ೧೨ ಮಂದಿ ಸದಸ್ಯರುಳ್ಳ ಒಂದು ಕಾರ್ಯಸಮಿತಿಯಿರತಕ್ಕದ್ದೆಂದೂ, ಇದಕ್ಕೆ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ಅರಮನೆಯ ಪ್ರತಿನಿಧಿಗಳು ಇವರ ಜೊತೆಗೆ ನಾಲ್ಕುಪ್ರಾಂತಗಳಿಂದ ಇಬ್ಬಿಬ್ಬರಂತೆ ಎಂಟುಮಂದಿ ಪ್ರಾಂತ ಪ್ರತಿನಿಧಿಗಳಿರಬೇಕೆಂದೂ, ಮೈಸೂರು – ಕೊಡಗು ಒಂದು ಪ್ರಾಂತವಾಗಿಯೂ ಉತ್ತರ ಕರ್ನಾಟಕ ಸಂಸ್ಥಾನಗಳು ಮುಂಬೈ ಕರ್ನಾಟಕದೊಂದಿಗೆ ಸೇರಿ ಒಂದು ಪ್ರಾಂತವಾಗಿಯೂ, ಎರಡು ಪ್ರಾಂತಗಳನ್ನು ಕಡಮೆ ಮಾಡಬೇಕೆಂದೂ, ಪ್ರಾಂತಗಳ ಕೆಲಸಗಳನ್ನು ನಿರ್ವಹಿಸಲು ಪ್ರಾಂತ ಪ್ರತಿನಿಧಿಗಳನ್ನೊಳಗೊಂಡ ಪ್ರಾಂತಸಮಿತಿಗಳಿರತಕ್ಕದ್ದೆಂದೂ, ಪ್ರಾಂತದ ಉತ್ಪನ್ನದಲ್ಲಿ ಶೇಕಡ ೭೦ರಷ್ಟನ್ನು ಪರಿಷತ್ತಿಗೆ ಸಲ್ಲಿಸಿ, ಉಳಿದದ್ದನ್ನು ಪ್ರಾಂತದ ಕೆಲಸಕ್ಕೆ ವಿನಿಯೋಗಿಸಿಕೊಳ್ಳತಕ್ಕದ್ದೆಂದೂ ಸಲಹೆ ಮಾಡಿತು. ಸಕಲ ಸದಸ್ಯರ ಅಧಿವೇಶನ ಈ ವಿಚಾರವನ್ನು ಕೂಲಂಕಷವಾಗಿ ಪರ್ಯಾಲೋಚಿಸಿ ಕೆಲವು ಬದಲಾವಣೆಗಳೊಡನೆ ಮುಖ್ಯಾಂಶಗಳನ್ನು ಒಪ್ಪಿತು. ಈ ಹೊಸ ಅಂಗರಚನೆ ಹೇಗೆಂದರೆ—

**(೧) ಪ್ರಾಂತಗಳು ನಾಲ್ಕು**

ಪರಿಷತ್ತಿನ ಘಟನೆಯ ದೃಷ್ಟಿಯಿಂದ ಕನ್ನಡನಾಡನ್ನು ಹಿಂದೆ ಮೈಸೂರು, ಬೊಂಬಾಯಿ, ಮದರಾಸು, ಹೈದರಾಬಾದು, ಕೊಡಗು, ಉತ್ತರ ಕರ್ನಾಟಕ ಸಂಸ್ಥಾನಗಳು ಎಂದು ೬ ಪ್ರಾಂತಗಳಾಗಿ ವಿಂಗಡಿಸಿತ್ತು. ಈಗ ನಾಲ್ಕುಪ್ರಾಂತಗಳಾಗಿ ಪುನರ್ವಿಭಾಗವಾಗಿದೆ :—

(೧) ಮೈಸೂರು ಕರ್ನಾಟಕ (ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮತ್ತೂರು, ಕೊಳ್ಳೇಗಾಲ, ಸೇಲಂಗಳ ಕನ್ನಡ ಭಾಗಗಳು), (೨) ಉತ್ತರ ಕರ್ನಾಟಕ (ಧಾರವಾಡ, ಉತ್ತರ ಕನ್ನಡ, ಬೆಳಗಾಂವಿ, ಬಿಜಾಪುರ, ಬಳ್ಳಾರಿ-ಅನಂತಪುರ, ಸೋಲಾಪುರ; ಸತಾರ ಜಿಲ್ಲೆಗಳ ಕನ್ನಡ ಭಾಗಗಳು, ಕೊಪ್ಪಳ ಮತ್ತು ಮುಂಬೈ ಕರ್ನಾಟಕ ಸಂಸ್ಥಾನಗಳು), (೩) ಹೈದರಾಬಾದು ಕರ್ನಾಟಕ (ಹೈದರಾಬಾದು ಸಂಸ್ಥಾನದ ಕನ್ನಡ ಜಿಲ್ಲೆಗಳು – ಕೊಪ್ಪಳವನ್ನು ಬಿಟ್ಟು) ಮತ್ತು (೪) ದಕ್ಷಿಣ ಕರ್ನಾಟಕ ದಕ್ಷಿಣ ಕನ್ನಡ ಮತ್ತು ಕೊಡಗು)

**(೨) ಪ್ರತಿನಿಧಿಗಳ ಮಂಡಲಿ**

ಮೇಲೆಕಂಡ ಪ್ರತಿಯೊಂದು ಪ್ರಾಂತದಿಂದಲೂ ಪ್ರತಿನಿಧಿಗಳನ್ನು ಆಯ್ದು ಪ್ರತಿನಿಧಿ ಮಂಡಲಿಯನ್ನು ಯೋಜಿಸಲಾಗಿದೆ. ಒಟ್ಟು ಪ್ರತಿನಿಧಿಗಳ ಸಂಖ್ಯೆ ೫೦ ಮಂದಿ. ಈ ಪೈಕಿ ೨೫ ಮಂದಿಯನ್ನು ಆಯಾಪ್ರಾಂತದ ಜನಸಂಖ್ಯಾನುಗುಣವಾಗಿಯೂ, ಉಳಿದ ೨೫ಮಂದಿಯನ್ನು ಆಯಾ ಪ್ರಾಂತದ ಸದಸ್ಯ ಸಂಖ್ಯಾನುಸಾರವಾಗಿಯೂ ಹಂಚತಕ್ಕದ್ದೆಂದು ತೀರ್ಮಾನವಾದ ಮೇರೆಗೆ **ಈ ವರ್ಷ** ಮೈಸೂರು ಪ್ರಾಂತಕ್ಕೆ ೨೯ ಮಂದಿ, ಉತ್ತರಕರ್ನಾಟಕ ಪ್ರಾಂತಕ್ಕೆ ೧೫ ಮಂದಿ, ದಕ್ಷಿಣಕರ್ನಾಟಕ ಪ್ರಾಂತಕ್ಕೆ ೩ ಮಂದಿ, ಹೈದರಾಬಾದು ಪ್ರಾಂತಕ್ಕೆ ೩ ಮಂದಿ ಈ ರೀತಿ ೫೦ಪ್ರತಿನಿಧಿಗಳ ಹಂಚಿಕೆಯಾಗಿದೆ.

**(೩) ಪ್ರಾಂತ ಸಮಿತಿಗಳು**

ಆಯಾ ಪ್ರಾಂತದ ಪ್ರತಿನಿಧಿಗಳೇ ಪ್ರಾಂತ ಸಮಿತಿಯಾಗಿರುವರು. ಪ್ರಾಂತ ಸಮಿತಿ ತನ್ನ ಪ್ರಾಂತದಲ್ಲಿ ಉತ್ಪನ್ನಮಾಡಿದ ಸಾಮಾನ್ಯ ಸದಸ್ಯರ, ಸಾಮಾನ್ಯ ಅಂಗಸಂಸ್ಥೆಗಳ ಮತ್ತು ಅಭಿಮಾನಿಗಳ ಚಂದಾ ಮೊಬಲಗಿನ ಮೊತ್ತದಲ್ಲಿ ಒಂದು ಅಂಶವನ್ನು ಪ್ರಾಂತದ ಕೆಲಸಕ್ಕೆ ಉಳಿಸಿಕೊಂಡು, ಎರಡು ಅಂಶಗಳನ್ನು ಪರಿಷತ್ತಿಗೆ ಸಲ್ಲಿಸತಕ್ಕದ್ದು.

**(೪) ಕಾರ್ಯಸಮಿತಿ**

ಕೇಂದ್ರದಲ್ಲಿ ಪರಿಷತ್ತಿನ ಆಡಳಿತಗಳನ್ನೂ, ಅಖಿಲ ಕರ್ನಾಟಕ ವ್ಯಾಪ್ತಿಯುಳ್ಳ ಮುಖ್ಯ ಮುಖ್ಯ ಕಾರ್ಯಗಳನ್ನೂ ನಿರ್ವಹಿಸಲು ಅಧ್ಯಕ್ಷರಲ್ಲದೆ ಅಧಿಕಾರಿಗಳು (೩); ಅರಮನೆಯ ಪ್ರತಿನಿಧಿಗಳು (೧) ಈ ನಾಲ್ವರನ್ನೂ ಬಿಟ್ಟು ೮ ಮಂದಿ ಪ್ರಾಂತಪ್ರತಿನಿಧಿಗಳಾದ ಸದಸ್ಯರನ್ನುಳ್ಳ ಕಾರ್ಯಸಮಿತಿ ಏರ್ಪಟ್ಟಿದೆ. ಉತ್ತರ ಕರ್ನಾಟಕ ಪ್ರಾಂತಕ್ಕೆ ೫ ಮಂದಿ, ಮೈಸೂರು ಪ್ರಾಂತಕ್ಕೆ ಒಬ್ಬರು (ಮೇಲೆ ಹೇಳಿದ ನಾಲ್ವರೂ ಕೂಡಿ ಒಟ್ಟು ೫), ದಕ್ಷಿಣ ಕರ್ನಾಟಕ ಪ್ರಾಂತಕ್ಕೆ ಒಬ್ಬರು, ಮತ್ತು ಹೈದರಾಬಾದು ಪ್ರಾಂತಕ್ಕೆ ಒಬ್ಬರು. ಹೀಗೆ ಕಾರ್ಯಸಮಿತಿಯಲ್ಲಿ ಇರತಕ್ಕ ಒಟ್ಟು ಸದಸ್ಯರ ಸಂಖ್ಯೆ ೧೨.

**(೫) ಚುನಾವಣೆಯ ಕ್ರಮ**

ಇದುವರೆಗೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರು ಸೂಚನೆಯನ್ನು (Nomination) ಆಯಾ ಪ್ರಾಂತದ ಸದಸ್ಯರು ಮಾಡಿ, ಎಲ್ಲ ಸದಸ್ಯರೂ ಆಯ್ಕೆ (Election) ಮಾಡುತ್ತಿದ್ದರು. ಈಗ ಯಾವ ಪ್ರಾಂತದ ಸದಸ್ಯರು ಬೇಕಾದರೂ ಹೆಸರು ಸೂಚನೆಯನ್ನು ಮಾಡಬಹುದು. ಇದರಿಂದ ಪರಿಷತ್ತಿನ ಸರ್ವಸದಸ್ಯರೂ ಪ್ರತಿನಿಧಿಗಳನ್ನೂ, ಕಾರ್ಯಸಮಿತಿಯ ಸದಸ್ಯರನ್ನೂ ಹೆಸರು ಸೂಚಿಸಲೂ, ಚುನಾವಣೆ ಮಾಡಲೂ ಅರ್ಹರಾಗುತ್ತಾರೆ. ಚುನಾವಣೆ ವಾರ್ಷಿಕಾಧಿವೇಶನದಲ್ಲಿ ನಡೆಯುತ್ತದೆ. ಎಂದಿನಂತೆ ಸಕಲ ಸದಸ್ಯರೇ ಉಪಾಧ್ಯಕ್ಷರನ್ನೂ ಚುನಾಯಿಸುತ್ತಾರೆ. ಕಾರ್ಯದರ್ಶಿಗಳನ್ನೂ ಕೋಶಾಧ್ಯಕ್ಷರನ್ನೂ ಉಪಾಧ್ಯಕ್ಷರೇ ನೇಮಿಸಿಕೊಳ್ಳುವಂತೆ ತೀರ್ಮಾನವಾಗಿದೆ. ಈ ರೀತಿಯಲ್ಲಿ ಕಾರ್ಯಸಮಿತಿ ಅರೆಪಾಲು "ಕ್ಯಾಬಿನೆಟ್" ತತ್ವವನ್ನು ಅಂಗೀಕರಿಸಿದಂತಾಯಿತು. ಉಪಾಧ್ಯಕ್ಷರೇ ಇತರ ಸದಸ್ಯರನ್ನೂ ನೇಮಕ ಮಾಡಿಕೊಂಡು, ಪೂರ್ತಿ ಕ್ಯಾಬಿನೆಟ್ ಮಾಡಿಕೊಳ್ಳಬಹುದೆಂಬ ಸೂಚನೆ ಬಂದು ದೀರ್ಘಚರ್ಚೆ ನಡೆಯಿತು. ಸದ್ಯಕ್ಕೆ ಉಪಾಧ್ಯಕ್ಷರಿಗೆ ಇಷ್ಟೊಂದು ಅಧಿಕಾರವೂ ಜವಾಬ್ದಾರಿಯೂ ಬೇಡವೆಂಬುದಾಗಿ ಅಭಿಪ್ರಾಯಪಟ್ಟು ಈ ಸೂಚನೆಗೆ ಉಪಾಧ್ಯಕ್ಷರೇ ಒಪ್ಪಲಿಲ್ಲ. ಸೂಚನೆಯನ್ನು ಅಭಿಮತಕ್ಕೆ ಒಡ್ಡಿದಾಗ ಅದು ಬಹುಮತದಿಂದ ಬಿದ್ದುಹೋಯಿತು.

**ಈ ವರ್ಷದ ಆಯ್ಕೆಗಳು :**

ಮೇಲೆ ಕಂಡ ಹೊಸ ತೀರ್ಮಾನಗಳನ್ನು ಅನುಸರಿಸಿಯೇ ಈ ವರ್ಷದ ಪ್ರತಿನಿಧಿಮಂಡಲಿ ಮತ್ತು ಕಾರ್ಯಸಮಿತಿಯ ಸದಸ್ಯರು, ಉಪಾಧ್ಯಕ್ಷರು. ಮತ್ತು ಇತರ ಅಧಿಕಾರಿಗಳು ಇವರ ಆಯ್ಕೆಯಾಗಿದೆ. (ಪ್ರತಿನಿಧಿ ಮಂಡಲಿಯ ಸದಸ್ಯರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು ; ಕಾರ್ಯ ಸಮಿತಿಯ ಸದಸ್ಯರ ಹೆಸರನ್ನು ಇದೇ ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಕೊಟ್ಟಿದೆ.) ಉಪಾಧ್ಯಕ್ಷರಾದ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ತಾವು ಎರಡು ವರ್ಷಕ್ಕೆ ಚುನಾಯಿತರಾಗಿದ್ದರೂ, ಹೊಸ ಅಂಗರಚನೆಯ ಕಾಲದಲ್ಲಿ ಸದಸ್ಯರು ಸ್ವತಂತ್ರರಾಗಿರತಕ್ಕದ್ದೆಂದು ತಮ್ಮ ಸ್ಥಳವನ್ನು ಬಿಟ್ಟುಕೊಟ್ಟರು. ಹೊಸ ಚುನಾವಣೆಯಲ್ಲಿ, ಶ್ರೀ॥ ಶ್ರೀಕಂಠಯ್ಯನವರೇ ಸರ್ವಾನುಮತದಿಂದ ಈ ವರ್ಷವೂ ಉಪಾಧ್ಯಕ್ಷರಾಗಿ ಆಯ್ದು ಬಂದರು; ಉಪಾಧ್ಯಕ್ಷರು ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರನ್ನು ಗೌರವ ಕಾರ್ಯದರ್ಶಿಯವರಾಗಿಯೂ, ಶ್ರೀ॥ ವಿ. ಸೀತಾರಾಮಯ್ಯನವರನ್ನು ಗೌರವ ಕೋಶಾಧ್ಯಕ್ಷರಾಗಿಯೂ ನೇಮಕ ಮಾಡಿದರು.

* * *

(೧೧೯ನೆಯ ಪುಟಕ್ಕೆ ಮುಂದುವರಿಸಿದೆ.)

# ಕನ್ನಡ ಸಾಹಿತ್ಯ ಸಮ್ಮೇಳನ
## ೨೪ನೆಯ ಅಧಿವೇಶನ, ಬಳ್ಳಾರಿ
### ಸೊಂಡೂರು ಮಹಾರಾಜರ ಪ್ರಾರಂಭ ಭಾಷಣ

ಮಾನ್ಯರಾದ ಮಹನೀಯರೇ, ಮಹಿಳೆಯರೇ—

ಇಂದಿನ ಈ ಪ್ರಸಂಗವು ನಮ್ಮ ಆಯುಷ್ಯದಲ್ಲಿಯೇ ಅಪೂರ್ವವಾಗಿದೆ. ತಮ್ಮ ಸತ್ಕಾರಸಭೆಯ ಅಧ್ಯಕ್ಷರು ಸೂಚಿಸಿದ ಪ್ರಕಾರ ಅಖಿಲ ಕರ್ನಾಟಕದ ೨೪ನೆಯ ಈ ಸಾಹಿತ್ಯ ಸಮ್ಮೇಲನದ ಉದ್ಘಾಟನವನ್ನು ನಾವು ಮಾಡಬೇಕಾಗಿದೆ. ಸಮ್ಮೇಲನದ ಸತ್ಕಾರಸಮಿತಿಯವರು ಈ ಕಾರ್ಯಕ್ಕೆ ನಮ್ಮನ್ನು ಕರೆದು ನಮ್ಮ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾರೆಂದು ನಾವು ತಿಳಿಯುತ್ತೇವೆ. ನಾವು ಹುಟ್ಟಿದ್ದು ಕನ್ನಡ ನಾಡು, ಬೆಳೆದದ್ದು ಕನ್ನಡ ನಾಡು. ಆದರೂ ಕೆಲವೊಂದು ಕಾರಣಗಳ ಮೂಲಕ ನಾವು ಕನ್ನಡ ನಾಡಿನ ಹೊರಗೆ ನಾಲ್ಕು ಅಕ್ಷರಗಳನ್ನು ಕಲಿತು ವಿದ್ಯಾಭ್ಯಾಸ ಮಾಡಬೇಕಾಯಿತು. ಆದುದರಿಂದ ನಾವು ನಮ್ಮ ಜನ್ಮಭೂಮಿಗೆ ಬಹಳ ದಿವಸ ಎರವಾಗಬೇಕಾಯಿತು. ನಮ್ಮ ಜೀವನದೊಳಗಿನ ಜ್ಞಾನಸಂಪಾದನೆಯ ಕಾಲವನ್ನೆಲ್ಲಾ ಕನ್ನಡ ನಾಡಿನ ಹೊರಗೆ ನಾವು ಕಳೆಯಬೇಕಾದುದರಿಂದ ಕನ್ನಡ ಭಾಷೆ, ವಾಙ್ಮಯ, ಇತಿಹಾಸ ಮೊದಲಾದ ಕನ್ನಡ ಸಂಸ್ಕೃತಿಯ ಘನವಿಷಯಗಳ ಪರಿಚಯವು ನಮಗೆ ಆಗುವುದಕ್ಕೆ ಅವಕಾಶ ದೊರೆಯಲಿಲ್ಲ. ಆದುದರಿಂದ ಕನ್ನಡ ನಾಡಿನ ಸರ್ವತೋಮುಖವಾದ ಉನ್ನತಿಗಾಗಿ ಯತ್ನಿಸುವ ತಮ್ಮಂತಹ ಮಹನೀಯರ ಮಹಾ ಸಮ್ಮೇಲನದ ಉದ್ಘಾಟನ ಮಾಡುವ ಜವಾಬುದಾರಿಯನ್ನು ಹೊರುವುದಕ್ಕೆ ನಮಗೆ ಒಂದು ಬಗೆಯ ಅಧೈರ್ಯವುಂಟಾಗಿದೆ. ಆದರೆ ಮನುಷ್ಯಬುದ್ಧಿಗೆ ನಿಲುಕದಾದ ಯಾವದೋ ಅದೃಷ್ಟಶಕ್ತಿಯ ದೈವಿಕಲೀಲೆಯ ಪ್ರಭಾವದಿಂದ ನಾವು ನಮ್ಮ ಮುಂದಿನ ಆಯುಷ್ಯವನ್ನೆಲ್ಲ ನಾವು ಹುಟ್ಟಿದ ಕನ್ನಡ ನಾಡಿನಲ್ಲಿಯೇ ಕಳೆಯತಕ್ಕ ಭಾಗ್ಯವು ನಮಗೆ ದೊರೆತಿದೆ. ಅದೇ ಶಕ್ತಿಯ ದೈವಿಕ ಘಟನೆಯಿಂದ ಇಡಿಯ ಕನ್ನಡ ನಾಡಿನ ತಮ್ಮಂಥ ಸುಸಂಸ್ಕೃತ ಮಹಾಜನರ ಪರಿಚಯವಾಗುವ ಈ ಸುಯೋಗವು ಬಂದಿರುವದೆಂದು ನಾವು ಭಾವಿಸುತ್ತೇವೆ. ಅಂತೇ ಈ ಕಾರ್ಯವನ್ನು ಆನಂದದಿಂದ ಕೈಗೊಂಡಿದ್ದೇವೆ.



ಶ್ರೀಮಂತ ಯಶವಂತರಾವ ಘೋರ್ಪಡೆಯವರು
ಸೊಂಡೂರು ಮಹಾರಾಜರು

ಮಹನೀಯರೇ, ಕನ್ನಡನಾಡಿನ ವಿಶೇಷ ಪರಿಚಯವು ನಮಗಿಲ್ಲವೆಂಬ ಸಂಗತಿಯು ತಮಗೆ ತಿಳಿದೇ ಇದೆ. ಆದರೂ ಸೊಂಡೂರು ಸಂಸ್ಥಾನದಲ್ಲಿ ಬಂದು ನಿಂತಾಗಿನಿಂದ, ಕನ್ನಡ ನಾಡಿನ ಭಾಷೆ ಮೊದಲಾದ ಸಂಸ್ಕೃತಿಯ ವಿಷಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ನಡಸಿದ್ದೇವೆ. ಆ ಪ್ರಯತ್ನದ ಫಲವಾಗಿ ಕನ್ನಡನಾಡಿನ ಪ್ರಾಚೀನ ಮಹತ್ವವು ನಮಗೆ ಚೆನ್ನಾಗಿಯೇ ನಿದರ್ಶನಕ್ಕೆ ಬರುತ್ತಿದೆ. ಸಾಹಿತ್ಯ, ಲಲಿತಕಲೆ, ವ್ಯಾಪಾರ, ಉದ್ಯೋಗ, ರಾಜಕಾರಣ, ಪರಾಕ್ರಮ ಮೊದಲಾದ ಎಲ್ಲಾ ವಿಷಯಗಳಲ್ಲಿ ಕರ್ನಾಟಕವು ಹಿಂದೂಸ್ಥಾನದ ಯಾವ ಭಾಗಕ್ಕೂ ಹಿಂದಿಲ್ಲವೆಂಬುದು ತಮ್ಮಂತೆಯೇ ನಮಗೂ ಅಭಿಮಾನದ ಮಾತಾಗಿದೆ. ಕೆಲವು ಪ್ರಸಂಗಗಳಲ್ಲಿ ಕರ್ನಾಟಕವೇ ಮಿಕ್ಕ ಭಾರತಕ್ಕೆ ಮಾರ್ಗದರ್ಶಕವಾಗಿರುವದೆಂದು ಕಂಡುಬರುತ್ತದೆ. ಈಗ ಎರಡು ವರ್ಷಗಳ ಹಿಂದೆ ಇಲ್ಲಿಯ ಸಮೀಪದಲ್ಲಿ ಹಂಪಿಯಲ್ಲಿ ನಡೆದ ಶ್ರೀ ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ಜನಾಂಗದ ಈ ಸಾಮ್ರಾಜ್ಯದ ಘನತೆ, ಪರಾಕ್ರಮ, ವೈಭವಗಳನ್ನು ಇಡೀ ಭಾರತವೇ ಕೊಂಡಾಡಿ, ಅದನ್ನು ಸ್ಥಾಪಿಸಿದ ಮಹಾನುಭಾವರ ಹಾಗೂ ಅವರ ತರುವಾಯ ಅದರ ಪ್ರತಾಪವನ್ನು ಬೆಳಗಿಸಿದ ಮಹಾಪುರುಷರ ದಿವ್ಯಸ್ಮರಣಾರ್ಥವಾಗಿ ಭಾರತವು ತನ್ನ ಭಕ್ತಿಪೂರ್ವಕವಾದ ಶ್ರದ್ಧಾಂಜಲಿಗಳನ್ನು ಸಮರ್ಪಿಸಿದೆ. ಭಾರತೀಯ ಇತಿಹಾಸದಲ್ಲಿ ವಿಜಯನಗರದ ಕಾಲವು ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದೆಂಬ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಅದೇ ಅವಧಿಯಲ್ಲಿ ಕನ್ನಡ ಜನಾಂಗದ ಸಾಂಸ್ಕೃತಿಕ ಸದ್ಗುಣಗಳು ಪರಮಾವಧಿಯ ಉತ್ಕರ್ಷವನ್ನು ಹೊಂದಿದವೆಂಬುದು ಯಾರಿಗೂ ತಿಳಿಯದ ಮಾತಲ್ಲ. ಒಂದು ಜನಾಂಗದಲ್ಲಿ ಸದ್ಗುಣಗಳ ಉತ್ಕರ್ಷವೆಂಬುದು ಪರಮಾವಧಿಸ್ಥಿತಿಗೆ ಮುಟ್ಟಬೇಕಾದರೆ ಅದು ಆಕಸ್ಮಿಕವಾಗಿಯಾಗಲಾರದು. ಅದಕ್ಕೆ ಎಷ್ಟೋ ಶತಮಾನಗಳ ಕ್ರಮಶಃ ಬೆಳವಣಿಗೆಯ ಪರಂಪರೆಯು ಬೇಕಾಗುತ್ತದೆ. ಇದು ಉತ್ಕ್ರಾಂತಿ ತತ್ವದ ಸಿದ್ಧಾಂತವಾಗಿದೆ. ಇದಕ್ಕನುಸರಿಸಿ ನೋಡಿದರೆ ವಿಜಯನಗರದ ಕಾಲದ ಕನ್ನಡ ಜನಾಂಗದ ಉತ್ಕರ್ಷಕ್ಕೆ ಸಾವಿರಾರು ವರ್ಷಗಳ ಪೂರ್ವಪರಂಪರೆಯು ಆಧಾರವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಕನ್ನಡನಾಡಿನ ಬಹು ಪುರಾತನ ಇತಿಹಾಸವು ಇದನ್ನೇ ಸಾರುತ್ತದೆ. ಹೀಗೆ ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿಯಿಂದ ಬೆಳೆದುಬಂದ ಕನ್ನಡನಾಡಿನ ಉಜ್ವಲ ಪರಂಪರೆಯು ಯಾರಿಗೆ ಅಭಿಮಾನಕಾರಕವಾಗಲಿಕ್ಕಿಲ್ಲ?

ಮುಂದೆ ಕಾಲ ಬದಲಾಯಿತು. ವಿಜಯನಗರದ ಸಾಮ್ರಾಜ್ಯದ ನಾಶದೊಂದಿಗೆ ಕನ್ನಡ ಜನಾಂಗವು ಅಧಃಪತನದ ಹಾದಿಗೆ ಹತ್ತಿತು. ಅಂದಿನಿಂದ ಇಂದಿನವರೆಗೆ ನಾಲ್ಕು ನೂರು ವರ್ಷಗಳಲ್ಲಿ ನಮ್ಮ ಹಿಂದೂಸ್ಥಾನವೇ ಒಂದು ಬಗೆಯಿಂದ ಅಪಕರ್ಷದ ದಾರಿಯನ್ನು ತುಳಿಯುತ್ತಾ ನಡೆದಿದೆ. ಕನ್ನಡ ಜನಾಂಗವಂತೂ ಹೇಳಹೆಸರಿಲ್ಲದ ದಾರುಣದುರವಸ್ಥೆಗೆ ಗುರಿಯಾಗಬೇಕಾಗಿದೆ. ಇಂಥ ಅನುಕಂಪನೀಯ, ಅಸಹಾಯ ಸ್ಥಿತಿಯಲ್ಲಿಯೂ ೨೪ ವರ್ಷಗಳಿಂದ ಕನ್ನಡ ನಾಡಿನ ಎಲ್ಲಾ ಬಗೆಯ ಉನ್ನತಿಗೆ ಆಧಾರವಾದ ಕನ್ನಡ ಸಾಹಿತ್ಯವನ್ನು ಬೆಳಸಲು ಕರ್ನಾಟಕ ಸಾಹಿತ್ಯ ಪರಿಷತ್ತು ಅಖಂಡವಾಗಿ ನಡಸುವ ಮಹತ್ಕಾರ್ಯವು ತಕ್ಕ ಮಟ್ಟಿಗೆ ನಮ್ಮ ಅವಗಾಹನೆಗೆ ಬಂದಿದೆ. ಮೈಸೂರಿನ ಶ್ರೀಮನ್ಮಹಾರಾಜರವರು ಹಾಗೂ ಶ್ರೀಕಂಠೀರವ ನರಸಿಂಹರಾಜ ಯುವರಾಜರವರ ಕೃಪಾಪೂರ್ಣ ಆಶ್ರಯದಲ್ಲಿ ಪರಿಷತ್ತಿನ ಕಾರ್ಯಗಳು ಶ್ರೇಯಸ್ಕರವಾಗಿ ಮುಂದುವರಿಯುತ್ತಿರುವದು ನಮಗೆ ತಿಳಿದಿದೆ. ಹಾಗೆಯೇ ಎಚ್ಚತ್ತ ಕನ್ನಡನಾಡಿನ ಮಹಾಜನರ ಸಹಾಯದಿಂದ ಕರ್ನಾಟಕದ ಪುನರುದ್ಧಾರಕ್ಕಾಗಿ ನಡೆದಿರುವ ಅನೇಕ ಬಗೆಯ ಚಟುವಟಿಕೆಗಳನ್ನು ನಾವು ಕುತೂಹಲಚಿತ್ತದಿಂದ ನಿರೀಕ್ಷಿಸುತಿದ್ದೇವೆ. ಇಂಥ ಪ್ರಸಂಗದಲ್ಲಿ ಕನ್ನಡ ನಾಡಿನ ಮಾನ್ಯಪ್ರತಿನಿಧಿಗಳಾಗಿ ಇಲ್ಲಿ ಕೂಡಿರುವ ತಮ್ಮ ಕಾರ್ಯಕುತೂಹಲವನ್ನು ಪ್ರತ್ಯಕ್ಷ ನೋಡುವ ಪ್ರಸಂಗವು ದೊರೆತದ್ದು ನಮಗೆ ಬಹಳ ಸಂತೋಷದ ಮಾತಾಗಿದೆ. ಕನ್ನಡ ಜನಾಂಗದ ಒಂದು ಭಾಗವೇ ಆಗಿರುವ ಸಾವಿರಾರು ಕನ್ನಡ ಪ್ರಜಾಬಾಂಧವರ ಸುಖದುಃಖಗಳಲ್ಲಿ ಸಮಭಾಗಿಯಾಗಿ ಅವರನ್ನು ತಕ್ಕಮಟ್ಟಿಗಾದರೂ ಉತ್ಕರ್ಷದ ದಾರಿಯಿಂದ ಮುಂದಕ್ಕೆ ಸಾಗಿಸುವ ಪ್ರಯತ್ನವನ್ನು ಕೈಲಾದಮಟ್ಟಿಗೂ ಮಾಡುವ ಜವಾಬುದಾರಿಯು ನಮ್ಮ ಮೇಲಿರುವದರಿಂದ ತಮ್ಮಂಥವರ ಈ ಪ್ರಯತ್ನಗಳು ನಮಗೆ ಮಾರ್ಗದರ್ಶಕವಾಗುವವೆಂದು ನಮಗೆ ಆತ್ಮಾನಂದವಾಗಿದೆ. ಮತ್ತು ಈ ಶುಭಪ್ರಸಂಗವು ಹಿಂದೆ ಹೇಳಿದಂತೆ ದೈವಿಕ ಅನುಗ್ರಹದಿಂದಲೇ ನಮಗೆ ದೊರೆತಿರುವದೆಂದು ನಾವು ತಿಳಿಯುತ್ತೇವೆ. ಕನ್ನಡ ವಾಙ್ಮಯದಲ್ಲಿ ಹೊಸ ಬಗೆಯ ವಿಚಾರಗಳನ್ನು ಸಮಾವೇಶಗೊಳಿಸಿ ಕನ್ನಡ ಸಾಹಿತ್ಯಕ್ಕೆ ಒಂದು ಪ್ರಕಾರದ ಹೊಸ ತೇಜಸ್ಸನ್ನು ತಂದುಕೊಡುವರಲ್ಲಿ ಶ್ರೀಮಾನ್ ದಿವಾಕರ ರಂಗರಾಯರ ಕೀರ್ತಿಯುಂಟು.

# ಕನ್ನಡ ಸಾಹಿತ್ಯ ಸಮ್ಮೇಳನ
# ೨೩ನೆಯ ಅಧಿವೇಶನ, ಬಳ್ಳಾರಿ

## ಸೊಂಡೂರು ಮಹಾರಾಜರ ಪ್ರಾರಂಭ ಭಾಷಣ

ಮಾನ್ಯರಾದ ಮಹನೀಯರೇ, ಮಹಿಳೆಯರೇ—

ಇಂದಿನ ಈ ಪ್ರಸಂಗವು ನಮ್ಮ ಆಯುಷ್ಯದಲ್ಲಿಯೇ ಅಪೂರ್ವವಾಗಿದೆ. ತಮ್ಮ ಸತ್ಕಾರಸಭೆಯ ಅಧ್ಯಕ್ಷರು ಸೂಚಿಸಿದ ಪ್ರಕಾರ ಅಖಿಲ ಕರ್ನಾಟಕದ ೨೩ನೆಯ ಈ ಸಾಹಿತ್ಯ ಸಮ್ಮೇಲನದ ಉದ್ಘಾಟನವನ್ನು ನಾವು ಮಾಡಬೇಕಾಗಿದೆ. ಸಮ್ಮೇಲನದ ಸತ್ಕಾರಸಮಿತಿಯವರು ಈ ಕಾರ್ಯಕ್ಕೆ ನಮ್ಮನ್ನು ಕರೆದು ನಮ್ಮ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾರೆಂದು ನಾವು ತಿಳಿಯುತ್ತೇವೆ. ನಾವು ಹುಟ್ಟಿದ್ದು ಕನ್ನಡ ನಾಡು, ಬೆಳೆದದ್ದು ಕನ್ನಡ ನಾಡು. ಆದರೂ ಕೆಲವೊಂದು ಕಾರಣಗಳ ಮೂಲಕ ನಾವು ಕನ್ನಡ ನಾಡಿನ ಹೊರಗೆ ನಾಲ್ಕು ಅಕ್ಷರಗಳನ್ನು ಕಲಿತು ವಿದ್ಯಾಭ್ಯಾಸ ಮಾಡಬೇಕಾಯಿತು. ಆದುದರಿಂದ ನಾವು ನಮ್ಮ ಜನ್ಮಭೂಮಿಗೆ ಬಹಳ ದಿವಸ ಎರವಾಗಬೇಕಾಯಿತು. ನಮ್ಮ ಜೀವನದೊಳಗಿನ ಜ್ಞಾನಸಂಪಾದನೆಯ ಕಾಲವನ್ನೆಲ್ಲಾ ಕನ್ನಡ ನಾಡಿನ ಹೊರಗೆ ನಾವು ಕಳೆಯಬೇಕಾದುದರಿಂದ ಕನ್ನಡ ಭಾಷೆ, ವಾಙ್ಮಯ, ಇತಿಹಾಸ ಮೊದಲಾದ ಕನ್ನಡ ಸಂಸ್ಕೃತಿಯ ಘನವಿಷಯಗಳ ಪರಿಚಯವು ನಮಗೆ ಆಗುವುದಕ್ಕೆ ಅವಕಾಶ ದೊರೆಯಲಿಲ್ಲ. ಆದುದರಿಂದ ಕನ್ನಡ ನಾಡಿನ ಸರ್ವತೋಮುಖವಾದ ಉನ್ನತಿಗಾಗಿ ಯತ್ನಿಸುವ ತಮ್ಮಂತಹ ಮಹನೀಯರ ಮಹಾ ಸಮ್ಮೇಲನದ ಉದ್ಘಾಟನ ಮಾಡುವ ಜವಾಬುದಾರಿಯನ್ನು ಹೊರುವುದಕ್ಕೆ ನಮಗೆ ಒಂದು ಬಗೆಯ ಅಧೈರ್ಯವುಂಟಾಗಿದೆ. ಆದರೆ ಮನುಷ್ಯಬುದ್ಧಿಗೆ ನಿಲುಕದಾದ ಯಾವದೋ ಅದೃಷ್ಟಶಕ್ತಿಯ ದೈವಿಕಲೀಲೆಯ ಪ್ರಭಾವದಿಂದ ನಾವು ನಮ್ಮ ಮುಂದಿನ ಆಯುಷ್ಯವನ್ನೆಲ್ಲ ನಾವು ಹುಟ್ಟಿದ ಕನ್ನಡ ನಾಡಿನಲ್ಲಿಯೇ ಕಳೆಯತಕ್ಕ ಭಾಗ್ಯವು ನಮಗೆ ದೊರೆತಿದೆ. ಆದೇ ಶಕ್ತಿಯ ದೈವಿಕ ಘಟನೆಯಿಂದ ಇಡಿಯ ಕನ್ನಡ ನಾಡಿನ ತಮ್ಮಂಥ ಸುಸಂಸ್ಕೃತ ಮಹಾಜನರ ಪರಿಚಯವಾಗುವ ಈ ಸುಯೋಗವು ಬಂದಿರುವದೆಂದು ನಾವು ಭಾವಿಸುತ್ತೇವೆ. ಅಂತೇ ಈ ಕಾರ್ಯವನ್ನು ಆನಂದದಿಂದ ಕೈಗೊಂಡಿದ್ದೇವೆ.



ಶ್ರೀಮಂತ ಯಶವಂತರಾವ ಘೋರ್ಪಡೆಯವರು
ಸೊಂಡೂರು ಮಹಾರಾಜರು

ಮಹನೀಯರೇ, ಕನ್ನಡನಾಡಿನ ವಿಶೇಷ ಪರಿಚಯವು ನಮಗಿಲ್ಲವೆಂಬ ಸಂಗತಿಯು ತಮಗೆ ತಿಳಿದೇ ಇದೆ. ಆದರೂ ಸೊಂಡೂರು ಸಂಸ್ಥಾನದಲ್ಲಿ ಬಂದು ನಿಂತಾಗಿನಿಂದ, ಕನ್ನಡ ನಾಡಿನ ಭಾಷೆ ಮೊದಲಾದ ಸಂಸ್ಕೃತಿಯ ವಿಷಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ನಡಸಿದ್ದೇವೆ. ಆ ಪ್ರಯತ್ನದ ಫಲವಾಗಿ ಕನ್ನಡನಾಡಿನ ಪ್ರಾಚೀನ ಮಹತ್ವವು ನಮಗೆ ಚೆನ್ನಾಗಿಯೇ ನಿದರ್ಶನಕ್ಕೆ ಬರುತ್ತಿದೆ. ಸಾಹಿತ್ಯ, ಲಲಿತಕಲೆ, ವ್ಯಾಪಾರ, ಉದ್ಯೋಗ, ರಾಜಕಾರಣ, ಪರಾಕ್ರಮ ಮೊದಲಾದ ಎಲ್ಲಾ ವಿಷಯಗಳಲ್ಲಿ ಕರ್ನಾಟಕವು ಹಿಂದೂಸ್ಥಾನದ ಯಾವ ಭಾಗಕ್ಕೂ ಹಿಂದಿಲ್ಲವೆಂಬುದು ತಮ್ಮಂತೆಯೇ ನಮಗೂ ಅಭಿಮಾನದ ಮಾತಾಗಿದೆ. ಕೆಲವು ಪ್ರಸಂಗಗಳಲ್ಲಿ ಕರ್ನಾಟಕವೇ ಮಿಕ್ಕ ಭಾರತಕ್ಕೆ ಮಾರ್ಗದರ್ಶಕವಾಗಿರುವದೆಂದು ಕಂಡುಬರುತ್ತದೆ. ಈಗ ಎರಡು ವರ್ಷಗಳ ಹಿಂದೆ ಇಲ್ಲಿಯ ಸಮೀಪದಲ್ಲಿ ಹಂಪಿಯಲ್ಲಿ ನಡೆದ ಶ್ರೀ ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ಜನಾಂಗದ ಈ ಸಾಮ್ರಾಜ್ಯದ ಘನತೆ, ಪರಾಕ್ರಮ, ವೈಭವಗಳನ್ನು ಇಡೀ ಭಾರತವೇ ಕೊಂಡಾಡಿ, ಅದನ್ನು ಸ್ಥಾಪಿಸಿದ ಮಹಾನುಭಾವರ ಹಾಗೂ ಅವರ ತರುವಾಯ ಅದರ ಪ್ರತಾಪವನ್ನು ಬೆಳಗಿಸಿದ ಮಹಾಪುರುಷರ ದಿವ್ಯಸ್ಮರಣಾರ್ಥವಾಗಿ ಭಾರತವು ತನ್ನ ಭಕ್ತಿಪೂರ್ವಕವಾದ ಶ್ರದ್ಧಾಂಜಲಿಗಳನ್ನು ಸಮರ್ಪಿಸಿದೆ. ಭಾರತೀಯ ಇತಿಹಾಸದಲ್ಲಿ ವಿಜಯನಗರದ ಕಾಲವು ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದೆಂಬ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಅದೇ ಅವಧಿಯಲ್ಲಿ ಕನ್ನಡ ಜನಾಂಗದ ಸಾಂಸ್ಕೃತಿಕ ಸದ್ಗುಣಗಳು ಪರಮಾವಧಿಯ ಉತ್ಕರ್ಷವನ್ನು ಹೊಂದಿದವೆಂಬುದು ಯಾರಿಗೂ ತಿಳಿಯದ ಮಾತಲ್ಲ. ಒಂದು ಜನಾಂಗದಲ್ಲಿ ಸದ್ಗುಣಗಳ ಉತ್ಕರ್ಷವೆಂಬುದು ಪರಮಾವಧಿಸ್ಥಿತಿಗೆ ಮುಟ್ಟಬೇಕಾದರೆ ಅದು ಆಕಸ್ಮಿಕವಾಗಿಯಾಗಲಾರದು. ಅದಕ್ಕೆ ಎಷ್ಟೋ ಶತಮಾನಗಳ ಕ್ರಮಶಃ ಬೆಳವಣಿಗೆಯ ಪರಂಪರೆಯು ಬೇಕಾಗುತ್ತದೆ. ಇದು ಉತ್ಕ್ರಾಂತಿ ತತ್ವದ ಸಿದ್ಧಾಂತವಾಗಿದೆ. ಇದಕ್ಕನುಸರಿಸಿ ನೋಡಿದರೆ ವಿಜಯನಗರದ ಕಾಲದ ಕನ್ನಡ ಜನಾಂಗದ ಉತ್ಕರ್ಷಕ್ಕೆ ಸಾವಿರಾರು ವರ್ಷಗಳ ಪೂರ್ವಪರಂಪರೆಯು ಆಧಾರವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಕನ್ನಡನಾಡಿನ ಬಹು ಪುರಾತನ ಇತಿಹಾಸವು ಇದನ್ನೇ ಸಾರುತ್ತದೆ. ಹೀಗೆ ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿಯಿಂದ ಬೆಳೆದುಬಂದ ಕನ್ನಡನಾಡಿನ ಉಜ್ವಲ ಪರಂಪರೆಯು ಯಾರಿಗೆ ಅಭಿಮಾನಕಾರಕವಾಗಲಿಕ್ಕಿಲ್ಲ?

ಮುಂದೆ ಕಾಲ ಬದಲಾಯಿತು. ವಿಜಯನಗರದ ಸಾಮ್ರಾಜ್ಯದ ನಾಶದೊಂದಿಗೆ ಕನ್ನಡ ಜನಾಂಗವು ಅಧಃಪತನದ ಹಾದಿಗೆ ಹತ್ತಿತು. ಅಂದಿನಿಂದ ಇಂದಿನವರೆಗೆ ನಾಲ್ಕು ನೂರು ವರ್ಷಗಳಲ್ಲಿ ನಮ್ಮ ಹಿಂದೂಸ್ಥಾನವೇ ಒಂದು ಬಗೆಯಿಂದ ಅಪಕರ್ಷದ ದಾರಿಯನ್ನು ತುಳಿಯುತ್ತಾ ನಡೆದಿದೆ. ಕನ್ನಡ ಜನಾಂಗವಂತೂ ಹೇಳಹೆಸರಿಲ್ಲದ ದಾರುಣದುರವಸ್ಥೆಗೆ ಗುರಿಯಾಗಬೇಕಾಗಿದೆ. ಇಂಥ ಅನುಕಂಪನೀಯ, ಅಸಹಾಯ ಸ್ಥಿತಿಯಲ್ಲಿಯೂ ೨೩ ವರ್ಷಗಳಿಂದ ಕನ್ನಡ ನಾಡಿನ ಎಲ್ಲಾ ಬಗೆಯ ಉನ್ನತಿಗೆ ಆಧಾರವಾದ ಕನ್ನಡ ಸಾಹಿತ್ಯವನ್ನು ಬೆಳಸಲು ಕರ್ನಾಟಕ ಸಾಹಿತ್ಯ ಪರಿಷತ್ತು ಅಖಂಡವಾಗಿ ನಡಸುವ ಮಹತ್ಕಾರ್ಯವು ತಕ್ಕಮಟ್ಟಿಗೆ ನಮ್ಮ ಅವಗಾಹನೆಗೆ ಬಂದಿದೆ. ಮೈಸೂರಿನ ಶ್ರೀಮನ್ಮಹಾರಾಜರವರು ಹಾಗೂ ಶ್ರೀಕಂಠೀರವ ನರಸಿಂಹರಾಜ ಯುವರಾಜರವರ ಕೃಪಾಪೂರ್ಣ ಆಶ್ರಯದಲ್ಲಿ ಪರಿಷತ್ತಿನ ಕಾರ್ಯಗಳು ಶ್ರೇಯಸ್ಕರವಾಗಿ ಮುಂದುವರಿಯುತ್ತಿರುವದು ನಮಗೆ ತಿಳಿದಿದೆ. ಹಾಗೆಯೇ ಎಚ್ಚತ್ತ ಕನ್ನಡನಾಡಿನ ಮಹಾಜನರ ಸಹಾಯದಿಂದ ಕರ್ನಾಟಕದ ಪುನರುದ್ಧಾರಕ್ಕಾಗಿ ನಡೆದಿರುವ ಅನೇಕ ಬಗೆಯ ಚಟುವಟಿಕೆಗಳನ್ನು ನಾವು ಕುತೂಹಲಚಿತ್ತದಿಂದ ನಿರೀಕ್ಷಿಸುತಿದ್ದೇವೆ. ಇಂಥ ಪ್ರಸಂಗದಲ್ಲಿ ಕನ್ನಡ ನಾಡಿನ ಮಾನ್ಯಪ್ರತಿನಿಧಿಗಳಾಗಿ ಇಲ್ಲಿ ಕೂಡಿರುವ ತಮ್ಮ ಕಾರ್ಯಕುತೂಹಲವನ್ನು ಪ್ರತ್ಯಕ್ಷ ನೋಡುವ ಪ್ರಸಂಗವು ದೊರೆತದ್ದು ನಮಗೆ ಬಹಳ ಸಂತೋಷದ ಮಾತಾಗಿದೆ. ಕನ್ನಡ ಜನಾಂಗದ ಒಂದು ಭಾಗವೇ ಆಗಿರುವ ಸಾವಿರಾರು ಕನ್ನಡ ಪ್ರಜಾಬಾಂಧವರ ಸುಖದುಃಖಗಳಲ್ಲಿ ಸಮಭಾಗಿಯಾಗಿ ಅವರನ್ನು ತಕ್ಕಮಟ್ಟಿಗಾದರೂ ಉತ್ಕರ್ಷದ ದಾರಿಯಿಂದ ಮುಂದಕ್ಕೆ ಸಾಗಿಸುವ ಪ್ರಯತ್ನವನ್ನು ಕೈಲಾದಮಟ್ಟಿಗೂ ಮಾಡುವ ಜವಾಬುದಾರಿಯು ನಮ್ಮ ಮೇಲಿರುವದರಿಂದ ತಮ್ಮಂಥವರ ಈ ಪ್ರಯತ್ನಗಳು ನಮಗೆ ಮಾರ್ಗದರ್ಶಕವಾಗುವವೆಂದು ನಮಗೆ ಆತ್ಮಾನಂದವಾಗಿದೆ. ಮತ್ತು ಈ ಶುಭಪ್ರಸಂಗವು ಹಿಂದೆ ಹೇಳಿದಂತೆ ದೈವಿಕ ಅನುಗ್ರಹದಿಂದಲೇ ನಮಗೆ ದೊರೆತಿರುವದೆಂದು ನಾವು ತಿಳಿಯುತ್ತೇವೆ. ಕನ್ನಡ ವಾಙ್ಮಯದಲ್ಲಿ ಹೊಸ ಬಗೆಯ ವಿಚಾರಗಳನ್ನು ಸಮಾವೇಶಗೊಳಿಸಿ ಕನ್ನಡ ಸಾಹಿತ್ಯಕ್ಕೆ ಒಂದು ಪ್ರಕಾರದ ಹೊಸ ತೇಜಸ್ಸನ್ನು ತಂದುಕೊಡುವವರಲ್ಲಿ ಶ್ರೀಮಾನ್ ದಿವಾಕರ ರಂಗರಾಯರ ಕೀರ್ತಿಯುಂಟು.

ಇಂಥವರು ಈ ಸಮ್ಮೇಲನಕ್ಕೆ ಅಧ್ಯಕ್ಷರಾಗಿ ದೊರೆತದ್ದು ಬಹಳ ಸಂತೋಷದ ಮಾತು. ಹೊಸ ಹುರುಪಿಗೆ ಅನುರೂಪರಾದ ಅಧ್ಯಕ್ಷರು ತಮಗೆ ದೊರೆತಿರುವದರಿಂದ ಅವರ ನೇತೃತ್ವದಲ್ಲಿ ತಮ್ಮ ಸಮ್ಮೇಲನದ ಕಾರ್ಯಗಳು ಶ್ರೇಯಸ್ಕರವಾಗಿ ಸಾಗುವದೆಂದು ನಾವು ನಂಬುತ್ತೇವೆ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಮುಖಾಂತರವಾಗಿ ನಡೆದಿರುವ ಇಪ್ಪತ್ತು ವರ್ಷಗಳಿಂದ ಅಖಂಡ ಕನ್ನಡ ನಾಡಿನ ಶ್ರೇಯೋಭಿವೃದ್ಧಿಗಾಗಿ ಹೊಸ ಕನ್ನಡನಾಡು ಹುಟ್ಟಿ ಬೆಳಗುವುದನ್ನು ಬೇಗನೆ ನೋಡುವ ಭಾಗ್ಯವು ನಮಗೆ ದೊರೆಯಲೆಂದು ನಾವು ಬಯಸುತ್ತೇವೆ ಪರಮೇಶ್ವರನು ನಮ್ಮ ಅಭಿಲಾಷೆಯನ್ನು ಪೂರ್ಣಮಾಡಲಿ.

ಈ ಸಮಯದಲ್ಲಿ ಒಂದು ವಿಷಯವನ್ನು ಹೇಳಬೇಕೆಂದಿದ್ದೇವೆ. ಹಿಂದೂಸ್ಥಾನದ ಎಲ್ಲ ಭಾಷೆಗಳಿಗೂ ಒಂದೇ ಲಿಪಿಯನ್ನು ಯೋಜನೆಗೊಳಿಸುವ ಪ್ರಯತ್ನ ನಡೆಯುತ್ತಾ ಇದೆ. ಅಂಥ ಮಹತ್ವದ ಪ್ರಶ್ನೆಗಳ ಸಾಧ್ಯಾಸಾಧ್ಯತೆಗಳನ್ನು ಇಂತಹ ಸಾಹಿತ್ಯ ಸಮ್ಮೇಲಗಳು ವಿಚಾರಮಾಡಬಹುದಾಗಿದೆ. ಈ ವಿಷಯವನ್ನು ನಾವು ಬಹುಕಾಲದಿಂದ ಯೋಚಿಸುತ್ತಲಿದ್ದೇವೆ. ಬಹುಕಾಲದಿಂದ ಬೆಳೆದು ಬಂದಿರುವ ಎಲ್ಲ ಲಿಪಿಗಳ ಅಭಿಮಾನದ ಕಡೆ ನಮ್ಮ ಸಹಾನುಭೂತಿ ಇದೆ. ಇಡೀ ಹಿಂದೂಸ್ಥಾನಕ್ಕೆಲ್ಲಾ ಒಂದೇ ಲಿಪಿ ಇರುವುದಾದರೆ ಅದು ಅಖಂಡ ಹಿಂದೂಸ್ಥಾನದ ಐಕಮತ್ಯಕ್ಕೆ ಬಹಳ ಸಹಾಯಕವಾಗುವುದೆಂಬುದು ನಮ್ಮ ನಂಬಿಕೆ. ಇದರಲ್ಲಿ ಒಂದು ಭಾಷೆ ಮೇಲು, ಇನ್ನೊಂದು ಭಾಷೆ ಕೀಳು ಎಂಬ ತಾರತಮ್ಯ ಭಾವನೆಗೆ ಕಾರಣವಿಲ್ಲ. ಅಲ್ಲದೆ ಈ ವಿಚಾರಕ್ಕೆ ನಮ್ಮ ಯೂರೋಪ್ ಪ್ರವಾಸದೆಲ್ಲಿನ ಅನುಭವದಿಂದ ಹೆಚ್ಚಿನ ಬೆಂಬಲ ದೊರೆತಿದೆ. ಯೂರೋಪಿನ ರಾಜಕೀಯದಲ್ಲಿ ಸ್ಥಾನವೇ ಇಲ್ಲದಿದ್ದ ಟರ್ಕಿದೇಶವು ತನ್ನ ಐಕಮತ್ಯವನ್ನು ಸಾಧಿಸಿ, ಯೂರೋಪು ರಾಷ್ಟ್ರಗಳಲ್ಲಿ ಈಗ ಗಣ್ಯವಾದ ಸ್ಥಾನವನ್ನು ಪಡೆದಿರುವ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಅಂಥ ಸ್ಥಾನವನ್ನು ಟರ್ಕಿಗೆ ದೊರಕಿಸಿಕೊಟ್ಟ ಕೆಮಾಲ್ ಪಾಷರಂಥ ದೇಶಭಕ್ತರು ರೋಮನ್ ಲಿಪಿಯನ್ನು ದೇಶದಲಿಪಿಯನ್ನಾಗಿ ಮಾಡಿ ಬಹು ಮಹತ್ವವನ್ನು ಸಾಧಿಸಿದರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂತೂ ಭರತಖಂಡದ ವಿವಿಧ ಭಾಷೆಗಳಿಗೆ ಒಂದೇ ಲಿಪಿಯ ಯೋಜನೆ ಆವಶ್ಯಕವಿದೆ. ತಾವು ಈ ವಿಚಾರವನ್ನು ಮಾಡಬಹುದಾಗಿದೆ.

ಮಹನೀಯರೆ, ಈ ದಿವಸ ನೀವು ನಮಗೆ ಇಷ್ಟು ಪ್ರೇಮದಿಂದ ಸ್ವಾಗತವನ್ನು ಕೊಟ್ಟದ್ದಕ್ಕೆ ಪುನಃ ನಮ್ಮ ಸಂತೋಷವನ್ನು ಸೂಚಿಸಿ, ಪರಮೇಶ್ವರನು ತಮ್ಮ ಈ ಸಮ್ಮೇಲನಕ್ಕೆ ಎಲ್ಲ ಶುಭವನ್ನೂ ಕರುಣಿಸಿ ಯಶಸ್ವಿಯಾಗುವಂತೆ ಮಾಡಲೆಂದು ಹಾರೈಸುತ್ತೇವೆ.

---



ಸಮ್ಮೇಳನದ ಸ್ವಾಗತಾಧ್ಯಕ್ಷರಾದ ಸರ್ವದರ್ಶನತೀರ್ಥ ಪ್ರೊ. ನಾಗೇಶ ಶಾಸ್ತ್ರಿಗಳು, ಸೊಂಡೂರಿನ ಮಹಾರಾಜರು, ಮತ್ತು ಸಮ್ಮೇಳನಾಧ್ಯಕ್ಷರಾದ ಶ್ರೀ॥ ಆರ್. ಆರ್. ದಿವಾಕರರವರು, ಎಂ.ಎ., ಎಲ್‌ಎಲ್.ಬಿ.,



ಕನ್ನಡ ಸಾಹಿತ್ಯ ಸಮ್ಮೇಳನವನ್ನು ಪ್ರಾರಂಭಮಾಡಿದ ಸೊಂಡೂರಿನ ಶ್ರೀಮಂತ ಮಹಾರಾಜರು ಆನೆಯಮೇಲೆ ಅಂಬಾರಿಯಲ್ಲಿ ಮಂಡಿಸಿರುವುದು.

---

## ಪರಿಷತ್ತಿನ ಹೊಸ ಕಾರ್ಯಸಮಿತಿ

೧೯೩೯

(೧) **ಅಧ್ಯಕ್ಷರು** :—ಮೈಸೂರಿನ ಶ್ರೀಮನ್ಮಹಾರಾಜರವರು ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರು.

(೨) **ಅಧಿಕಾರಿಗಳು** :—

(೧) ಉಪಾಧ್ಯಕ್ಷರು: ರಾಜಸೇವಾಸಕ್ತ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

(೨) ಗೌ॥ ಕಾರ್ಯದರ್ಶಿಗಳು: ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

(೩) ಗೌ॥ ಕೋಶಾಧ್ಯಕ್ಷರು: ಶ್ರೀ॥ ವಿ. ಸೀತಾರಾಮಯ್ಯನವರು ಎಂ. ಎ.

(೩) **ಅರಮನೆಯ ಪ್ರತಿನಿಧಿಗಳು**:—(ಒಬ್ಬರು) ನೇಮಕವಾಗಬೇಕಾಗಿದೆ.

(೪) **ಸದಸ್ಯರು**:—

**ಉತ್ತರ ಕರ್ನಾಟಕ**:

೧) ಶ್ರೀ॥ ಎಸ್. ಎಸ್. ಮಾಳವಾಡರು, ಎಂ.ಎ.

೨) ಶ್ರೀ॥ ದ. ರಾ. ಬೇಂದ್ರೆಯವರು, ಎಂ.ಎ.

೩) ಶ್ರೀ॥ ವಿ. ಕೃ. ಗೋಕಾಕ್ ಅವರು, ಎಂ.ಎ.

೪) ಶ್ರೀ॥ ಆರ್. ಎಸ್. ಮುಗಳಿಯವರು, ಎಂ.ಎ.

೫) ಶ್ರೀ॥ ರಂಗಪ್ಪ ಪೋತ್ದಾರ್ ಅವರು, ಬಿ.ಎ.

**ದ. ಕ. (ಮಂಗಳೂರು ಮತ್ತು ಕೊಡಗು)**

ಶ್ರೀ॥ ಶಿವರಾಮ ಕಾರಂತರವರು

**ಹೈದರಾಬಾದು ಕರ್ನಾಟಕ**:

ಶ್ರೀ॥ ಡಿ. ಕೆ. ಭೀಮಸೇನರಾಯರು, ಎಂ.ಎ.

**ಮೈಸೂರು ಕರ್ನಾಟಕ**:

ಶ್ರೀ॥ ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ.

---

ಇಂಥವರು ಈ ಸಮ್ಮೇಲನಕ್ಕೆ ಅಧ್ಯಕ್ಷರಾಗಿ ದೊರೆತದ್ದು ಬಹಳ ಸಂತೋಷದ ಮಾತು. ಹೊಸ ಹುರುಪಿಗೆ ಅನುರೂಪರಾದ ಅಧ್ಯಕ್ಷರು ತಮಗೆ ದೊರೆತಿರುವದರಿಂದ ಅವರ ನೇತೃತ್ವದಲ್ಲಿ ತಮ್ಮ ಸಮ್ಮೇಲನದ ಕಾರ್ಯಗಳು ಶ್ರೇಯಸ್ಕರವಾಗಿ ಸಾಗುವದೆಂದು ನಾವು ನಂಬುತ್ತೇವೆ. ಕರ್ನಾಟಕ ಸಾಹಿತ್ಯ ಪರಿಷತ್ತಿನ ಮುಖಾಂತರವಾಗಿ ನಡೆದಿರುವ ಯಾವತ್ತೂ ಕಾರ್ಯಗಳಿಂದ ಅಖಂಡ ಕನ್ನಡ ನಾಡಿನ ಶ್ರೇಯೋಭಿವೃದ್ಧಿಗಾಗಿ ಹೊಸ ಕನ್ನಡನಾಡು ಹುಟ್ಟಿ ಬೆಳಗುವುದನ್ನು ಬೇಗನೆ ನೋಡುವ ಭಾಗ್ಯವು ನಮಗೆ ದೊರೆಯಲೆಂದು ನಾವು ಬಯಸುತ್ತೇವೆ ಪರಮೇಶ್ವರನು ನಮ್ಮ ಅಭಿಲಾಷೆಯನ್ನು ಪೂರ್ಣಮಾಡಲಿ.

ಈ ಸಮಯದಲ್ಲಿ ಒಂದು ವಿಷಯವನ್ನು ಹೇಳಬೇಕೆಂದಿದ್ದೇವೆ. ಹಿಂದೂಸ್ಥಾನದ ಎಲ್ಲ ಭಾಷೆಗಳಿಗೂ ಒಂದೇ ಲಿಪಿಯನ್ನು ಯೋಜನೆಗೊಳಿಸುವ ಪ್ರಯತ್ನ ನಡೆಯುತ್ತ ಇದೆ. ಅಂಥ ಮಹತ್ವದ ಪ್ರಶ್ನೆಗಳ ಸಾಧ್ಯಾಸಾಧ್ಯತೆಗಳನ್ನು ಇಂತಹ ಸಾಹಿತ್ಯ ಸಮ್ಮೇಲನಗಳು ವಿಚಾರಮಾಡಬಹುದಾಗಿದೆ. ಈ ವಿಷಯವನ್ನು ನಾವು ಬಹುಕಾಲದಿಂದ ಯೋಚಿಸುತ್ತಲಿದ್ದೇವೆ. ಬಹುಕಾಲದಿಂದ ಬೇರೆ ಬಂದಿರುವ ಎಲ್ಲ ಲಿಪಿಗಳ ಅಭಿಮಾನದ ಕಡೆ ನಮ್ಮ ಸಹಾನುಭೂತಿ ಇದೆ. ಇಡೀ ಹಿಂದೂಸ್ಥಾನಕ್ಕೆಲ್ಲಾ ಒಂದೇ ಲಿಪಿ ಇರುವುದಾದರೆ ಅದು ಅಖಂಡ ಹಿಂದೂಸ್ಥಾನದ ಐಕಮತ್ಯಕ್ಕೆ ಬಹಳ ಸಹಾಯಕವಾಗುವುದೆಂಬುದು ನಮ್ಮ ನಂಬಿಕೆ. ಇದರಲ್ಲಿ ಒಂದು ಭಾಷೆ ಮೇಲು, ಇನ್ನೊಂದು ಭಾಷೆ ಕೀಳು ಎಂಬ ತಾರತಮ್ಯ ಭಾವನೆಗೆ ಕಾರಣವಿಲ್ಲ. ಅಲ್ಲದೆ ಈ ವಿಚಾರಕ್ಕೆ ನಮ್ಮ ಯೂರೋಪ್ ಪ್ರವಾಸದಲ್ಲಿನ ಅನುಭವದಿಂದ ಹೆಚ್ಚಿನ ಬೆಂಬಲ ದೊರೆತಿದೆ. ಯೂರೋಪಿನ ರಾಜಕೀಯದಲ್ಲಿ ಸ್ಥಾನವೇ ಇಲ್ಲದಿದ್ದ ಟರ್ಕಿದೇಶವು ತನ್ನ ಐಕಮತ್ಯವನ್ನು ಸಾಧಿಸಿ, ಯೂರೋಪು ರಾಷ್ಟ್ರಗಳಲ್ಲಿ ಈಗ ಗಣ್ಯವಾದ ಸ್ಥಾನವನ್ನು ಪಡೆದಿರುವ ಉದಾಹರಣೆಯನ್ನು ತೆಗೆದುಕೊಳ್ಳಬಹುದು. ಅಂಥ ಸ್ಥಾನವನ್ನು ಟರ್ಕಿಗೆ ದೊರಕಿಸಿಕೊಟ್ಟ ಕೆಮಾಲ್ ಪಾಷರಂಥ ದೇಶಭಕ್ತರು ರೋಮ್ ಲಿಪಿಯನ್ನು ದೇಶದಲಿಪಿಯನ್ನಾಗಿ ಮಾಡಿ ಬಹು ಮಹತ್ವವನ್ನು ಸಾಧಿಸಿದರೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಅಂತೂ ಭರತಖಂಡದ ವಿವಿಧ ಭಾಷೆಗಳಿಗೆ ಒಂದೇ ಲಿಪಿಯ ಯೋಜನೆ ಆವಶ್ಯಕವಿದೆ. ತಾವು ಈ ವಿಚಾರವನ್ನು ಮಾಡಬಹುದಾಗಿದೆ.

ಮಹನೀಯರೆ, ಈ ದಿವಸ ನೀವು ನಮಗೆ ಇಷ್ಟು ಪ್ರೇಮದಿಂದ ಸ್ವಾಗತವನ್ನು ಕೊಟ್ಟದ್ದಕ್ಕೆ ಪುನಃ ನಮ್ಮ ಸಂತೋಷವನ್ನು ಸೂಚಿಸಿ, ಪರಮೇಶ್ವರನು ತಮ್ಮ ಈ ಸಮ್ಮೇಲನಕ್ಕೆ ಎಲ್ಲ ಶುಭವನ್ನೂ ಕರುಣಿಸಿ ಯಶಸ್ವಿಯಾಗುವಂತೆ ಮಾಡಲೆಂದು ಹಾರೈಸುತ್ತೇವೆ.

---



ಕನ್ನಡ ಸಾಹಿತ್ಯ ಸಮ್ಮೇಳನವನ್ನು ಪ್ರಾರಂಭಮಾಡಿದ ಸೊಂಡೂರಿನ ಶ್ರೀಮಂತ ಮಹಾರಾಜರು ಆನೆಯಮೇಲೆ ಅಂಬಾರಿಯಲ್ಲಿ ಮಂಡಿಸಿರುವುದು.



ಸಮ್ಮೇಳನದ ಸ್ವಾಗತಾಧ್ಯಕ್ಷರಾದ ಸರ್ವದರ್ಶನತೀರ್ಥ ಪೈ. ನಾಗೇಶ ಶಾಸ್ತ್ರಿಗಳು, ಸೊಂಡೂರಿನ ಮಹಾರಾಜರು, ಮತ್ತು ಸಮ್ಮೇಳನಾಧ್ಯಕ್ಷರಾದ ಶ್ರೀ|| ಆರ್. ಆರ್. ದಿವಾಕರರವರು, ಎಂ.ಎ., ಎಲ್‌ಎಲ್.ಬಿ.,

---

## ಪರಿಷತ್ತಿನ ಹೊಸ ಕಾರ್ಯಸಮಿತಿ

೧೯೩೯

(೧) **ಅಧ್ಯಕ್ಷರು** :—ಮೈಸೂರಿನ ಶ್ರೀಮದ್ಯುವರಾಜರವರು ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್, ಜಿ.ಸಿ.ಐ.ಇ. ಮಹಾಸ್ವಾಮಿಯವರು.

(೨) **ಅಧಿಕಾರಿಗಳು** :—

(೧) ಉಪಾಧ್ಯಕ್ಷರು: ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು, ಎಂ.ಎ., ಬಿ.ಎಲ್.

(೨) ಗೌ|| ಕಾರ್ಯದರ್ಶಿಗಳು : ಶ್ರೀ|| ಸಿ. ಕೆ. ವೆಂಕಟರಾಮಯ್ಯನವರು, ಎಂ.ಎ., ಎಲ್‌ಎಲ್.ಬಿ.

(೩) ಗೌ|| ಕೋಶಾಧ್ಯಕ್ಷರು : ಶ್ರೀ|| ವಿ. ಸೀತಾರಾಮಯ್ಯನವರು ಎಂ. ಎ.

(೩) **ಅರಮನೆಯ ಪ್ರತಿನಿಧಿಗಳು**:—(ಒಬ್ಬರು) ನೇಮಕವಾಗಬೇಕಾಗಿದೆ.

(೪) **ಸದಸ್ಯರು** :—

**ಉತ್ತರ ಕರ್ನಾಟಕ** :

೧) ಶ್ರೀ|| ಎಸ್. ಎಸ್. ಮಾಳವಾಡರು, ಎಂ.ಎ.

೨) ಶ್ರೀ|| ದ. ರಾ. ಬೇಂದ್ರೆಯವರು, ಎಂ.ಎ.

೩) ಶ್ರೀ|| ವಿ. ಕೃ. ಗೋಕಾಕ್ ಅವರು, ಎಂ.ಎ.

೪) ಶ್ರೀ|| ಆರ್. ಎಸ್. ಮುಗಳಿಯವರು, ಎಂ.ಎ.

೫) ಶ್ರೀ|| ರಂಗಪ್ಪ ಪೋತ್ದಾರ್ ಅವರು, ಬಿ.ಎ.

**ದ. ಕ. (ಮಂಗಳೂರು ಮತ್ತು ಕೊಡಗು)**

ಶ್ರೀ|| ಶಿವರಾಮ ಕಾರಂತರವರು

**ಹೈದರಾಬಾದು ಕರ್ನಾಟಕ** :

ಶ್ರೀ|| ಡಿ. ಕೆ. ಭೀಮಸೇನರಾಯರು, ಎಂ.ಎ.

**ಮೈಸೂರು ಕರ್ನಾಟಕ** :

ಶ್ರೀ|| ಟಿ. ಎಸ್. ವೆಂಕಣ್ಣಯ್ಯನವರು, ಎಂ.ಎ.



---

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

## ಅಧ್ಯಕ್ಷರ ಭಾಷಣ

(೧೧೪ನೆಯ ಪುಟದಿಂದ ಮುಂದುವರಿದುದು.)

ಕನ್ನಡ ನುಡಿಯ ಇತಿಹಾಸವಾದರೂ ಪುರಾತನವಿರುವುದು. ಕ್ರಿಸ್ತ ಶಕಾರಂಭದಮೊದಲು ನಾಲ್ಕಾರುಶತಕಗಳ ಪೂರ್ವದಲ್ಲಿಯೆ ಕನ್ನಡದಲ್ಲಿ ಗ್ರಂಥಗಳಾಗಿರಲಿಕ್ಕೆಬೇಕು. ಐದನೆಯ ಏಳನೆಯ ಶತಾಬ್ದಿಯ ಶಾಸನ ಗಳನ್ನು ನೋಡಿದರೆ, ಅದರ ಭಾಷಾ ಪ್ರೌಢಿಮೆಯನ್ನು ನೋಡಿದರೆ ಒಳ್ಳೇ ಬೆಳೆದು ನಿಂತ ಭಾಷೆ ಎಂದು ತೋರುತ್ತಿದೆ. ಒಂಬತ್ತನೆಯ ಶತ ಮಾನದ ಆದಿಯಲ್ಲಿ ''ಕವಿರಾಜಮಾರ್ಗ''ವೆಂಬ ಲಕ್ಷಣಗ್ರಂಥವನ್ನು ನೃಪತುಂಗನು ಬರೆದುದನ್ನು ನೋಡಿದರೆ, ಓದದೆ ಅಲ್ಲಿಯ ಜನರು 'ಕಾವ್ಯಪ್ರಯೋಗ ಪರಿಣತ ಮತಿಗಳ್' ಎಂದದ್ದನ್ನು ಲಕ್ಷಿಸಿದರೆ ಹಾಗೂ ಅವನು ಉದಾಹರಿಸಿದ ಕಾವ್ಯಗಳನ್ನು ಪರೀಕ್ಷಿಸಿದರೆ, ಕನ್ನಡವು ಒಳ್ಳೇ ಪ್ರಾಯಕ್ಕೆ ಬಂದ ಕಾಲವದು ಎಂದು ತೋರುವದು. ಸ್ತ್ರೀಯು ಪ್ರಾಯಕ್ಕೆ ಬಂದ ಬಳಿಕವೇ ವರ್ಣನಾಯೋಗ್ಯವೆಂದು ಕವಿಗಳು ತಿಳಿ ಯುವಂತೆ ಭಾಷೆ ಪ್ರೌಢಾವಸ್ಥೆಗೆ ಬಂದ ಬಳಿಕವೇ ಲಕ್ಷಣಕಾರರು ಲಕ್ಷಣ ಗ್ರಂಥಗಳನ್ನು ಬರೆಯಲನುಕೂಲವಾಗುವದು.

ಕನ್ನಡ ಲಿಪಿ ಬಹಳೇ ಸುಂದರವಾದುದು ಎಂದು ಹಲವು ಪಾಶ್ಚಾತ್ಯಪಂಡಿತರು ಹೇಳಿರುವರೆಂದು ಕೇಳಿದ್ದೇನೆ. ಅದು ನಿಜವೆಂದು ನನಗೆ ತೋರುವದು. ಈ ಲಿಪಿ ಕಲಾತ್ಮಕವಿರುವದು. ಅದರಲ್ಲಿಯ ವರ್ತುಲಾಕಾರಗಳು ಒಳ್ಳೆ ಲಿಪಿವಿಕಾಸವನ್ನು ತೋರುವವು. ಚಿತ್ರ ಬರೆಯುವಾಗ ಕೂಡ ಮನುಷ್ಯನು ಮೊದಮೊದಲು ಗೆರೆಯಿಂದ ಪ್ರಾರಂಭಿಸಿ ಮುಂದೆ ವರ್ತುಲಕ್ಕೆ ಹೋಗುವನು. ಅದೇ ರೀತಿ ಲಿಪಿ ವಿಕಾಸದ ಇತಿಹಾಸದಲ್ಲಿಯೂ ವರ್ತುಲವು ಕೊನೆಗೆಬಂದುದು ಎಂಬಲ್ಲಿ ಸಂಶಯವಿಲ್ಲ. ಕನ್ನಡ ನುಡಿಯಮೇಲೆ ಈವರೆಗೆ ಅನೇಕ ಆಘಾತಗಳು ಆಗುತ್ತಬಂದಿವೆ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ. ಆಮೂಲಕ ಕನ್ನಡವು ಎಷ್ಟೋ ಆಕುಂಚನ ಹೊಂದಿರಲಿಕ್ಕೆ ಸಾಕು. ಆದರೂ ಕನ್ನಡವು ತನ್ನ ಸ್ಥಾನದಿಂದ ಕದಲಲಿಲ್ಲವೆಂಬುದು ಅಭಿನಂದನೀಯವೇ ಸೈ. ಈ ಮಾತು ಅದರ ಭವಿಷ್ಯದ ಬಗ್ಗೆ ಒಳ್ಳೆ ಬಲವಾದ ಆಶೆಯ ನ್ನುಂಟುಮಾಡುತ್ತಿದೆ.

ಇನ್ನು ಕನ್ನಡಸಾಹಿತ್ಯಸ್ರೋತವಾದರೂ ಬಹಳ ಪುರಾತನ ಕಾಲದಿಂದ ಹರಿಯುತ್ತ ಬಂದಿದೆ. ಪುರಾತನ ಕನ್ನಡ ಕವಿಗಳ ಸಂಖ್ಯೆ, ಅವರು ಬರೆದ ಗ್ರಂಥಗಳ ಪ್ರಮಾಣ, ಅವರು ಬರೆದ ವಿಷಯಗಳ ವಿವಿಧತೆ, ಅವರ ಲೇಖನದ ಪ್ರೌಢಿಮೆ ಇವುಗಳನ್ನೆಲ್ಲ ನೋಡಿದರೆ ಅದು ಹಿಂದೂಸ್ಥಾನದಲ್ಲಿಯ ಯಾವ ಭಾಷೆಗಿಂತಲೂ ಹಿಂದೆಬೀಳದು. ಇಷ್ಟೇ ಅಲ್ಲ. ಮರಾಠಿ, ಬಂಗಾಲಿ, ತೆಲುಗು ಮುಂತಾದ ಈಚೆಗೆ ಮುಂದೆ ಬಂದ ಸಾಹಿತ್ಯಗಳನ್ನು ಅದು ಗತವೈಭವದ ವಿಷಯದಲ್ಲಿ ಹಿಂದೆ ಹಾಕುವದು ಎಂಬಲ್ಲಿ ಸಂಶಯವಿಲ್ಲ. ಆಧುನಿಕ ಕಾಲದಲ್ಲಿ ಮಾತ್ರ ಈ ಮೇಲಿನ ಸಾಹಿತ್ಯಗಳು ನಮ್ಮನ್ನು ಬಹಳ ಹಿಂದೆ ಹಾಕಿವೆ ಎಂಬುದನ್ನು ಒಪ್ಪ ಬೇಕಾಗಿದೆ. ಈಚೆಗೆ ಕನ್ನಡವು ಸಣ್ಣಕಥೆ, ಹೊಸಕಾವ್ಯ ಮುಂತಾದ ಹಲವು ಮಾತುಗಳಲ್ಲಿ ಚೆನ್ನಾಗಿ ಮುಂದೆಬರುತ್ತಿರುವದು ಸಮಾಧಾನ ಕರವಾದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯವು ಮೊದಮೊದಲು ಸಂಸ್ಕೃತದೊಡನೆ ತಕ್ಕ ಮಟ್ಟಿಗೆ ತಿಕ್ಕಾಡಿ, ಸ್ಪರ್ಧೆ ಮಾಡಿ ಮುಂದೆ ಬರಬೇಕಾಯಿತೆನ್ನುವದು ಹಲವು ಮಾತುಗಳಿಂದ ವ್ಯಕ್ತವಾಗುವದು. ಆಂಡಯ್ಯನ ಪ್ರಯತ್ನವೂ ಅಂಥ ಮಾತುಗಳಲ್ಲಿ ಒಂದು. ಅದೇ ರೀತಿ ಕನ್ನಡದಲ್ಲಿ ಹೇಳಿದರೆ ಸಾಲದೆ? ಸಂಸ್ಕೃತದಲಿನ್ನೇನು? ಎಂದು ಮುಂತಾಗಿ ಹಲವು ಕವಿಗಳು ಬರೆದಿರುವದನ್ನು ನೋಡಿದರೆ ಜನರ ಲಕ್ಷ್ಯವು ಸಂಸ್ಕೃತದ ಕಡೆಗೆ ಹೆಚ್ಚು ಇತ್ತು; ಕನ್ನಡದಲ್ಲಿ ಬರೆಯುವದು ಅಥವಾ ಓದುವದು ಗೌಣ ವೆನಿಸುತ್ತಿತ್ತು ಎಂಬುದು ಒಡೆದು ತೋರುವದು. ಆದರೆ ಕನ್ನಡವು ಆವಿಷಯದಲ್ಲಿ ಗೆದಿಯಿತು ಎಂದು ಹೇಳಬಹುದು. ಧರ್ಮ ಮುಂತಾದ ಪ್ರೌಢ ವಿಷಯಗಳನ್ನು ಸಂಸ್ಕೃತದಲ್ಲಿಯೇ ಬರೆಯಬೇಕು ಎಂಬ ಕಲ್ಪನೆಯನ್ನು ಕನ್ನಡದಲ್ಲಿ ಮೊದಲು ಕಿತ್ತುಹಾಕಿದವರು ಜೈನಕವಿ ಗಳು ಎಂಬುದು ಸ್ಪಷ್ಟವಿರುವುದು. ಮುಂದೆ ವಚನಕಾರರು, ಹಾಗೂ ದಾಸರು ಈ ಗ್ರಹಗಳನ್ನು ಪೂರಾ ನಿರ್ನಾಮ ಮಾಡಿದರೆಂದು ಹೇಳಲು ಅಡ್ಡಿಯಿಲ್ಲ.

ರೂಢವಿದ್ದ ಸಂಸ್ಕೃತ ಸಾಹಿತ್ಯ ರೂಪಗಳನ್ನು ಕೂಡ ಬಿಟ್ಟು ಅವರು ಹೊಸ ರೂಪಗಳನ್ನು ಕಲ್ಪಿಸಿ ಅತ್ಯಂತ ಕಠಿಣವೆನಿಸಿದ ತತ್ವ ವಿಚಾರಗಳನ್ನು ಕೂಡ ಜನಸಾಮಾನ್ಯರೂ ತಿಳಿಯುವಂತೆಮಾಡಿ ಕನ್ನಡ ನಾಡಿನ ಮೇಲೆ ಮಹದುಪಕಾರ ಮಾಡಿಬಿಟ್ಟರು.

ಮುಸಲ್ಮಾನರು ಇಲ್ಲಿ ಹಲವು ಕಾಲ ಆಳಿದರೂ ಪರ್ಶಿಯನ್ ಅಥವಾ ಅರಬೀಭಾಷೆಗಳ ಪರಿಣಾಮವು ಕನ್ನಡದಮೇಲೆ ಏನೂ ಆಗಿಲ್ಲ ವೆನ್ನಬಹುದು. ಏನೋ ನಾಲ್ಕು ಶಬ್ದಗಳು ಮಾತ್ರ ಸೇರಿಕೊಂಡಿರ ಬಹುದು.

ಹಿಂದುಸ್ಥಾನದಲ್ಲಿ ಇಂಗ್ಲೀಷರ ಪ್ರಭುತ್ವ ಪ್ರಾರಂಭವಾದೊಡನೆ ಮೊದಮೊದಲು ಪ್ರಾಂತಿಕ ಭಾಷೆಗಳೆಲ್ಲ ಮೂಲೆಗುಂಪಾದವು. ಪ್ರಗತಿ ಪರವಾದ ಬುದ್ಧಿವಂತರೂ ನೌಕರಿ, ಅಧಿಕಾರ ಇವುಗಳ ಆಶೆಯಿಂದ ಇಂಗ್ಲೀಷಿನ ಕಡೆಗೇ ಧಾವಿಸಿದರು. ಎಲ್ಲ ಬಗೆಯ ಉಚ್ಚ ಶಿಕ್ಷಣವೂ ಇಂಗ್ಲೀಷಿನಲ್ಲಿ ನಡೆಯಿತು. ಪ್ರಾಂತಿಕ ಭಾಷೆಗಳಿಗೆ ಎಲ್ಲಿಯೂ ಯಾವ ಮನ್ನಣೆಯೂ ಇಲ್ಲದಾಯಿತು. ಹೀಗೆ ಒಂದು ಶತಮಾನದ ಅವಧಿ ಹೋದನಂತರ ಸ್ವದೇಶ, ಸ್ವಭಾಷೆಗಳ ಅಭಿಮಾನವು ತಲೆದೋರಿ ಪ್ರಾಂತಿಕ ಭಾಷೆಗಳಿಗೆ ಮಹತ್ವವು ಬರತೊಡಗಿತು. ಅಲ್ಲಲ್ಲಿ ಅಚ್ಚು ಕೂಟಗಳು ಸ್ಥಾಪನವಾಗಿ ಪ್ರಾಂತಿಕ ಭಾಷೆಗಳ ಮೊಳೆಗಳು ತಯಾ ರಾಗಿ, ಪ್ರಾಂತಿಕಭಾಷೆಗಳಲ್ಲಿ ಪುಸ್ತಕಗಳು ಹೊರಡಲಾರಂಭಿಸಿದವು. ಹೀಗೆ ಎಚ್ಚತ್ತ ಭಾಷೆಗಳಲ್ಲಿ ಕನ್ನಡವು ಕೊನೆಯದು ಎಂದು ಹೇಳ ಬಹುದು! ಇರಲಿ. ಎಚ್ಚತ್ತ ಕನ್ನಡ ಸಾಹಿತ್ಯವು ತಪ್ಪುಹೆಜ್ಜೆ ಇಡಲಾ ರಂಭಿಸಿ ಈಗ ಎಷ್ಟೋ ಪ್ರಗತಿ ಹೊಂದಿದೆ. ಆಧುನಿಕ ಕನ್ನಡ ಕಥೆ, ಕಾದಂಬರಿ, ಕಾವ್ಯ, ವೃತ್ತಪತ್ರ, ಮಾಸಿಕಗಳು ಮುಂತಾದುವುಗಳನ್ನು ನೋಡಿದರೆ, ಸ್ವಲ್ಪಕಾಲದಲ್ಲಿಯೇ ನಮ್ಮ ನೆರೆಹೊರೆಯವರು ನಡೆ ದಷ್ಟು ದಾರಿಯನ್ನು ನಾವೂ ನಡೆಯಬಹುದು ಎಂಬ ಆಶೆ ಹುಟ್ಟಿದೆ.

### ನಮ್ಮ ವಿಷಮಸ್ಥಿತಿ

ಹೀಗೆ ಭವಿಷ್ಯಕಾಲದ ಬಗ್ಗೆ ಆಶೆಯನ್ನು ವ್ಯಕ್ತಮಾಡುತ್ತಿರು ವಾಗಲೇ ಈಗ ಸದ್ಯಕ್ಕಿದ್ದ ನಮ್ಮ ನಾಡು, ನುಡಿ, ಸಾಹಿತ್ಯಗಳ ವಿಷಮ ಪರಿಸ್ಥಿತಿಯನ್ನು ನನ್ನ ಅನುಭವಕ್ಕೆ ಬಂದಂತೆ ಸ್ವಲ್ಪ ಬಣ್ಣಿಸುತ್ತೇನೆ. ಅಂದರೆ ಮುಂದಿನ ಮಾರ್ಗವನ್ನು ಹೇಗೆ ಹುಡುಕಬೇಕು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಗುವದು. ನಾನು ಒಳ್ಳೇ ಆಶಾ ವಾದಿ ಆದುದರಿಂದ ನಮ್ಮ ಸ್ಥಿತಿ ಬಹಳ ಕೆಡುಕಿದೆ ಎಂದು ತಿಳಿದು ಕೊಂಡು ಹತಾಶನಾಗಲು ನಾನು ಸಿದ್ಧನಿಲ್ಲ. ಅದೇ ರೀತಿ 'ನಿಮಗೇ ನಾಗಿದೆ, ಇದಕ್ಕೂ ಒಳ್ಳೇಸ್ಥಿತಿ ಹೇಗಿರಬೇಕು?" ಎಂದು ಕೇಳುವವರು ಹಲವು ಮಿತ್ರರಿದ್ದಾರೆ. ಆದುದರಿಂದ ನಮ್ಮ ಸ್ಥಿತಿ ಚೆನ್ನಾಗಿದೆ ಎಂದು ಭಾವಿಸಿಯೇ ಹೊರಡುತ್ತೇನೆ. ಹೀಗೆ ಭಾವಿಸಿದರೂ ಹಲವು ಅಡಚಣೆ ಗಳು ಥಟ್ಟನೆಂದು ಮುಂದೆಸಿಲ್ಲುತ್ತವೆ. ಮುಂದೆ ಸಾಗುವಾಗ ಅವು ಅಡ್ಡ ಕಟ್ಟುತ್ತವೆ. ಅವುಗಳ ಕಡೆಗೆ ಕಣ್ಮುಚ್ಚಿ ನಡೆಯಬಾರದು. ಹಾಗೆ ಅವುಗಳನ್ನು ದುರ್ಲಕ್ಷಿಸಿ ನಡೆಯುವದು ಆಶಾವಾದದ ಲಕ್ಷಣವಲ್ಲ. ಅದು ಮರುಳುತನವು. ಯಥಾರ್ಥಜ್ಞಾನ ಮಾಡಿಕೊಂಡು ಎಂಥ ಅಡಚಣೆಗಳು ಬಂದರೂ ನಿರಾಸೆಯಮುಸುಕು ನಮ್ಮನ್ನು ಆವರಿಸಿದರೂ ಅದರೊಳಗಿಂದ ಪಾರಾಗುವೆವೆಂಬ ಭರವಸೆಯಿಟ್ಟು ಕರ್ತವ್ಯಕರ್ಮ ವನ್ನು ಮಾಡುತ್ತಿರುವದೇ ನಿಜವಾದ ಆಶಾವಾದಿತ್ವವು. ಆ ರೀತಿ ನೋಡಿದರೆ ಈಗ ನಮ್ಮ ವಿಷಮಪರಿಸ್ಥಿತಿಯ ಯಥಾರ್ಥಕಲ್ಪನೆಯು ನಮಗೆ ಬೇಕೇ ಬೇಕು.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

## ಅಧ್ಯಕ್ಷರ ಭಾಷಣ

(೧೦೪ನೆಯ ಪುಟದಿಂದ ಮುಂದುವರಿದುದು.)

ಕನ್ನಡ ನುಡಿಯ ಇತಿಹಾಸವಾದರೂ ಪುರಾತನವಿರುವುದು. ಕ್ರಿಸ್ತ ಶಕಾರಂಭದವೊದಲು ನಾಲ್ಕಾರುಶತಕಗಳ ಪೂರ್ವದಲ್ಲಿಯೆ ಕನ್ನಡದಲ್ಲಿ ಗ್ರಂಥಗಳಾಗಿರಲಿಕ್ಕೆಬೇಕು. ಐದನೆಯ ಏಳನೆಯ ಶತಾಬ್ದಿಯ ಶಾಸನಗಳನ್ನು ನೋಡಿದರೆ, ಅದರ ಭಾಷಾ ಪ್ರೌಢಿಮೆಯನ್ನು ನೋಡಿದರೆ ಒಳ್ಳೇ ಬೆಳೆದು ನಿಂತ ಭಾಷೆ ಎಂದು ತೋರುತ್ತಿದೆ. ಒಂಬತ್ತನೆಯ ಶತಮಾನದ ಆದಿಯಲ್ಲಿ ''ಕವಿರಾಜಮಾರ್ಗ"ವೆಂಬ ಲಕ್ಷಣಗ್ರಂಥವನ್ನು ನೃಪತುಂಗನು ಬರೆದುದನ್ನು ನೋಡಿದರೆ, ಓದದೆ ಅಲ್ಲಿಯ ಜನರು 'ಕಾವ್ಯಪ್ರಯೋಗ ಪರಿಣತ ಮತಿಗಳ್' ಎಂದದ್ದನ್ನು ಲಕ್ಷಿಸಿದರೆ ಹಾಗೂ ಅವನು ಉದಾಹರಿಸಿದ ಕಾವ್ಯಗಳನ್ನು ಪರೀಕ್ಷಿಸಿದರೆ, ಕನ್ನಡವು ಒಳ್ಳೇ ಪ್ರಾಯಕ್ಕೆ ಬಂದ ಕಾಲವದು ಎಂದು ತೋರುವದು. ಸ್ತ್ರೀಯು ಪ್ರಾಯಕ್ಕೆ ಬಂದ ಬಳಿಕವೇ ವರ್ಣನಾಯೋಗ್ಯವೆಂದು ಕವಿಗಳು ತಿಳಿಯುವಂತೆ ಭಾಷೆ ಪ್ರೌಢಾವಸ್ಥೆಗೆ ಬಂದ ಬಳಿಕವೇ ಲಕ್ಷಣಕಾರರು ಲಕ್ಷಣ ಗ್ರಂಥಗಳನ್ನು ಬರೆಯಲನುಕೂಲವಾಗುವದು.

ಕನ್ನಡ ಲಿಪಿ ಬಹಳೇ ಸುಂದರವಾದುದು ಎಂದು ಹಲವು ಪಾಶ್ಚಾತ್ಯಪಂಡಿತರು ಹೇಳಿರುವರೆಂದು ಕೇಳಿದ್ದೇನೆ. ಅದು ನಿಜವೆಂದು ನನಗೆ ತೋರುವದು. ಈ ಲಿಪಿ ಕಲಾತ್ಮಕವಿರುವದು. ಅದರಲ್ಲಿಯ ವರ್ತುಲಾಕಾರಗಳು ಒಳ್ಳೆ ಲಿಪಿವಿಕಾಸವನ್ನು ತೋರುವವು. ಚಿತ್ರ ಬರೆಯುವಾಗ ಕೂಡ ಮನುಷ್ಯನು ಮೊದಮೊದಲು ಗೆರೆಯಿಂದ ಪ್ರಾರಂಭಿಸಿ ಮುಂದೆ ವರ್ತುಲಕ್ಕೆ ಹೋಗುವನು. ಅದೇ ರೀತಿ ಲಿಪಿ ವಿಕಾಸದ ಇತಿಹಾಸದಲ್ಲಿಯೂ ವರ್ತುಲವು ಕೊನೆಗೆಬಂದುದು ಎಂಬಲ್ಲಿ ಸಂಶಯವಿಲ್ಲ. ಕನ್ನಡ ನುಡಿಯಮೇಲೆ ಈವರೆಗೆ ಅನೇಕ ಆಘಾತಗಳು ಆಗುತ್ತಬಂದಿವೆ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ. ಆಮೂಲಕ ಕನ್ನಡವು ಎಷ್ಟೋ ಆಕುಂಚನ ಹೊಂದಿರಲಿಕ್ಕೆ ಸಾಕು. ಆದರೂ ಕನ್ನಡವು ತನ್ನ ಸ್ಥಾನದಿಂದ ಕದಲಲಿಲ್ಲವೆಂಬುದು ಅಭಿನಂದನೀಯವೇ ಸೈ. ಈ ಮಾತು ಅದರ ಭವಿಷ್ಯದ ಬಗ್ಗೆ ಒಳ್ಳೆ ಬಲವಾದ ಆಶೆಯನ್ನುಂಟುಮಾಡುತ್ತಿದೆ.

ಇನ್ನು ಕನ್ನಡಸಾಹಿತ್ಯಸ್ರೋತನಾದರೂ ಬಹಳ ಪುರಾತನ ಕಾಲದಿಂದ ಹರಿಯುತ್ತ ಬಂದಿದೆ. ಪುರಾತನ ಕನ್ನಡ ಕವಿಗಳ ಸಂಖ್ಯೆ, ಅವರು ಬರೆದ ಗ್ರಂಥಗಳ ಪ್ರಮಾಣ, ಅವರು ಬರೆದ ವಿಷಯಗಳ ವಿವಿಧತೆ, ಅವರ ಲೇಖನದ ಪ್ರೌಢಿಮೆ ಇವುಗಳನ್ನೆಲ್ಲ ನೋಡಿದರೆ ಅದು ಹಿಂದೂಸ್ಥಾನದಲ್ಲಿಯ ಯಾವ ಭಾಷೆಗಿಂತಲೂ ಹಿಂದೆಬೀಳದು. ಇಷ್ಟೇ ಅಲ್ಲ. ಮರಾಠಿ, ಬಂಗಾಲಿ, ತೆಲುಗು ಮುಂತಾದ ಈಚೆಗೆ ಮುಂದೆ ಬಂದ ಸಾಹಿತ್ಯಗಳನ್ನು ಅದು ಗತವೈಭವದ ವಿಷಯದಲ್ಲಿ ಹಿಂದೆ ಹಾಕುವದು ಎಂಬಲ್ಲಿ ಸಂಶಯವಿಲ್ಲ. ಆಧುನಿಕ ಕಾಲದಲ್ಲಿ ಮಾತ್ರ ಈ ಮೇಲಿನ ಸಾಹಿತ್ಯಗಳು ನಮ್ಮನ್ನು ಬಹಳ ಹಿಂದೆ ಹಾಕಿವೆ ಎಂಬುದನ್ನು ಒಪ್ಪಬೇಕಾಗಿದೆ. ಈಚೆಗೆ ಕನ್ನಡವು ಸಣ್ಣಕಥೆ, ಹೊಸಕಾವ್ಯ ಮುಂತಾದ ಹಲವು ಮಾತುಗಳಲ್ಲಿ ಚೆನ್ನಾಗಿ ಮುಂದೆಬರುತ್ತಿರುವದು ಸಮಾಧಾನಕರವಾದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯವು ಮೊದಮೊದಲು ಸಂಸ್ಕೃತದೊಡನೆ ತಕ್ಕಮಟ್ಟಿಗೆ ತಿಕ್ಕಾಡಿ, ಸ್ಪರ್ಧೆ ಮಾಡಿ ಮುಂದೆ ಬರಬೇಕಾಯಿತೆನ್ನುವದು ಹಲವು ಮಾತುಗಳಿಂದ ವ್ಯಕ್ತವಾಗುವದು. ಆಂಡಯ್ಯನ ಪ್ರಯತ್ನವೂ ಅಂಥ ಮಾತುಗಳಲ್ಲಿ ಒಂದು. ಅದೇ ರೀತಿ ಕನ್ನಡದಲ್ಲಿ ಹೇಳಿದರೆ ಸಾಲದೆ? ಸಂಸ್ಕೃತದಲಿನ್ನೇನು? ಎಂದು ಮುಂತಾಗಿ ಹಲವು ಕವಿಗಳು ಬರೆದಿರುವದನ್ನು ನೋಡಿದರೆ ಜನರ ಲಕ್ಷ್ಯವು ಸಂಸ್ಕೃತದ ಕಡೆಗೆ ಹೆಚ್ಚು ಇತ್ತು; ಕನ್ನಡದಲ್ಲಿ ಬರೆಯುವದು ಅಥವಾ ಓದುವದು ಗೌಣವೆನಿಸುತ್ತಿತ್ತು ಎಂಬುದು ಒಡೆದು ತೋರುವದು. ಆದರೆ ಕನ್ನಡವು ಆ ವಿಷಯದಲ್ಲಿ ಗೆದಿಯಿತು ಎಂದು ಹೇಳಬಹುದು. ಧರ್ಮ ಮುಂತಾದ ಪ್ರೌಢ ವಿಷಯಗಳನ್ನು ಸಂಸ್ಕೃತದಲ್ಲಿಯೇ ಬರೆಯಬೇಕು ಎಂಬ ಕಲ್ಪನೆಯನ್ನು ಕನ್ನಡದಲ್ಲಿ ಮೊದಲು ಕಿತ್ತುಹಾಕಿದವರು ಜೈನಕವಿಗಳು ಎಂಬುದು ಸ್ಪಷ್ಟವಿರುವುದು. ಮುಂದೆ ವಚನಕಾರರು, ಹಾಗೂ ದಾಸರು ಈ ಗ್ರಹಗಳನ್ನು ಪೂರಾ ನಿರ್ನಾಮ ಮಾಡಿದರೆಂದು ಹೇಳಲು ಅಡ್ಡಿಯಿಲ್ಲ.

ರೂಢವಿದ್ದ ಸಂಸ್ಕೃತ ಸಾಹಿತ್ಯ ರೂಪಗಳನ್ನು ಕೂಡ ಬಿಟ್ಟು ಅವರು ಹೊಸ ರೂಪಗಳನ್ನು ಕಲ್ಪಿಸಿ ಅತ್ಯಂತ ಕಠಿಣವೆನಿಸಿದ ತತ್ವವಿಚಾರಗಳನ್ನು ಕೂಡ ಜನಸಾಮಾನ್ಯರೂ ತಿಳಿಯುವಂತೆಮಾಡಿ ಕನ್ನಡ ನಾಡಿನ ಮೇಲೆ ಮಹದುಪಕಾರ ಮಾಡಿಬಿಟ್ಟರು.

ಮುಸಲ್ಮಾನರು ಇಲ್ಲಿ ಹಲವು ಕಾಲ ಆಳಿದರೂ ಪರ್ಶಿಯನ್ ಅಥವಾ ಅರಬೀಭಾಷೆಗಳ ಪರಿಣಾಮವು ಕನ್ನಡದಮೇಲೆ ಏನೂ ಆಗಿಲ್ಲವೆನ್ನಬಹುದು. ಏನೋ ನಾಲ್ಕು ಶಬ್ದಗಳು ಮಾತ್ರ ಸೇರಿಕೊಂಡಿರಬಹುದು.

ಹಿಂದುಸ್ಥಾನದಲ್ಲಿ ಇಂಗ್ಲೀಷರ ಪ್ರಭುತ್ವ ಪ್ರಾರಂಭವಾದೊಡನೆ ಮೊದಮೊದಲು ಪ್ರಾಂತಿಕ ಭಾಷೆಗಳೆಲ್ಲ ಮೂಲೆಗುಂಪಾದವು. ಪ್ರಗತಿಪರವಾದ ಬುದ್ಧಿವಂತರೂ ನೌಕರಿ, ಅಧಿಕಾರ ಇವುಗಳ ಆಶೆಯಿಂದ ಇಂಗ್ಲೀಷಿನ ಕಡೆಗೇ ಧಾವಿಸಿದರು. ಎಲ್ಲ ಬಗೆಯ ಉಚ್ಚ ಶಿಕ್ಷಣವೂ ಇಂಗ್ಲೀಷಿನಲ್ಲಿ ನಡೆಯಿತು. ಪ್ರಾಂತಿಕ ಭಾಷೆಗಳಿಗೆ ಎಲ್ಲಿಯೂ ಯಾವ ಮನ್ನಣೆಯೂ ಇಲ್ಲದಾಯಿತು. ಹೀಗೆ ಒಂದು ಶತಮಾನದ ಅವಧಿ ಹೋದನಂತರ ಸ್ವದೇಶ, ಸ್ವಭಾಷೆಗಳ ಅಭಿಮಾನವು ತಲೆದೋರಿ ಪ್ರಾಂತಿಕ ಭಾಷೆಗಳಿಗೆ ಮಹತ್ವವು ಬರತೊಡಗಿತು. ಅಲ್ಲಲ್ಲಿ ಅಚ್ಚುಕೂಟಗಳು ಸ್ಥಾಪನವಾಗಿ ಪ್ರಾಂತಿಕ ಭಾಷೆಗಳ ಮೊಳೆಗಳು ತಯಾರಾಗಿ, ಪ್ರಾಂತಿಕಭಾಷೆಗಳಲ್ಲಿ ಪುಸ್ತಕಗಳು ಹೊರಡಲಾರಂಭಿಸಿದವು. ಹೀಗೆ ಎಚ್ಚತ್ತ ಭಾಷೆಗಳಲ್ಲಿ ಕನ್ನಡವು ಕೊನೆಯದು ಎಂದು ಹೇಳಬಹುದು! ಇರಲಿ. ಎಚ್ಚತ್ತ ಕನ್ನಡ ಸಾಹಿತ್ಯವು ತಪ್ಪುಹೆಜ್ಜೆ ಇಡಲಾರಂಭಿಸಿ ಈಗ ಎಷ್ಟೋ ಪ್ರಗತಿ ಹೊಂದಿದೆ. ಆಧುನಿಕ ಕನ್ನಡ ಕಥೆ, ಕಾದಂಬರಿ, ಕಾವ್ಯ, ವೃತ್ತಪತ್ರ, ಮಾಸಿಕಗಳು ಮುಂತಾದುವುಗಳನ್ನು ನೋಡಿದರೆ, ಸ್ವಲ್ಪಕಾಲದಲ್ಲಿಯೇ ನಮ್ಮ ನೆರೆಹೊರೆಯವರು ನಡೆದಷ್ಟು ದಾರಿಯನ್ನು ನಾವೂ ನಡೆಯಬಹುದು ಎಂಬ ಆಶೆ ಹುಟ್ಟಿದೆ.

### ನಮ್ಮ ವಿಷಮಸ್ಥಿತಿ

ಹೀಗೆ ಭವಿಷ್ಯಕಾಲದ ಬಗ್ಗೆ ಆಶೆಯನ್ನು ವ್ಯಕ್ತಮಾಡುತ್ತಿರುವಾಗಲೇ ಈಗ ಸದ್ಯಕ್ಕಿದ್ದ ನಮ್ಮ ನಾಡು, ನುಡಿ, ಸಾಹಿತ್ಯಗಳ ವಿಷಮ ಪರಿಸ್ಥಿತಿಯನ್ನು ನನ್ನ ಅನುಭವಕ್ಕೆ ಬಂದಂತೆ ಸ್ವಲ್ಪ ಬಣ್ಣಿಸುತ್ತೇನೆ. ಅಂದರೆ ಮುಂದಿನ ಮಾರ್ಗವನ್ನು ಹೇಗೆ ಹುಡುಕಬೇಕು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಗುವದು. ನಾನು ಒಳ್ಳೇ ಆಶಾವಾದಿ ಆದುದರಿಂದ ನಮ್ಮಸ್ಥಿತಿ ಬಹಳ ಕೆಡುಕಿದೆ ಎಂದು ತಿಳಿದುಕೊಂಡು ಹತಾಶನಾಗಲು ನಾನು ಸಿದ್ಧನಿಲ್ಲ. ಅದೇ ರೀತಿ 'ನಿಮಗೇನಾಗಿದೆ, ಇದಕ್ಕೂ ಒಳ್ಳೇಸ್ಥಿತಿ ಹೇಗಿರಬೇಕು?" ಎಂದು ಕೇಳುವವರು ಹಲವು ಮಿತ್ರರಿದ್ದಾರೆ. ಆದುದರಿಂದ ನಮ್ಮ ಸ್ಥಿತಿ ಚೆನ್ನಾಗಿದೆ ಎಂದು ಭಾವಿಸಿಯೇ ಹೊರಡುತ್ತೇನೆ. ಹೀಗೆ ಭಾವಿಸಿದರೂ ಹಲವು ಅಡಚಣೆಗಳು ಥಗ್ಗೆಂದು ಮುಂದೆನಿಲ್ಲುತ್ತವೆ. ಮುಂದೆ ಸಾಗುವಾಗ ಅವು ಅಡ್ಡಕಟ್ಟುತ್ತವೆ. ಅವುಗಳ ಕಡೆಗೆ ಕಣ್ಮುಚ್ಚಿ ನಡೆಯಬಾರದು. ಹಾಗೆ ಅವುಗಳನ್ನು ದುರ್ಲಕ್ಷಿಸಿ ನಡೆಯುವದು ಆಶಾವಾದದ ಲಕ್ಷಣವಲ್ಲ. ಅದು ಮರುಳುತನವು. ಯಥಾರ್ಥಜ್ಞಾನ ಮಾಡಿಕೊಂಡು ಎಂಥ ಅಡಚಣೆಗಳು ಬಂದರೂ ನಿರಾಸೆಯಮುಸುಕು ನಮ್ಮನ್ನು ಆವರಿಸಿದರೂ ಅದರೊಳಗಿಂದ ಪಾರಾಗುವೆವೆಂಬ ಭರವಸೆಯಿಟ್ಟು ಕರ್ತವ್ಯಕರ್ಮವನ್ನು ಮಾಡುತ್ತಿರುವದೇ ನಿಜವಾದ ಆಶಾವಾದಿತ್ವವು. ಆ ರೀತಿ ನೋಡಿದರೆ ಈಗ ನಮ್ಮ ವಿಷಮಪರಿಸ್ಥಿತಿಯ ಯಥಾರ್ಥಕಲ್ಪನೆಯು ನಮಗೆ ಬೇಕೇ ಬೇಕು.

ಮಾತಾಡಬೇಕು ಎಂಬುದನ್ನು ಸಿದ್ಧಪಡಿಸುವದು ಒಂದು ದೊಡ್ಡ ಶತಕೃತ್ಯವೆನಿಸಿತು. ಕನ್ನಡಕ್ಕೇನು ಭಾಷೆಯೇ, ಸಾಹಿತ್ಯವೇ, ಸಂಗೀತವೇ, ಎಂದು ಕೇಳುವ-ಮರಾಠಿಗರಲ್ಲ-ಕನ್ನಡ ಮಹನೀಯರು-ಇನ್ನೂ ಇಲ್ಲಿ ದೊರಕಬಹುದು. ನಮ್ಮ ಮನೆ ಮಾತು ಕನ್ನಡ ಎಂದು ಹೇಳಲು ನಾಚುವವರು ಈಗ್ಗೂ ಇದ್ದಾರೆ. ನಾನು ಮೊನ್ನೆ ಪುಣೆಯ ನ್ಯೂಸ್ಕೂಲಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘಕ್ಕೆ ಹೋಗಿದ್ದೆನು. ಅಲ್ಲಿ ಕನ್ನಡ ವಿದ್ಯಾರ್ಥಿಗಳೆಷ್ಟು ಎಂದು ಕೇಳಲು "ಮೂವತ್ತು" ಎಂದು ಕಾರ್ಯದರ್ಶಿಯು ಹೇಳಿದನು. ಇಷ್ಟೆಯೇ? ಎಂದು ನಾನು ಕೇಳಲಾಗಿ, 'ಇನ್ನೂ ಇದ್ದಾರೆ, ಕನ್ನಡವೆಂದು ಹೇಳಲು ನಾಚುತ್ತಾರೆ' ಎಂದನು! ಹುಡುಗರು ನಾಚುವದು ವಿಶೇಷವಲ್ಲ, ದೊಡ್ಡ—ದೊಡ್ಡವರು ಸಹ ನಾಚುವರು. ಕರ್ನಾಟಕದಲ್ಲಿ ಆರ್ಥಿಕಪ್ರಗತಿ ಸಾಕಷ್ಟು ಇಲ್ಲದ್ದರಿಂದ ಕರ್ನಾಟಕದಿಂದ ಅನೇಕರು ವಿಶೇಷವಾಗಿ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಯವರು ಮುಂಬೈ ಮದ್ರಾಸುಗಳಿಗೆ ಮತ್ತು ನೆರೆಪ್ರಾಂತಗಳಿಗೆ ಹೋಗುವರು. ಅವರು ಬಹುಶಃ ಕನ್ನಡಕ್ಕೆ ತಿಲಾಂಜಲಿಯನ್ನು ಕೊಟ್ಟೇ ಹೊರಬೀಳುವರು. ಅಮಟ್ಟಿಗೆ ಕನ್ನಡಕ್ಕೆ ಹಾನಿಯೇ ಆಗುವದು. ತದ್ವಿರುದ್ಧವಾಗಿ ಕರ್ನಾಟಕದಲ್ಲಿ ಬಂದು ನೆಲಸಿದ ನೆರೆಪ್ರಾಂತದವರು ಅಂದರೆ ಮರಾಟಿಗರು, ತೆಲುಗರು, ಗುಜರಾಥಿಗಳು, ಮಾರವಾಡಿಗಳು ತಮ್ಮ ಭಾಷೆಯನ್ನು ಬಿಡದೆ ತಮ್ಮ ಹಕ್ಕನ್ನು ಇಲ್ಲಿ ಹೇಳುವರು. ಮರಾಠಿ ಬಾಂಧವರು ಈ ವಿಷಯದಲ್ಲಿ ಒಳ್ಳೇ ಗಟ್ಟಿಗರು. ಅವರು ಮನೆ ಮಾತನ್ನು ಎಂದಿಗೂ ಬಿಡುವದಿಲ್ಲ. ಬಿಟ್ಟದ್ದನ್ನು ನಾವು ಕಂಡಿಲ್ಲ.

ಈ ಎಲ್ಲ ಚಿಲ್ಲರೆ ಮಾತುಗಳಿಗೆ ಈ ಸಾಹಿತ್ಯ ಪರಿಷತ್ತಿನಲ್ಲಿ ಏಕೆ ಮಹತ್ವ ಎಂದು ನನ್ನ ಮಿತ್ರರು ಕೇಳಬಹುದು. ಈ ವಿವರವನ್ನು ಹೇಳದೆ ನಾನೂ ನಾಲ್ಕು ದುಂಡು ದುಂಡು ಮಾತುಗಳನ್ನಾಡಿ ನಿಮ್ಮ ಕಡೆಯಿಂದ ಭಲೆಯೆನಿಸಿಕೊಳ್ಳಬಹುದಾಗಿತ್ತು. ಆದರೆ ಈ ಸಣ್ಣ ಮಾತುಗಳಲ್ಲಿಯೇ ದೊಡ್ಡ ಸಂಗತಿಗಳ ಉಗಮವಿದೆ. ಇಂಥ ಮಾತುಗಳಿಂದಲೇ ಮುಂದೆ ದೊಡ್ಡ ಸಮಸ್ಯೆಗಳುಂಟಾಗುತ್ತವೆ. ಮುಂದೆ ಅಂಥ ಸಮಸ್ಯೆ ಉಂಟಾಗದಂತೆ ನಮ್ಮ ಪ್ರಯತ್ನವಿರಬೇಕು. ಆದುದರಿಂದ ನಾವು ಯಾವ ಮಾತೂ ಸಣ್ಣದು ಎಂದು ಎನ್ನಲಿಕ್ಕಾಗುವದಿಲ್ಲ. ಅದರ ಪರಿಣಾಮವೇನಾಗುವದೆಂಬುದನ್ನು ನೋಡಿ ಬಳಿಕ ಅದಕ್ಕೆ ಸಣ್ಣದು ದೊಡ್ಡದು ಎನ್ನಬಹುದು.

ಒಂದು ವೇಳೆ ಕನ್ನಡಿಗರು ನೆರೆಪ್ರಾಂತದಲ್ಲಿ—ಪರಪ್ರಾಂತವೆನ್ನುವದನ್ನು ನಾವು ಬಿಟ್ಟುಬಿಡಬೇಕು—ನೆಲಸುವದಾದರೆ ಅವರು ಬೇಕಾದ ಹಾಗೆ ಕನ್ನಡವನ್ನು ಮರೆಯಲಿ. ಅದರಿಂದ ದೊಡ್ಡ ಹಾನಿಯಿಲ್ಲ. ಆದರೆ ಮುಂದೆ ಅವರಾಗಲಿ ಅವರ ಮಕ್ಕಳಾಗಲಿ ಇಲ್ಲಿ ಬರುವದಾದರೆ, ಇಲ್ಲಿಗೆ ಬರುವ ಇಚ್ಛೆಯಿಂದ ಹೋಗಿದ್ದರೆ, ಹೊಲಮನೆಗಳನ್ನು ಇಲ್ಲಿ ಇಟ್ಟುಕೊಂಡಿದ್ದರೆ ತಮ್ಮ ಕನ್ನಡವನ್ನುಳಿಸಿಕೊಳ್ಳುವ ಭಾರವು ಅವರ ಮೇಲಿದೆ ಎಂದು ಹೇಳಬಲ್ಲೆ. ಅದೇ ರೀತಿ ಮರಾಟಿಗರಾಗಲಿ, ತೆಲುಗರಾಗಲಿ, ಕರ್ನಾಟಕದಲ್ಲಿ ನೆಲಸಿದವರು ಇಲ್ಲಿಯ ನುಡಿಯನ್ನು ಕಲಿತು ಇಲ್ಲಿ ಸಮರಸರಾಗಲು ಯತ್ನಿಸಲಿಕ್ಕೆ ಬೇಕು. ಇದು ನೆರೆಪ್ರಾಂತದ ಪರಸ್ಪರ ಧರ್ಮ. ಹಾಗೆ ಮಾಡದೆ ಆಯಾ ಪ್ರಾಂತಗಳಲ್ಲಿ ಭಾಷಾಸಮಸ್ಯೆಗಳುಂಟಾಗುವಂತೆ ವರ್ತಿಸುವದು ಬಹಳ ದೊಡ್ಡ ತಪ್ಪಾಗುವದು. ಇದಲ್ಲದೆ ನಮ್ಮ ನೆರೆಪ್ರಾಂತದವರು ನಮಗಿಂತ ಮೊದಲು ಜಾಗೃತರಾಗಿ ತಮ್ಮ ನುಡಿಗಳನ್ನು ಎಷ್ಟೋ ಸುಧಾರಿಸಿಕೊಂಡಿದ್ದಾರೆ. ಇಷ್ಟೇ ಅಲ್ಲ. ಅವರು ಹೆಚ್ಚು ಪ್ರಚಾರಶೀಲರು ಇರುವರು. ಆದುದರಿಂದ ನಮ್ಮ ಪ್ರಾಂತದಲ್ಲಿ ನಮ್ಮ ನುಡಿಯ ವರ್ಚಸ್ಸೇ ನಡೆಯುವಂತೆ ನಾವು ನಿರ್ದಾಕ್ಷಿಣ್ಯದಿಂದ ಎಚ್ಚರಗೊಳ್ಳಲಿಕ್ಕೆ ಬೇಕು. ಇದಲ್ಲದೆ ಈಗಿನ ಕಾಲದಲ್ಲಿ ಫೋನೋ, ರೇಡಿಯೋ, ಸಿನಿಮಾ, ವೃತ್ತಪತ್ರಗಳು ಇವಾದರೂ ನುಡಿಯ ಪ್ರಚಾರದಲ್ಲಿ ಸಹಾಯಕವಾಗುವವು. ಕನ್ನಡವು ಈ ವ್ಯವಸಾಯಗಳಲ್ಲಿ ಕೂಡ ಬಹಳ ಹಿಂದೆ ಇದೆ ಎಂದು ಹೇಳಬೇಕಾಗುವದು. ಮುಂಬಯಿ ರೇಡಿಯೋ ಸ್ಟೇಷನ್ನಿನಿಂದ ಈಗ ಶೈಕ್ಷಣಿಕ ವಿಷಯಗಳು ಬೀರಲ್ಪಡುತ್ತಿರುವವು. ಆದರೆ ಅಲ್ಲಿ ಕನ್ನಡಕ್ಕೆ ಸ್ಥಾನವು ದೊರೆತಿಲ್ಲ! ಸಿನಿಮಾ ಸೃಷ್ಟಿಯಲ್ಲಿ ಕನ್ನಡ ವಾಕ್ಪಟಗಳನ್ನು ತಯಾರಿಸುವ ಕಂಪನಿಗಳೆಷ್ಟು? ಎಂದು ವಿಚಾರಿಸಿದರೆ ಅತ್ಯಂತ ನಿರಾಶೆಯಾಗುವಂತಿದೆ. ಇವುಗಳನ್ನು ಈ ದಿನಗಳಲ್ಲಿ ದುರ್ಲಕ್ಷಿಸಿ ನಡೆಯುವಂತಿಲ್ಲ.

ಇದು ನುಡಿಯ ವಿಷಯವಾಯಿತು. ಇನ್ನು ಸಾಹಿತ್ಯದ ದೃಷ್ಟಿಯಿಂದ ನೋಡುವಾ. ಇಲ್ಲಿಯೂ ವಿಲಕ್ಷಣಸ್ಥಿತಿಯೇ ಇದೆ. ಕನ್ನಡಿಗರ ಸಂಖ್ಯೆಯೇನೋ ಹೇಳಲು ೧೧೦ ಲಕ್ಷ. ಆದರೆ ಭಿನ್ನ ಆಡಳಿತಗಳ ಮೂಲಕ, ವರ್ಷಾನುವರ್ಷ ಭಿನ್ನ ಆಡಳಿತಕ್ಕೆ ಒಳಗಾಗಿರುವದರಿಂದ ಭಿನ್ನಹಿತ ಸಂಬಂಧಗಳು ಉಂಟಾದ ಮೂಲಕ, ನಮ್ಮಲ್ಲಿ ಭಾಷಾಭೇದಗಳುಂಟಾಗಿವೆ. ಒಂದು ಭಾಗದಲ್ಲಿ ರಚಿಸುವ ಪುಸ್ತಕವು ಇನ್ನೊಂದೆಡೆ ಸರಿಹೋಗುವದಿಲ್ಲ. ಮಾಧ್ಯಮಿಕ ಅಥವಾ ಉಚ್ಚ ಶಿಕ್ಷಣ ಕ್ರಮದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಯೋಗ್ಯಸ್ಥಾನವಿಲ್ಲದ್ದರಿಂದ ಕನ್ನಡದಲ್ಲಿ ಶ್ರೇಷ್ಠ ತರಗತಿಯ ಪುಸ್ತಕಗಳು ಹೊರಡುವದು ಕಠಿಣವಾಗಿದೆ. ಯಾವದೇ ಲೇಖಕನು ಪುಸ್ತಕ ಬರೆದನೆಂದರೆ, ಅವನು ತನ್ನ ಪುಸ್ತಕವು ಇಲ್ಲವೆ ಪಠ್ಯಪುಸ್ತಕವಾಗುವಂತೆ ಯತ್ನಿಸಬೇಕು: ಅಂದರೆ ದೈನ್ಯಹೇಳಿಕೊಳ್ಳುತ್ತ ಹೋಗಬೇಕು—ಇಲ್ಲವೆ ಇದ್ದ ಬಿದ್ದ ಎರಡು ಮೂರು ಸಂಸ್ಥೆಗಳ ಕಡೆಗೆ ಧಾವಿಸಿ ಏನಾದರೂ ಪಾರಿತೋಷಿಕ ದೊರೆಯುವದೇನೋ ನೋಡಬೇಕು! ಯಾವದೇ ಪುಸ್ತಕವನ್ನು ನೋಡಿದರೂ ತೀರ ಲೋಕಪ್ರಿಯವಾಗುವ ಕಾದಂಬರಿಗಳನ್ನು ನೋಡಿದರೂ ಅವುಗಳ ಆರಂಭದಲ್ಲಿ, ಪ್ರಥಮ ಸಂಸ್ಕರಣ ೧,೦೦೦ ಪ್ರತಿ ಎಂದು ಇರುತ್ತದೆ. ಪಠ್ಯಪುಸ್ತಕಗಳನ್ನು ಬಿಟ್ಟರೆ ಎರಡನೆಯ ಸಂಸ್ಕರಣವಾದ ಪುಸ್ತಕಗಳೆಷ್ಟು? ಇದರ ಲೆಕ್ಕಮಾಡುವದು ಬಹಳ ಮನೋರಂಜಕವಾಗಬಹುದು. ಇದಲ್ಲದೆ ಸಾಹಿತ್ಯವನ್ನವಲಂಬಿಸಿ ಜೀವನ ಮಾಡುವವರು ಎಷ್ಟುಜನರಿರುವರು? ಎಂಬುದನ್ನು ನೋಡುವದೂ ಬಹಳ ಬೋಧಕರವಾಗುವದು. ಇಷ್ಟೇ ಏಕೆ? ಕನ್ನಡದಲ್ಲಿ ಪುಸ್ತಕಗಳು ವರ್ಷವರ್ಷಕ್ಕೆ ಹುಟ್ಟಿದವೆಷ್ಟು? ಇತ್ಯಾದಿ ವಿಷಯವನ್ನು ಕಲೆಹಾಕಬೇಕೆಂದು ಯತ್ನಿಸಿದರೆ ಅದಕ್ಕಾಗಿ ತಕ್ಕ ಸಾಧನಗಳು ಕೂಡ ದೊರೆಯುವದಿಲ್ಲ. ಇಡೀ ಕನ್ನಡ ಸಾಹಿತ್ಯಕ್ಕೆ-ಭೂತ, ವರ್ತಮಾನ ಮತ್ತು ಭವಿಷ್ಯ—ಒಂದು ಮಧ್ಯವರ್ತಿ ಪುಸ್ತಕಾಲಯವು ಅವಶ್ಯವಿದೆ. ಅಲ್ಲಿ ಈ ಬಗೆಯ ವಾರ್ಷಿಕ ಪರಿಶೀಲನಾದಿಗಳನ್ನು ಮಾಡುವದು ಅನುಕೂಲವಾಗುವದು.

ಪುಸ್ತಕಗಳ ಸಂಖ್ಯೆ ಒತ್ತಟ್ಟಿಗಿರಲಿ. ವರ್ಷವರ್ಷಕ್ಕೆ ಹೊರಡುವ ಪುಸ್ತಕಗಳ ವಿಷಯಗಳಾವವು? ಅವುಗಳ ಯೋಗ್ಯತೆಯೇನು? ಇದು ಹೆಚ್ಚು ಮಹತ್ವದ ಸಂಗತಿಯು. ಕಥೆ-ಕಾದಂಬರಿಗಳೆಷ್ಟು? ಐತಿಹಾಸಿಕ, ಚರಿತ್ರಾತ್ಮಕ ಪುಸ್ತಕಗಳೆಷ್ಟು? ತತ್ವ ವಿಷಯಕವೆಷ್ಟು? ವೈಜ್ಞಾನಿಕವೆಷ್ಟು? ಇತ್ಯಾದಿ ನೋಡಿದರೆ ಅದರಲ್ಲಿಯೂ ನಾವು ಬಹಳ ಹಿಂದೆ ಇರುವೆವೆಂದೇ ಹೇಳಬೇಕಾಗುವದು. ಇನ್ನು ಬರೆದ ಪುಸ್ತಕಗಳಲ್ಲಿ ಮೌಲಿಕವಾದವೆಷ್ಟು, ಭಾಷಾಂತರಗಳೆಷ್ಟು, ಪ್ರತಿಬಿಂಬಗಳೆಷ್ಟು, ವಾಙ್ಮಯ ಚೌರ್ಯ ಮಾಡಿದವೆಷ್ಟು, ನೆರೆ ಭಾಷೆಗಳಲ್ಲಿ ಭಾಷಾಂತರ ಹೊಂದಿದವೆಷ್ಟು? ಇತ್ಯಾದಿ ಮಾತುಗಳನ್ನು ಪರಿಶೀಲಿಸಿದರೆ ನಮ್ಮ ಸಾಹಿತ್ಯದ ಯೋಗ್ಯತೆ ತಿಳಿಯುವದು. ಅಂಥ ಇಂಥ ಸಾವಿರಾರು ಪುಸ್ತಕಗಳಿಗಿಂತ ಒಂದೇ ವಿಚಾರ ಪ್ರಚೋದಕವಾದ ಪುಸ್ತಕವು ಪ್ರಪಂಚವನ್ನೇ ತಲೆದೂಗಿಸಬಹುದು. ಹಾಗೂ ನಮ್ಮ ಸಾಹಿತ್ಯಕ್ಕೆ ಎಲ್ಲೆಲ್ಲಿಯೂ ಮನ್ನಣೆ ದೊರೆಯುವಂತೆ ಮಾಡಬಹುದು! ರವೀಂದ್ರನಾಥರ ಒಂದೇ 'ಗೀತಾಂಜಲಿ'ಯು ಬಂಗಾಲಿಯನ್ನು ಅತ್ಯುಚ್ಚಶಿಖರಕ್ಕೆ ಮುಟ್ಟಿಸಿಬಿಟ್ಟಿತು. ನಮ್ಮಲ್ಲಿ ಅಂಥ ಪುಸ್ತಕಗಳೇನಾದರೂ ಇವೆಯೋ ಎಂಬುದನ್ನು ವರ್ಷವರ್ಷಕ್ಕೆ ನಿರೀಕ್ಷಿಸುವದು ಅವಶ್ಯವಿರುವದು.

ಇನ್ನು ವೃತ್ತಪತ್ರಗಳು ವಿಶೇಷವಾಗಿ ದೈನಿಕಗಳು, ಭಾಷಾ ಪ್ರಚಾರ ದೃಷ್ಟಿಯಿಂದ ಹೆಚ್ಚು ಕೆಲಸ ಮಾಡುವವು. ಆದರೆ ಕನ್ನಡದಲ್ಲಿ ಅವುಗಳ ಪ್ರಸಾರವು ಕೂಡ ಬಹಳ ಕಡಮೆ. ಅವುಗಳ ಪ್ರಸಾರಕ್ಕೂ ಅನೇಕ ಅಡಚಣೆಗಳಿವೆ. ಒಂದು ದೈನಿಕವು ಕೂಡ ತನ್ನ ಕಾಲ ಮೇಲೆ ತಾನು ನಿಂತು ಒಳ್ಳೆ ಹೊಸ ಉಪಕ್ರಮಗಳನ್ನು ಮಾಡಿ ಜನರಲ್ಲಿ ನವವಿಚಾರಗಳನ್ನು ಬೀರುವ ಸಾಮರ್ಥ್ಯವುಳ್ಳದ್ದಿಲ್ಲ. ನಿತ್ಯ ಸುದ್ದಿ ಮುಂತಾದವುಗಳನ್ನು ಕೊಡುವ ಕಾರ್ಯವನ್ನಷ್ಟು ಅವು ಹೇಗಾದರೂ ಮಾಡುತ್ತಲಿವೆ ಇಷ್ಟೆ! ಸಾಹಿತ್ಯದ ದೃಷ್ಟಿಯಿಂದ ವೃತ್ತಪತ್ರಿಕೆಗಳು ಮಾಡಬಹುದಾದ ಕೆಲಸಗಳಲ್ಲಿ ಹೊಸ ಶಬ್ದಗಳ ಪ್ರಚಾರವೊಂದು ಬಹಳ ದೊಡ್ಡದಾಗಿದೆ. ಅವರು ನಿತ್ಯವೂ ಹೊಸವಿಚಾರಗಳನ್ನು ಪ್ರಕಟ

ಮಾತಾಡಬೇಕು ಎಂಬುದನ್ನು ಸಿದ್ಧಪಡಿಸುವದು ಒಂದು ದೊಡ್ಡ ಶತಕೃತ್ಯವೆನಿಸಿತು. ಕನ್ನಡಕ್ಕೇನು ಭಾಷೆಯೇ, ಸಾಹಿತ್ಯವೇ, ಸಂಗೀತವೇ, ಎಂದು ಕೇಳುವ-ಮರಾಟಿಗರಲ್ಲ-ಕನ್ನಡ ಮಹನೀಯರು-ಇನ್ನೂ ಇಲ್ಲಿ ದೊರಕಬಹುದು. ನಮ್ಮ ಮನೆ ಮಾತು ಕನ್ನಡ ಎಂದು ಹೇಳಲು ನಾಚುವವರು ಈಗ್ಯೂ ಇದ್ದಾರೆ. ನಾನು ಮೊನ್ನೆ ಪುಣೆಯ ನ್ಯೂಸ್ಕೂಲಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘಕ್ಕೆ ಹೋಗಿದ್ದೆನು. ಅಲ್ಲಿ ಕನ್ನಡ ವಿದ್ಯಾರ್ಥಿಗಳೆಷ್ಟು ಎಂದು ಕೇಳಲು "ಮೂವತ್ತು" ಎಂದು ಕಾರ್ಯದರ್ಶಿಯು ಹೇಳಿದನು. ಇಷ್ಟೆಯೇ? ಎಂದು ನಾನು ಕೇಳಲಾಗಿ, 'ಇನ್ನೂ ಇದ್ದಾರೆ, ಕನ್ನಡವೆಂದು ಹೇಳಲು ನಾಚುತ್ತಾರೆ' ಎಂದನು! ಹುಡುಗರು ನಾಚುವದು ವಿಶೇಷವಲ್ಲ, ದೊಡ್ಡ–ದೊಡ್ಡವರು ಸಹ ನಾಚುವರು. ಕರ್ನಾಟಕದಲ್ಲಿ ಆರ್ಥಿಕಪ್ರಗತಿ ಸಾಕಷ್ಟು ಇಲ್ಲದ್ದರಿಂದ ಕರ್ನಾಟಕದಿಂದ ಅನೇಕರು ವಿಶೇಷವಾಗಿ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಯವರು ಮುಂಬೈ ಮದ್ರಾಸುಗಳಿಗೆ ಮತ್ತು ನೆರೆಪ್ರಾಂತಗಳಿಗೆ ಹೋಗುವರು. ಅವರು ಬಹುಶಃ ಕನ್ನಡಕ್ಕೆ ತಿಲಾಂಜಲಿಯನ್ನು ಕೊಟ್ಟೇ ಹೊರಬೀಳುವರು. ಆಮಟ್ಟಿಗೆ ಕನ್ನಡಕ್ಕೆ ಹಾನಿಯೇ ಆಗುವದು. ತದ್ವಿರುದ್ಧವಾಗಿ ಕರ್ನಾಟಕದಲ್ಲಿ ಬಂದು ನೆಲಸಿದ ನೆರೆಪ್ರಾಂತದವರು ಅಂದರೆ ಮರಾಟಿಗರು, ತೆಲುಗರು, ಗುಜರಾಥಿಗಳು, ಮಾರವಾಡಿಗಳು ತಮ್ಮ ಭಾಷೆಯನ್ನು ಬಿಡದೆ ತಮ್ಮ ಹಕ್ಕನ್ನು ಇಲ್ಲಿ ಹೇಳುವರು. ಮರಾಠಿ ಬಾಂಧವರು ಈ ವಿಷಯದಲ್ಲಿ ಒಳ್ಳೇ ಗಟ್ಟಿಗರು. ಅವರು ಮನೆ ಮಾತನ್ನು ಎಂದಿಗೂ ಬಿಡುವದಿಲ್ಲ. ಬಿಟ್ಟದ್ದನ್ನು ನಾವು ಕಂಡಿಲ್ಲ.

ಈ ಎಲ್ಲ ಚಿಲ್ಲರೆ ಮಾತುಗಳಿಗೆ ಈ ಸಾಹಿತ್ಯ ಪರಿಷತ್ತಿನಲ್ಲಿ ಏಕೆ ಮಹತ್ವ ಎಂದು ನನ್ನ ಮಿತ್ರರು ಕೇಳಬಹುದು. ಈ ವಿವರವನ್ನು ಹೇಳದೆ ನಾನೂ ನಾಲ್ಕು ದುಂಡು ದುಂಡು ಮಾತುಗಳನ್ನಾಡಿ ನಿಮ್ಮ ಕಡೆಯಿಂದ ಭಲೆಯೆನಿಸಿಕೊಳ್ಳಬಹುದಾಗಿತ್ತು. ಆದರೆ ಈ ಸಣ್ಣ ಮಾತುಗಳಲ್ಲಿಯೇ ದೊಡ್ಡ ಸಂಗತಿಗಳ ಉಗಮವಿದೆ. ಇಂಥ ಮಾತುಗಳಿಂದಲೇ ಮುಂದೆ ದೊಡ್ಡ ಸಮಸ್ಯೆಗಳುಂಟಾಗುತ್ತವೆ. ಮುಂದೆ ಅಂಥ ಸಮಸ್ಯೆ ಉಂಟಾಗದಂತೆ ನಮ್ಮ ಪ್ರಯತ್ನವಿರಬೇಕು. ಆದುದರಿಂದ ನಾವು ಯಾವ ಮಾತೂ ಸಣ್ಣದು ಎಂದು ಎನ್ನಲಿಕ್ಕಾಗುವದಿಲ್ಲ. ಅದರ ಪರಿಣಾಮವೇನಾಗುವದೆಂಬುದನ್ನು ನೋಡಿ ಬಳಿಕ ಅದಕ್ಕೆ ಸಣ್ಣದು ದೊಡ್ಡದು ಎನ್ನಬಹುದು.

ಒಂದು ವೇಳೆ ಕನ್ನಡಿಗರು ನೆರೆಪ್ರಾಂತದಲ್ಲಿ—ಪರಪ್ರಾಂತವೆನ್ನುವದನ್ನು ನಾವು ಬಿಟ್ಟುಬಿಡಬೇಕು–ನೆಲಸುವದಾದರೆ ಅವರು ಬೇಕಾದ ಹಾಗೆ ಕನ್ನಡವನ್ನು ಮರೆಯಲಿ. ಅದರಿಂದ ದೊಡ್ಡ ಹಾನಿಯಿಲ್ಲ. ಆದರೆ ಮುಂದೆ ಅವರಾಗಲಿ ಅವರ ಮಕ್ಕಳಾಗಲಿ ಇಲ್ಲಿ ಬರುವದಾದರೆ, ಇಲ್ಲಿಗೆ ಬರುವ ಇಚ್ಛೆಯಿಂದ ಹೋಗಿದ್ದರೆ, ಹೊಲಮನೆಗಳನ್ನು ಇಲ್ಲಿ ಇಟ್ಟುಕೊಂಡಿದ್ದರೆ ತಮ್ಮ ಕನ್ನಡವನ್ನುಳಿಸಿಕೊಳ್ಳುವ ಭಾರವು ಅವರ ಮೇಲಿದೆ ಎಂದು ಹೇಳಬಲ್ಲೆ. ಅದೇ ರೀತಿ ಮರಾಟಿಗರಾಗಲಿ, ತೆಲುಗರಾಗಲಿ, ಕರ್ನಾಟಕದಲ್ಲಿ ನೆಲಸಿದವರು ಇಲ್ಲಿಯ ನುಡಿಯನ್ನು ಕಲಿತು ಇಲ್ಲಿ ಸಮರಸರಾಗಲು ಯತ್ನಿಸಲಿಕ್ಕೆ ಬೇಕು. ಇದು ನೆರೆಪ್ರಾಂತದ ಪರಸ್ಪರ ಧರ್ಮ. ಹಾಗೆ ಮಾಡದೆ ಆಯಾ ಪ್ರಾಂತಗಳಲ್ಲಿ ಭಾಷಾಸಮಸ್ಯೆಗಳುಂಟಾಗುವಂತೆ ವರ್ತಿಸುವದು ಬಹಳ ದೊಡ್ಡ ತಪ್ಪಾಗುವದು. ಇದಲ್ಲದೆ ನಮ್ಮ ನೆರೆಪ್ರಾಂತದವರು ನಮಗಿಂತ ಮೊದಲು ಜಾಗೃತರಾಗಿ ತಮ್ಮ ನುಡಿಗಳನ್ನು ಎಷ್ಟೋ ಸುಧಾರಿಸಿಕೊಂಡಿದ್ದಾರೆ. ಇಷ್ಟೇ ಅಲ್ಲ. ಅವರು ಹೆಚ್ಚು ಪ್ರಚಾರಶೀಲರು ಇರುವರು. ಆದುದರಿಂದ ನಮ್ಮ ಪ್ರಾಂತದಲ್ಲಿ ನಮ್ಮ ನುಡಿಯ ವರ್ಚಸ್ಸೇ ನಡೆಯುವಂತೆ ನಾವು ನಿದಾರ್ಕ್ಷಿಣ್ಯದಿಂದ ಎಚ್ಚರಗೊಳ್ಳಲಿಕ್ಕೆ ಬೇಕು. ಇದಲ್ಲದೆ ಈಗಿನ ಕಾಲದಲ್ಲಿ ಫೋನೋ, ರೇಡಿಯೋ, ಸಿನಿಮಾ, ವೃತ್ತಪತ್ರಗಳು ಇವಾದರೂ ನುಡಿಯ ಪ್ರಚಾರದಲ್ಲಿ ಸಹಾಯಕವಾಗುವವು. ಕನ್ನಡವು ಈ ವ್ಯವಸಾಯಗಳಲ್ಲಿ ಕೂಡ ಬಹಳ ಹಿಂದೆ ಇದೆ ಎಂದು ಹೇಳಬೇಕಾಗುವದು. ಮುಂಬಯಿ ರೇಡಿಯೋ ಸ್ಟೇಷನ್ನಿನಿಂದ ಈಗ ಶೈಕ್ಷಣಿಕ ವಿಷಯಗಳು ಬೀರಲ್ಪಡುತ್ತಿರುವವು. ಆದರೆ ಅಲ್ಲಿ ಕನ್ನಡಕ್ಕೆ ಸ್ಥಾನವು ದೊರೆತಿಲ್ಲ! ಸಿನಿಮಾ ಸೃಷ್ಟಿಯಲ್ಲಿ ಕನ್ನಡ ವಾಕ್ಪಟಗಳನ್ನು ತಯಾರಿಸುವ ಕಂಪನಿಗಳೆಷ್ಟು? ಎಂದು ವಿಚಾರಿಸಿದರೆ ಅತ್ಯಂತ ನಿರಾಶೆಯಾಗುವಂತಿದೆ. ಇವುಗಳನ್ನು ಈ ದಿನಗಳಲ್ಲಿ ದುರ್ಲಕ್ಷಿಸಿ ನಡೆಯುವಂತಿಲ್ಲ.

ಇದು ನುಡಿಯ ವಿಷಯವಾಯಿತು. ಇನ್ನು ಸಾಹಿತ್ಯದ ದೃಷ್ಟಿಯಿಂದ ನೋಡುವಾ. ಇಲ್ಲಿಯೂ ವಿಲಕ್ಷಣಸ್ಥಿತಿಯೇ ಇದೆ. ಕನ್ನಡಿಗರ ಸಂಖ್ಯೆಯೇನೋ ಹೇಳಲು ೧೧೦ ಲಕ್ಷ. ಆದರೆ ಭಿನ್ನ ಆಡಳಿತಗಳ ಮೂಲಕ, ವರ್ಷಾನುವರ್ಷ ಭಿನ್ನ ಆಡಳಿತಕ್ಕೆ ಒಳಗಾಗಿರುವದರಿಂದ ಭಿನ್ನ ಹಿತ ಸಂಬಂಧಗಳು ಉಂಟಾದ ಮೂಲಕ, ನಮ್ಮಲ್ಲಿ ಭಾಷಾಭೇದಗಳುಂಟಾಗಿವೆ. ಒಂದು ಭಾಗದಲ್ಲಿ ರಚಿಸುವ ಪುಸ್ತಕವು ಇನ್ನೊಂದೆಡೆ ಸರಿಹೋಗುವದಿಲ್ಲ. ಮಾಧ್ಯಮಿಕ ಅಥವಾ ಉಚ್ಚ ಶಿಕ್ಷಣ ಕ್ರಮದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಯೋಗ್ಯಸ್ಥಾನವಿಲ್ಲದ್ದರಿಂದ ಕನ್ನಡದಲ್ಲಿ ಶ್ರೇಷ್ಠ ತರಗತಿಯ ಪುಸ್ತಕಗಳು ಹೊರಡುವದು ಕಠಿಣವಾಗಿದೆ. ಯಾವದೇ ಲೇಖಕನು ಪುಸ್ತಕ ಬರೆದನೆಂದರೆ, ಅವನು ತನ್ನ ಪುಸ್ತಕವು ಇಲ್ಲವೆ ಪಠ್ಯಪುಸ್ತಕವಾಗುವಂತೆ ಯತ್ನಿಸಬೇಕು: ಅಂದರೆ ದೈನ್ಯಹೇಳಿಕೊಳ್ಳುತ್ತ ಹೋಗಬೇಕು—ಇಲ್ಲವೆ ಇದ್ದ ಬಿದ್ದ ಎರಡು ಮೂರು ಸಂಸ್ಥೆಗಳ ಕಡೆಗೆ ಧಾವಿಸಿ ಏನಾದರೂ ಪಾರಿತೋಷಿಕ ದೊರೆಯುವದೇನೋ ನೋಡಬೇಕು! ಯಾವದೇ ಪುಸ್ತಕವನ್ನು ನೋಡಿದರೂ ತೀರ ಲೋಕಪ್ರಿಯವಾಗುವ ಕಾದಂಬರಿಗಳನ್ನು ನೋಡಿದರೂ ಅವುಗಳ ಆರಂಭದಲ್ಲಿ, ಪ್ರಥಮ ಸಂಸ್ಕರಣ ೧,೦೦೦ ಪ್ರತಿ ಎಂದು ಇರುತ್ತದೆ. ಪಠ್ಯಪುಸ್ತಕಗಳನ್ನು ಬಿಟ್ಟರೆ ಎರಡನೆಯ ಸಂಸ್ಕರಣವಾದ ಪುಸ್ತಕಗಳೆಷ್ಟು? ಇದರ ಲೆಕ್ಕಮಾಡುವದು ಬಹಳ ಮನೋರಂಜಕವಾಗಬಹುದು. ಇದಲ್ಲದೆ ಸಾಹಿತ್ಯವನ್ನವಲಂಬಿಸಿ ಜೀವನ ಮಾಡುವವರು ಎಷ್ಟುಜನರಿರುವರು? ಎಂಬುದನ್ನು ನೋಡುವದೂ ಬಹಳ ಬೋಧಕರವಾಗುವದು. ಇಷ್ಟೇ ಏಕೆ? ಕನ್ನಡದಲ್ಲಿ ಪುಸ್ತಕಗಳು ವರ್ಷವರ್ಷಕ್ಕೆ ಹುಟ್ಟಿದವೆಷ್ಟು? ಇತ್ಯಾದಿ ವಿಷಯವನ್ನು ಕಲೆಹಾಕಬೇಕೆಂದು ಯತ್ನಿಸಿದರೆ ಅದಕ್ಕಾಗಿ ತಕ್ಕ ಸಾಧನಗಳು ಕೂಡ ದೊರೆಯುವದಿಲ್ಲ. ಇಡೀ ಕನ್ನಡ ಸಾಹಿತ್ಯಕ್ಕೆ-ಭೂತ, ವರ್ತಮಾನ ಮತ್ತು ಭವಿಷ್ಯ—ಒಂದು ಮಧ್ಯವರ್ತಿ ಪುಸ್ತಕಾಲಯವು ಅವಶ್ಯವಿದೆ. ಅಲ್ಲಿ ಈ ಬಗೆಯ ವಾರ್ಷಿಕ ಪರಿಶೀಲನಾದಿಗಳನ್ನು ಮಾಡುವದು ಅನುಕೂಲವಾಗುವದು.

ಪುಸ್ತಕಗಳ ಸಂಖ್ಯೆ ಒತ್ತಟ್ಟಿಗಿರಲಿ. ವರ್ಷವರ್ಷಕ್ಕೆ ಹೊರಡುವ ಪುಸ್ತಕಗಳ ವಿಷಯಗಳಾವವು? ಅವುಗಳ ಯೋಗ್ಯತೆಯೇನು? ಇದು ಹೆಚ್ಚು ಮಹತ್ವದ ಸಂಗತಿಯು. ಕಥೆ-ಕಾದಂಬರಿಗಳೆಷ್ಟು? ಐತಿಹಾಸಿಕ, ಚರಿತ್ರಾತ್ಮಕ ಪುಸ್ತಕಗಳೆಷ್ಟು? ತತ್ವ ವಿಷಯಕವೆಷ್ಟು? ವೈಜ್ಞಾನಿಕವೆಷ್ಟು? ಇತ್ಯಾದಿ ನೋಡಿದರೆ ಅದರಲ್ಲಿಯೂ ನಾವು ಬಹಳ ಹಿಂದೆ ಇರುವೆವೆಂದೇ ಹೇಳಬೇಕಾಗುವದು. ಇನ್ನು ಬರೆದ ಪುಸ್ತಕಗಳಲ್ಲಿ ಮೌಲಿಕವಾದವೆಷ್ಟು, ಭಾಷಾಂತರಗಳೆಷ್ಟು, ಪ್ರತಿಬಿಂಬಗಳೆಷ್ಟು, ವಾಙ್ಮಯ ಚೌರ್ಯ ಮಾಡಿದವೆಷ್ಟು, ನೆರೆ ಭಾಷೆಗಳಲ್ಲಿ ಭಾಷಾಂತರ ಹೊಂದಿದವೆಷ್ಟು? ಇತ್ಯಾದಿ ಮಾತುಗಳನ್ನು ಪರಿಶೀಲಿಸಿದರೆ ನಮ್ಮ ಸಾಹಿತ್ಯದ ಯೋಗ್ಯತೆ ತಿಳಿಯುವದು. ಅಂಥ ಇಂಥ ಸಾವಿರಾರು ಪುಸ್ತಕಗಳಿಗಿಂತ ಒಂದೇ ವಿಚಾರ ಪ್ರಚೋದಕವಾದ ಪುಸ್ತಕವು ಪ್ರಪಂಚವನ್ನೇ ತಲೆದೂಗಿಸಬಹುದು. ಹಾಗೂ ನಮ್ಮ ಸಾಹಿತ್ಯಕ್ಕೆ ಎಲ್ಲೆಲ್ಲಿಯೂ ಮನ್ನಣೆ ದೊರೆಯುವಂತೆ ಮಾಡಬಹುದು! ರವೀಂದ್ರನಾಥರ ಒಂದೇ 'ಗೀತಾಂಜಲಿ'ಯು ಬಂಗಾಲಿಯನ್ನು ಅತ್ಯುಚ್ಚಶಿಖರಕ್ಕೆ ಮುಟ್ಟಿಸಿಬಿಟ್ಟಿತು. ನಮ್ಮಲ್ಲಿ ಅಂಥ ಪುಸ್ತಕಗಳೇನಾದರೂ ಇವೆಯೋ ಎಂಬುದನ್ನು ವರ್ಷವರ್ಷಕ್ಕೆ ನಿರೀಕ್ಷಿಸುವದು ಅವಶ್ಯವಿರುವದು.

ಇನ್ನು ವೃತ್ತಪತ್ರಗಳು ವಿಶೇಷವಾಗಿ ದೈನಿಕಗಳು, ಭಾಷಾಪ್ರಚಾರ ದೃಷ್ಟಿಯಿಂದ ಹೆಚ್ಚು ಕೆಲಸ ಮಾಡುವವು. ಆದರೆ ಕನ್ನಡದಲ್ಲಿ ಅವುಗಳ ಪ್ರಸಾರವು ಕೂಡ ಬಹಳ ಕಡಮೆ. ಅವುಗಳ ಪ್ರಸಾರಕ್ಕೂ ಅನೇಕ ಅಡಚಣೆಗಳಿವೆ. ಒಂದು ದೈನಿಕವು ಕೂಡ ತನ್ನ ಕಾಲ ಮೇಲೆ ತಾನು ನಿಂತು ಒಳ್ಳೆ ಹೊಸ ಉಪಕ್ರಮಗಳನ್ನು ಮಾಡಿ ಜನರಲ್ಲಿ ನವವಿಚಾರಗಳನ್ನು ಬೀರುವ ಸಾಮರ್ಥ್ಯವುಳ್ಳದ್ದಿಲ್ಲ. ನಿತ್ಯ ಸುದ್ದಿ ಮುಂತಾದವುಗಳನ್ನು ಕೊಡುವ ಕಾರ್ಯವನ್ನಿಷ್ಟು ಅವು ಹೇಗಾದರೂ ಮಾಡುತ್ತಲಿವೆ ಇಷ್ಟೆ! ಸಾಹಿತ್ಯದ ದೃಷ್ಟಿಯಿಂದ ವೃತ್ತಪತ್ರಿಕೆಗಳು ಮಾಡಬಹುದಾದ ಕೆಲಸಗಳಲ್ಲಿ ಹೊಸ ಶಬ್ದಗಳ ಪ್ರಚಾರವೊಂದು ಬಹಳ ದೊಡ್ಡದಾಗಿದೆ. ಅವರು ನಿತ್ಯವೂ ಹೊಸವಿಚಾರಗಳನ್ನು ಪ್ರಕಟ

ಮಾಡಲೇಬೇಕಾಗುವದು. ಆಗ ಹೊಸ ಹೊಸ ಶಬ್ದಗಳನ್ನು ಉಪಯೋಗಿಸದೆ ಇದ್ದರೆ ವಿಧಿಯಿಲ್ಲ. ಇನ್ನೊಂದು ಕೆಲಸವೆಂದರೆ ಸಾಹಿತ್ಯ ಸಮಾಲೋಚನೆ. ಅದನ್ನು ವಾರ ಪತ್ರಿಕೆಗಳೂ, ಮಾಸಿಕ ಪತ್ರಿಕೆಗಳೂ ಚನ್ನಾಗಿ ಮಾಡಬಲ್ಲವು. ಅವು ಸದ್ಯಕ್ಕೆ ಸಾಕಷ್ಟು ನಿರಪೇಕ್ಷತೆಯಿಂದ, ಬುದ್ಧಿವಂತಿಕೆಯಿಂದ ಮಾಡುತ್ತಿಲ್ಲ ಎಂದು ಹೇಳಬಹುದು.

### ನೆಳಲು ಬೆಳಕು

ನಾನು ಈವರೆಗೆ ಆಡಿದುದನ್ನೆಲ್ಲ ಕೇಳಿ "ಇದೇನು ನಾವು ಮಾಡಿದ ಒಳ್ಳೆಯದನ್ನು ಹೇಳಲೇ ಇಲ್ಲ. ಮಾಡದೆ ಇದ್ದುದನ್ನೇ ಹೇಳಿದಿರಿ, ನಿರಾಶಾವಾದಕ್ಕೆ ಸಾಕಷ್ಟು ಅನುವುಗೊಟ್ಟಿರಿ" ಎಂದು ನೀವು ಎನ್ನಬಹುದು. ಅಹುದು; ನಾನು ಇಲ್ಲಿ ಕನ್ನಡವನ್ನು ಕುರಿತು ಕನ್ನಡಿಗರಲ್ಲಿ ಆಪ್ತಾಲೋಚನೆಮಾಡಲು ಬಂದಿದ್ದೇನೆ. ಯಾವ ಭಟ್ಟಂಗಿಯಾಗಿ ಬಂದಿಲ್ಲ. ಅಥವಾ ನಮ್ಮ ಬೆನ್ನು ನಾವೇ ಚಪ್ಪರಿಸಿಕೊಂಡು ಸಮಾಧಾನಹೊಂದಲು ಬಂದಿಲ್ಲ. 'ಆಲ್‌ಬೇಲ್' ಕೊಟ್ಟು ಹೋಗಲು ನೀವು ನನ್ನನ್ನು ಆರಿಸಿಲ್ಲ. ನಾವೂ ಇನ್ನೂ ಎಷ್ಟೋ ಪ್ರಯತ್ನಶೀಲರಾಗಬೇಕಾಗಿದೆ. ಇದನ್ನು ತಿಳಿದುಕೊಳ್ಳುವದೇ ನಮ್ಮ ಮುಖ್ಯ ಗುರಿ. ನಾವು ಮಾಡಿದುದು ಕಡ್ಡಿಯಷ್ಟು, ಮಾಡತಕ್ಕದ್ದು ಗುಡ್ಡದಷ್ಟು. ಹೀಗಿರುವಾಗ ಪ್ರಶಂಸೆಯಿಂದ ಫಲವಿಲ್ಲ.

ನಾನು ನೆಳಲನ್ನು ಬಣ್ಣಿಸಿದಂತೆ ಬೆಳಕನ್ನು ಯಥಾರ್ಥವಾಗಿ ಬಣ್ಣಿಸಬಲ್ಲೆ. ನಿಜವಾಗಿ ಇಷ್ಟೆಲ್ಲ ಘೋರವಾದ ಅಡಚಣೆಗಳಿದ್ದರೂ ನಿತ್ಯ ಅದರಮೇಲೆ ಆಘಾತಗಳಾಗುತ್ತಿದ್ದರೂ ಕನ್ನಡವು ಉಳಿದು ಬದುಕಿಬಾಳಿ ಬೆಳೆಯುತ್ತಲಿದೆ. ಇದೇನು ಸಣ್ಣ ಮಾತಲ್ಲ. ೧೯೨೧ರಲ್ಲಿಯ ಕನ್ನಡಿಗರ ಸಂಖ್ಯೆಗಿಂತ ೧೯೩೧ರಲ್ಲಿಯ ಕನ್ನಡಿಗರ ಸಂಖ್ಯೆ ೬ ಲಕ್ಷದಿಂದ ಬೆಳೆದಿದೆ. ದೈನಿಕ ಪತ್ರಗಳು ಈಗ ಹೆಚ್ಚು ಪ್ರಸಾರಹೊಂದಿವೆ. ಇಷ್ಟೇ ಅಲ್ಲದೆ ಅವು ಎಷ್ಟೋ ಉತ್ತಮಗೊಂಡು ನೆರೆ ಪ್ರಾಂತದಲ್ಲಿಯ, ತೆಲುಗು, ತಮಿಳು ಪತ್ರಗಳನ್ನು ಸಂಖ್ಯೆಯಲ್ಲಲ್ಲದಿದ್ದರೂ ಗುಣದಲ್ಲಿ ಸರಿಗಟ್ಟುತ್ತಿವೆ. ಸಾಪ್ತಾಹಿಕಗಳು ಚಿತ್ರಗಳಿಂದ ಹಾಗೂ ವಿಷಯ ವೈವಿಧ್ಯದಿಂದ ಹೆಚ್ಚು ಲೋಕಪ್ರಿಯವಾಗಿವೆ. ಅಲ್ಲಲ್ಲಿ ಕರ್ನಾಟಕಸಂಘಗಳು ಹೊರಟು ಅವು ಆಸ್ಥೆಯಿಂದ, ಪ್ರೇಮದಿಂದ ಕನ್ನಡ ನುಡಿಯ ಚಾವುಟಗಳನ್ನು ಎತ್ತಿ ಹಿಡಿಯುತ್ತಿವೆ. ಕಥೆ-ಕಾದಂಬರಿಗಳು ದೊಡ್ಡವಿಲ್ಲದಿದ್ದರೂ ಸಣ್ಣವು ಹೆಚ್ಚಾಗಿ ಮತ್ತು ಮುದ್ದಾಗಿ ಹೊರಡುತ್ತಲಿವೆ. ಅಷ್ಟರಲ್ಲಿ ಕವಿಗಳೂ ಹಿಂದೆ ಬಿದ್ದಿಲ್ಲ. ಹೊಸ ವಿಚಾರಗಳನ್ನು ಹೊಸ ಶೈಲಿಯಲ್ಲಿ ಮುಂದಿಟ್ಟು ಜನರ ಮೆಚ್ಚುಗೆಯನ್ನು ಅವರು ಪಡೆಯುತ್ತಲಿದ್ದಾರೆ. ಅಲ್ಲಲ್ಲಿ ಅಭಿಮಾನಶಾಲಿಗಳಾದ ಹಲವು ಕನ್ನಡಿಗರು ಕನ್ನಡದ ಹಕ್ಕುಗಳಿಗಾಗಿ ಹೊಡೆದಾಡಿ ಮುಂದಡಿ ಇಡುತ್ತಿದ್ದಾರೆ.

### ಅಸಂತೋಷವು ಬೇಕು

ಆದರೆ ಇದೆಲ್ಲ ಸಾಕಷ್ಟಿಲ್ಲ. ಅಲ್ಪಸಂತೋಷಿಗಳಾಗುವದು ಬೇಡ. 'ಅಸಂತೋಷಃ ಶ್ರಿಯೋಮೂಲಂ' ಎಂಬುದನ್ನು ಲಕ್ಷಿಸುವಾ. ನೆರೆ ಪ್ರಾಂತದವರ ಪ್ರಗತಿಯನ್ನು ನೋಡುವಾ. ಅದಕ್ಕೂ ಆಚೆಗೆಂದರೆ ಬಂಗಾಲಿ ಇಂಗ್ಲೀಷ ಮುಂತಾದ ಭಾಷೆಗಳ ಪ್ರಗತಿಯನ್ನು ನಮ್ಮ ಕಣ್ಣೆದುರು ಇಟ್ಟುಕೊಳ್ಳುವಾ. ಅಂದರೆ ನಮ್ಮಿಂದ ಏನಾದರೂ ಆಗಬಹುದು. ಎಲ್ಲವೂ ನೆಟ್ಟಗೆ ನಡೆದಿದೆ ಎಂದು ತಿಳಿಯುವ ದಿನಗಳು ಕನ್ನಡದ ಪುಟ್ಟಿಗೆ ಇನ್ನೂ ಬಂದಿಲ್ಲ.

### ಲೇಖಕರ ವಾಚಕರ ವೃತ್ತಿ

ವಿಶಾಲ ಅರ್ಥದಲ್ಲಿ ಸಾಹಿತ್ಯವೆಂಬುದು ಒಂದು ದೃಷ್ಟಿಯಿಂದ ಲೇಖಕರ ಹಾಗೂ ವಾಚಕರ ನಡುವಿನ ಕೊಡಕೊಳ್ಳುವ ವಸ್ತು, ಲೇಖಕರು ವಿವಿಧ ರೂಪಗಳಲ್ಲಿ ಸಾಹಿತ್ಯವನ್ನು ವಾಚಕರಿಗೆ ಕೊಡುವರು. ವಾಚಕರು ಅದರಿಂದ ಆನಂದಪಡುವರು. ಅವರಿಗೆ ಹಣವನ್ನು ಪ್ರಸಂಗವಶಾತ್ ಪ್ರಶಂಸೆಯನ್ನು ಕೊಟ್ಟು ಋಣಮುಕ್ತರಾಗುವರು. ವ್ಯವಹಾರದಲ್ಲಿ ಇವರಿಬ್ಬರ ವೃತ್ತಿಯೇನಿರಬೇಕೆಂಬುದು ಮಹತ್ವದ್ದಾಗಿದೆ. ಸದ್ಯಕ್ಕೆ ಅನೇಕ ಲೇಖಕರ ವಾಚಕರ ವೃತ್ತಿಯು ಅಷ್ಟೊಂದು ಸಮಾಧಾನಕರವಿಲ್ಲ. ಹಲವರದು ವಿಷಾದಾಸ್ಪದವಿದೆ ಎಂದು ಹೇಳಬಹುದು. ಈಹೊತ್ತು ರಾತ್ರಿ ಕುಳಿತು ಅಲ್ಲಿಂದಿಲ್ಲಿಂದ ವಿಚಾರಗಳನ್ನೊ ಶೈಲಿಯನ್ನೋ ಕಳವುಮಾಡಿ, ತಿದ್ದಿತೀಡಿ ಬರೆದು, ಮರುದಿವಸ ವೃತ್ತಪತ್ರದಲ್ಲಿ ಬರವೆಹೋದರೆ ಸಂಪಾದಕ ಕುಲಕೋಟಿ ಉದ್ಧಾರಮಾಡುವ ಅನೇಕ ಲೇಖಕರನ್ನು ನಾನು ಕಂಡಿದ್ದೇನೆ; ನಾನು ಸಂಪಾದಕನ ಕೆಲಸ ಮಾಡುತ್ತಿರುವದರಿಂದ ಹಾಗೆ ಉದ್ಧಾರಾದವರಲ್ಲಿ ಆಗುವವರಲ್ಲಿ ನಾನೂ ಒಬ್ಬನು! ಇದೇ ಬಗೆಯು ಕವಿಗಳು, ಪುಸ್ತಕ ಲೇಖಕರು ಇದ್ದಾರೆ. ಸಾಹಿತ್ಯದ ಸೇನೆಯೆಂದು ಹೊರಟು ಒಂದು ಪತ್ರವನ್ನೋ ಒಂದು ಪುಸ್ತಕ ಮಾಲೆಯನ್ನೋ ಕಟ್ಟಿಕೊಂಡು ಕನ್ನಡದ ಅಭಿಮಾನವಿದ್ದರೆ ನೀವು ಕೊಳ್ಳಲಿಕ್ಕೆ ಬೇಕು ಎಂದು ಹೇಳುವವರೂ ಹಲವರಿದ್ದಾರೆ. ಆದರೆ ನಾವು ಇವರಿಗೆ ಪ್ರಾರ್ಥಿಸುವುದೇನೆಂದರೆ—'ಜೇಯಾಪೇಟೆಗೆ ಹೋಗುವ ಮೊದಲು ಪೇಟಿಯಲ್ಲಿ ಮಾರತಕ್ಕಹದೇನಾದರೂ ನನ್ನಲ್ಲಿದೆಯೋ?' ಎಂಬ ಆತ್ಮನಿರೀಕ್ಷಣೆಮಾಡಿಕೊಂಡು ಮುಂದೆ ಹೆಜ್ಜೆ ಇಡು, ಕೇವಲ ಅಭಿಮಾನದಿಂದ ಕೊಳ್ಳುವ ದಿನಗಳು ಈಗ ಉಳಿದಿಲ್ಲ'. ನಮ್ಮ ಲೇಖದ ಹಾದಿಯನ್ನು ಆ ಸಂಪಾದಕನು ಕಾಯುತ್ತಿದ್ದರೆ ನಮ್ಮದನ್ನೇ ಹಾಕುತ್ತಿದ್ದನು. ಆದರೆ ಬೇರೆ ಲೇಖಗಳಿವೆ, ಬೇರೆ ಲೇಖಕರಿದ್ದಾರೆ. ಅದನ್ನು ತಿಳಿದು ನಾವು ಸಿಟ್ಟಾಗದೆ ಹೆಚ್ಚು ಯೋಗ್ಯರಾಗಬೇಕು. ಪೂರ್ವಸಾಹಿತಿಗಳು ತಮ್ಮ ಹೆಸರು ವೃತ್ತಪತ್ರಗಳಲ್ಲಿ ಬರಲಿ ಎಂದು ಹವಣಿಸಲಿಲ್ಲ! ಎಷ್ಟೋ ಸಾಹಿತಿಗಳ ಪೂರ್ಣ ಹೆಸರು ನಮಗೆ ಇನ್ನೂ ಗೊತ್ತಿಲ್ಲ. ಆದರೆ ಅವರ ಕಲಾಕೃತಿಗಳು ಅಜರಾಮರವಾಗಿವೆ. ಹಾಗೆ ಆಗುವ ಧ್ಯೇಯವಿರಬೇಕೋ ಅಥವಾ ದೈನಿಕ ಪತ್ರದಲ್ಲಿ ಹೆಸರು ಬಂದು ಮುಂದೆ ಆ ದೈನಿಕ ಪತ್ರದ ಗತಿಯನ್ನು ಸೇರುವದೇ ಧ್ಯೇಯವಿರಬೇಕೋ ಇದನ್ನು ನಾವು ಯೋಚಿಸಲಿಕ್ಕೆ ಬೇಕು. ಬರೆಯುವ ಪುರಸತಿಗೆ ಇಲ್ಲದೆ, ಈಮ್ಯಾಲಾದ ಬೆಕ್ಕು ಮೂಲೆಮೂಲೆ ಸುತ್ತುವಂತೆ, ಲೇಖಕರು ವೃತ್ತ ಪತ್ರಗಳ ಕಚೇರಿಗೆ ಎಡತಾಕಿದರೆ ಅದರಲ್ಲಿ ಯಾರಿಗೆ ಗೌರವ? ಅದರಿಂದ ಯಾವ ಉದ್ದೇಶ ಸಾಧನ? ಈವರೆಗೆ ಆದ ಉತ್ತಮೋತ್ತಮ ಲೇಖಕರನೇಕರು, ಈಗ್ಯೂ ಒಂದೇನಾದರೂ ಬರೆಯಬೇಕಾದರೆ ನಾಲ್ಕುಸಾರೆ ತಿದ್ದುತ್ತಾರೆ. ಎಷ್ಟೋಬಾರಿ ಹರಿದೊಗೆದು ಮತ್ತೆ ಬರೆಯುತ್ತಾರೆ. ಇದನ್ನೆಲ್ಲ ನಾವು ಲಕ್ಷಿಸಲಿಕ್ಕೆ ಬೇಕು.

ಹಲವು ಲೇಖಕರು ಲೋಕಪ್ರಿಯರಾಗಬಯಸಿ ಬೇಕಾದ್ದನ್ನು ಬರೆಯುವರು. ಕೇವಲ ರಂಜನೆಯೇ ಇವರ ಉದ್ದೇಶವಿರಬಹುದು. ಲೇಖಕರ ಈ ವೃತ್ತಿಯು ನಮ್ಮನ್ನು ಹಾಳುಮಾಡದೆ ಇರದು. ಲೋಕಪ್ರಿಯವಾಗುವದೇ ಲೇಖಕನ ಧ್ಯೇಯವಲ್ಲ. ಲೇಖಕನ ಧ್ಯೇಯವು ಇದಕ್ಕೂ ಉಚ್ಚತರವಾದುದು, ಒಟ್ಟಿಗೆ ಜನಮನಗಳ ಮಟ್ಟವನ್ನು ಎಲ್ಲ ರೀತಿಯಿಂದ ಮೇಲಕ್ಕೇರಿಸುವದೇ ಅವನ ಧ್ಯೇಯವೆಂದು ಹೇಳಬಹುದು. ಅನೇಕ ಉತ್ತಮ ಲೇಖಕರು ಲೋಕಪ್ರಿಯರಿರಲಿಲ್ಲ. ಈಗ ಲೋಕಪ್ರಿಯರಾದ ಅನೇಕ ಲೇಖಕರು ಲೋಕಪ್ರಿಯರಿರಲಿಲ್ಲ. ಇದನ್ನು ನಾವು ಲಕ್ಷಿಸಲಿಕ್ಕೆಬೇಕು. ಸತ್ಯದೃಷ್ಟಿ, ಜನರ ಭಾವಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ, ಸಾಹಿತ್ಯಕಲೆ, ಇವು ಲೇಖಕರಲ್ಲಿ ಮುಖ್ಯವಾಗಿ ಅವಶ್ಯ. ಲೇಖಕರಿಗೆ ಅನ್ವಯಿಸುವವು. ಅದರ ಬಗ್ಗೆ ಬೇರೆ ಬರೆಯ ಬೇಕಾಗಿಲ್ಲ.

ಇನ್ನು ನಮ್ಮ ವಾಚಕರನ್ನು ನಿರೀಕ್ಷಿಸಿದರೆ ಅಲ್ಲಿಯೂ ಇಷ್ಟವಾದ ವೃತ್ತಿ ಕಂಡು ಬರುವದಿಲ್ಲ. ಪುಸ್ತಕ, ವೃತ್ತಪತ್ರ ಇವುಗಳ ಬಗ್ಗೆ ನಮ್ಮ ನೀತಿಯು ಬಹಳ ನಿಂದಾಸ್ಪದವಿದೆ. ಪುಸ್ತಕ ಕೊಳ್ಳಬಾರದು, ಕೊಂಡರೆ ಓದಬಾರದು, ಓದಿದರೆ ನೆನಪಿಡಬಾರದು. ಕಡತಂದ ಪುಸ್ತಕ ತಿರುಗಿ ಕೊಡಬಾರದು, ತಂದ ಪುಸ್ತಕ ವ್ಯವಸ್ಥೆಯಿಂದ ಇಡಬಾರದು, ಈ ನೀತಿಯನ್ನು ಅನುಸರಿಸುವವರೇ ಬಹಳ! ಈಗ ಮನೆ ಮನೆ ಮಾರಾಟಕ್ಕೆ ಪುಸ್ತಕಗಳು ಬರುವದನ್ನು ಕಂಡು ವಾಚಕರು ಕಾಯಿಪಲ್ಲೆಯಂತೆ ಅದರ ಧಾರಣೆಕೇಳಲು ಪ್ರಾರಂಭಿಸಿದ್ದಾರೆ. ವೃತ್ತಪತ್ರ ವಾಚಕರ ಗತಿಯೂ ಇದೇ. 'ನಿಮ್ಮಲ್ಲಿ ವೃತ್ತಪತ್ರ ಬರುತ್ತದೆಯೇ' ಎಂದು ಕೇಳಿದರೆ, ನಮ್ಮ ಓಣಿಯಲ್ಲಿ ಬರುತ್ತದೆ ಎಂದು ಹೇಳುವವರು ಅನೇಕರು ಸಿಗುವರು. ವೃತ್ತಪತ್ರವೆಂಬುದೊಂದು ತಾವು ಸ್ವತಃ ಕೊಂಡು ಓದತಕ್ಕ ವಿಷಯ ಎಂಬುವದನ್ನು ನಮ್ಮವರು ಇನ್ನೂ ಅರಿತುಕೊಂಡಿಲ್ಲ. ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಲ್ಲಿ ನಾವು ನೋಡಿದರೆ ಕೂಲಿಕಾರರ ಪ್ರತಿಯೊಂದು ಗಂಡಹೆಂಡರು ಕೂಡ ಪ್ರತ್ಯೇಕ ಪತ್ರಗಳನ್ನು ಕೊಂಡು ಓದುವ ಪರಿಪಾಠವಿದೆ. ಕೊಳ್ಳುವ ಇದ್ದ ಬಗ್ಗೆ

ಮಾಡಲೇಬೇಕಾಗುವದು. ಆಗ ಹೊಸ ಹೊಸ ಶಬ್ದಗಳನ್ನು ಉಪಯೋಗಿಸದೆ ಇದ್ದರೆ ವಿಧಿಯಿಲ್ಲ. ಇನ್ನೊಂದು ಕೆಲಸವೆಂದರೆ ಸಾಹಿತ್ಯ ಸಮಾಲೋಚನೆ. ಅದನ್ನು ವಾರ ಪತ್ರಿಕೆಗಳೂ, ಮಾಸಿಕ ಪತ್ರಿಕೆಗಳೂ ಚನ್ನಾಗಿ ಮಾಡಬಲ್ಲವು. ಅವು ಸದ್ಯಕ್ಕೆ ಸಾಕಷ್ಟು ನಿರಪೇಕ್ಷತೆಯಿಂದ, ಬುದ್ಧಿವಂತಿಕೆಯಿಂದ ಮಾಡುತ್ತಿಲ್ಲ ಎಂದು ಹೇಳಬಹುದು.

### ನೆಳಲು ಬೆಳಕು

ನಾನು ಈವರೆಗೆ ಆಡಿದುದನ್ನೆಲ್ಲ ಕೇಳಿ "ಇದೇನು ನಾವು ಮಾಡಿದ ಒಳ್ಳೆಯದನ್ನು ಹೇಳಲೇ ಇಲ್ಲ. ಮಾಡದೆ ಇದ್ದುದನ್ನೇ ಹೇಳಿದಿರಿ, ನಿರಾಶಾವಾದಕ್ಕೆ ಸಾಕಷ್ಟು ಅನುವುಗೊಟ್ಟಿರಿ" ಎಂದು ನೀವು ಎನ್ನಬಹುದು. ಅಹುದು; ನಾನು ಇಲ್ಲಿ ಕನ್ನಡವನ್ನು ಕುರಿತು ಕನ್ನಡಿಗರಲ್ಲಿ ಆಪ್ತಾಲೋಚನೆಮಾಡಲು ಬಂದಿದ್ದೇನೆ. ಯಾರ ಭಟ್ಟಂಗಿಯಾಗಿ ಬಂದಿಲ್ಲ. ಅಥವಾ ನಮ್ಮ ಬೆನ್ನು ನಾವೇ ಚಪ್ಪರಿಸಿಕೊಂಡು ಸಮಾಧಾನಹೊಂದಲು ಬಂದಿಲ್ಲ. 'ಆಲ್‌ಬೇಲ್' ಕೊಟ್ಟು ಹೋಗಲು ನೀವು ನನ್ನನ್ನು ಆರಿಸಿಲ್ಲ. ನಾವೂ ಇನ್ನೂ ಎಷ್ಟೋ ಪ್ರಯತ್ನಶೀಲರಾಗಬೇಕಾಗಿದೆ. ಇದನ್ನು ತಿಳಿದುಕೊಳ್ಳುವದೇ ನಮ್ಮ ಮುಖ್ಯ ಗುರಿ. ನಾವು ಮಾಡಿದುದು ಕಡ್ಡಿಯಷ್ಟು, ಮಾಡತಕ್ಕದ್ದು ಗುಡ್ಡದಷ್ಟು. ಹೀಗಿರುವಾಗ ಪ್ರಶಂಸೆಯಿಂದ ಫಲವಿಲ್ಲ.

ನಾನು ನೆಳಲನ್ನು ಬಣ್ಣಿಸಿದಂತೆ ಬೆಳಕನ್ನು ಯಥಾರ್ಥವಾಗಿ ಬಣ್ಣಿಸಬಲ್ಲೆ. ನಿಜವಾಗಿ ಇಷ್ಟೆಲ್ಲ ಘೋರವಾದ ಅಡಚಣೆಗಳಿದ್ದರೂ ನಿತ್ಯ ಅದರಮೇಲೆ ಆಘಾತಗಳಾಗುತ್ತಿದ್ದರೂ ಕನ್ನಡವು ಉಳಿದು ಬದುಕಿಬಾಳಿ ಬೆಳೆಯುತ್ತಲಿದೆ. ಇದೇನು ಸಣ್ಣ ಮಾತಲ್ಲ. ೧೯೨೧ರಲ್ಲಿಯ ಕನ್ನಡಿಗರ ಸಂಖ್ಯೆಗಿಂತ ೧೯೩೧ರಲ್ಲಿಯ ಕನ್ನಡಿಗರ ಸಂಖ್ಯೆ ೬ ಲಕ್ಷದಿಂದ ಬೆಳೆದಿದೆ. ದೈನಿಕ ಪತ್ರಗಳು ಈಗ ಹೆಚ್ಚು ಪ್ರಸಾರಹೊಂದಿವೆ. ಇಷ್ಟೇ ಅಲ್ಲದೆ ಅವು ಎಷ್ಟೋ ಉತ್ತಮಗೊಂಡು ನೆರೆ ಪ್ರಾಂತದಲ್ಲಿಯ, ತೆಲುಗು, ತಮಿಳು ಪತ್ರಗಳನ್ನು ಸಂಖ್ಯೆಯಲ್ಲಲ್ಲದಿದ್ದರೂ ಗುಣದಲ್ಲಿ ಸರಿಗಟ್ಟುತ್ತಿವೆ. ಸಾಪ್ತಾಹಿಕಗಳು ಚಿತ್ರಗಳಿಂದ ಹಾಗೂ ವಿಷಯ ವೈವಿಧ್ಯದಿಂದ ಹೆಚ್ಚು ಲೋಕಪ್ರಿಯವಾಗಿವೆ. ಅಲ್ಲಲ್ಲಿ ಕರ್ನಾಟಕಸಂಘಗಳು ಹೊರಟು ಅವು ಆಸ್ಥೆಯಿಂದ, ಪ್ರೇಮದಿಂದ ಕನ್ನಡ ನುಡಿಯ ಬಾವುಟಗಳನ್ನು ಎತ್ತಿ ಹಿಡಿಯುತ್ತಿವೆ. ಕಥೆ-ಕಾದಂಬರಿಗಳು ದೊಡ್ಡವಿಲ್ಲದಿದ್ದರೂ ಸಣ್ಣವು ಹೆಚ್ಚಾಗಿ ಮತ್ತು ಮುದ್ದಾಗಿ ಹೊರಡುತ್ತಲಿವೆ. ಅಷ್ಟರಲ್ಲಿ ಕವಿಗಳೂ ಹಿಂದೆ ಬಿದ್ದಿಲ್ಲ. ಹೊಸ ವಿಚಾರಗಳನ್ನು ಹೊಸ ಶೈಲಿಯಲ್ಲಿ ಮುಂದಿಟ್ಟು ಜನರ ಮೆಚ್ಚುಗೆಯನ್ನು ಅವರು ಪಡೆಯುತ್ತಲಿದ್ದಾರೆ. ಅಲ್ಲಲ್ಲಿ ಅಭಿಮಾನಶಾಲಿಗಳಾದ ಹಲವು ಕನ್ನಡಿಗರು ಕನ್ನಡದ ಹಕ್ಕುಗಳಿಗಾಗಿ ಹೊಡೆದಾಡಿ ಮುಂದಡಿ ಇಡುತ್ತಿದ್ದಾರೆ.

### ಅಸಂತೋಷವು ಬೇಕು

ಆದರೆ ಇದೆಲ್ಲ ಸಾಕಷ್ಟಿಲ್ಲ. ಅಲ್ಪಸಂತೋಷಿಗಳಾಗುವದು ಬೇಡ. 'ಅಸಂತೋಷಃ ಶ್ರಿಯೋಮೂಲಂ' ಎಂಬುದನ್ನು ಲಕ್ಷಿಸುವಾ. ನೆರೆ ಪ್ರಾಂತದವರ ಪ್ರಗತಿಯನ್ನು ನೋಡುವಾ. ಅದಕ್ಕೂ ಆಚೆಗೆಂದರೆ ಬಂಗಾಲಿ ಇಂಗ್ಲೀಷ ಮುಂತಾದ ಭಾಷೆಗಳ ಪ್ರಗತಿಯನ್ನು ನಮ್ಮ ಕಣ್ಣೆದುರು ಇಟ್ಟುಕೊಳ್ಳುವಾ. ಅಂದರೆ ನಮ್ಮಿಂದ ಏನಾದರೂ ಆಗಬಹುದು. ಎಲ್ಲವೂ ನೆಟ್ಟಗೆ ನಡೆದಿದೆ ಎಂದು ತಿಳಿಯುವ ದಿನಗಳು ಕನ್ನಡದ ಮಟ್ಟಿಗೆ ಇನ್ನೂ ಬಂದಿಲ್ಲ.

### ಲೇಖಕರ ವಾಚಕರ ವೃತ್ತಿ

ವಿಶಾಲ ಅರ್ಥದಲ್ಲಿ ಸಾಹಿತ್ಯವೆಂಬುದು ಒಂದು ದೃಷ್ಟಿಯಿಂದ ಲೇಖಕರ ಹಾಗೂ ವಾಚಕರ ನಡುವಿನ ಕೊಡಕೊಳ್ಳುವ ವಸ್ತು, ಲೇಖಕರು ವಿವಿಧ ರೂಪಗಳಲ್ಲಿ ಸಾಹಿತ್ಯವನ್ನು ವಾಚಕರಿಗೆ ಕೊಡುವರು. ವಾಚಕರು ಅದರಿಂದ ಆನಂದಪಡುವರು. ಅವರಿಗೆ ಹಣವನ್ನು ಪ್ರಸಂಗವಶಾತ್ ಪ್ರಶಂಸೆಯನ್ನು ಕೊಟ್ಟು ಋಣಮುಕ್ತರಾಗುವರು. ವ್ಯವಹಾರದಲ್ಲಿ ಇವರಿಬ್ಬರ ವೃತ್ತಿಯೇನಿರಬೇಕೆಂಬುದು ಮಹತ್ವದ್ದಾಗಿದೆ. ಸದ್ಯಕ್ಕೆ ಅನೇಕ ಲೇಖಕರ ವಾಚಕರ ವೃತ್ತಿಯು ಅಷ್ಟೊಂದು ಸಮಾಧಾನಕರವಿಲ್ಲ. ಹಲವರದು ವಿಷಾದಾಸ್ಪದವಿದೆ ಎಂದು ಹೇಳಬಹುದು. ಈಹೊತ್ತು ರಾತ್ರಿ ಕುಳಿತು ಅಲ್ಲಿಂದಿಲ್ಲಿಂದ ವಿಚಾರಗಳನ್ನೊ ಶೈಲಿಯನ್ನೋ ಕಳವುಮಾಡಿ, ತಿದ್ದಿ ತೀಡಿ ಬರೆದು, ಮರುದಿವಸ ವೃತ್ತಪತ್ರದಲ್ಲಿ ಬರದೆಹೋದರೆ ಸಂಪಾದಕ ಕುಲಕೋಟಿ ಉದ್ಧಾರಮಾಡುವ ಅನೇಕ ಲೇಖಕರನ್ನು ನಾನು ಕಂಡಿದ್ದೇನೆ; ನಾನು ಸಂಪಾದಕನ ಕೆಲಸ ಮಾಡುತ್ತಿರುವದರಿಂದ ಹಾಗೆ ಉದ್ಧಾರಾದವರಲ್ಲಿ ಆಗುವವರಲ್ಲಿ ನಾನೂ ಒಬ್ಬನು! ಇದೇ ಬಗೆಯ ಕವಿಗಳು, ಪುಸ್ತಕ ಲೇಖಕರು ಇದ್ದಾರೆ. ಸಾಹಿತ್ಯದ ಸೇವೆಯೆಂದು ಹೊರಟು ಒಂದು ಪತ್ರವನ್ನೋ ಒಂದು ಪುಸ್ತಕ ಮಾಲೆಯನ್ನೋ ಕಟ್ಟಿಕೊಂಡು ಕನ್ನಡದ ಅಭಿಮಾನವಿದ್ದರೆ ನೀವು ಕೊಳ್ಳಲಿಕ್ಕೆ ಬೇಕು ಎಂದು ಹೇಳುವವರೂ ಹಲವರಿದ್ದಾರೆ. ಆದರೆ ನಾವು ಇವರಿಗೆ ಪ್ರಾರ್ಥಿಸುವುದೇನೆಂದರೆ—'ಜೀಯಾ ಪೇಟೆಗೆ ಹೋಗುವ ಮೊದಲು ಪೇಟೆಯಲ್ಲಿ ಮಾರತಕ್ಕಹದೇನಾದರೂ ನನ್ನಲ್ಲಿದೆಯೋ?' ಎಂಬ ಆತ್ಮನಿರೀಕ್ಷಣೆಮಾಡಿಕೊಂಡು ಮುಂದೆ ಹೆಜ್ಜೆ ಇಡು, ಕೇವಲ ಅಭಿಮಾನದಿಂದೆ ಕೊಳ್ಳುವ ದಿನಗಳು ಈಗ ಉಳಿದಿಲ್ಲ'. ನಮ್ಮ ಲೇಖದ ಹಾದಿಯನ್ನು ಆ ಸಂಪಾದಕನು ಕಾಯುತ್ತಿದ್ದರೆ ನಮ್ಮದನ್ನೇ ಹಾಕುತ್ತಿದ್ದನು. ಆದರೆ ಬೇರೆ ಲೇಖಗಳಿವೆ, ಬೇರೆ ಲೇಖಕರಿದ್ದಾರೆ. ಅದನ್ನು ತಿಳಿದು ನಾವು ಸಿಟ್ಟಾಗದೆ ಹೆಚ್ಚು ಯೋಗ್ಯರಾಗಬೇಕು. ಪೂರ್ವಸಾಹಿತಿಗಳು ತಮ್ಮ ಹೆಸರು ವೃತ್ತಪತ್ರಗಳಲ್ಲಿ ಬರಲಿ ಎಂದು ಹವಣಿಸಲಿಲ್ಲ! ಎಷ್ಟೋ ಸಾಹಿತಿಗಳ ಪೂರ್ಣ ಹೆಸರು ನಮಗೆ ಇನ್ನೂ ಗೊತ್ತಿಲ್ಲ. ಆದರೆ ಅವರ ಕಲಾಕೃತಿಗಳು ಅಜರಾಮರವಾಗಿವೆ. ಹಾಗೆ ಆಗುವ ಧ್ಯೇಯವಿರಬೇಕೋ ಅಥವಾ ದೈನಿಕ ಪತ್ರದಲ್ಲಿ ಹೆಸರು ಬಂದು ಮುಂದೆ ಆ ದೈನಿಕ ಪತ್ರದ ಗತಿಯನ್ನು ಸೇರುವದೇ ಧ್ಯೇಯವಿರಬೇಕೋ ಇದನ್ನು ನಾವು ಯೋಚಿಸಲಿಕ್ಕೆ ಬೇಕು. ಬರೆಯುವ ಪುರಸತಿಗೆ ಇಲ್ಲದೆ, ಈಮ್ಯಾಲಾದ ಬೆಕ್ಕು ಮೂಲೆಮೂಲೆ ಸುತ್ತುವಂತೆ, ಲೇಖಕರು ವೃತ್ತ ಪತ್ರಗಳ ಕಚೇರಿಗೆ ಎಡತಾಕಿದರೆ ಅದರಲ್ಲಿ ಯಾರಿಗೆ ಗೌರವ? ಆದರಿಂದ ಯಾವ ಉದ್ದೇಶ ಸಾಧನ? ಈವರೆಗೆ ಆದ ಉತ್ತಮೋತ್ತಮ ಲೇಖಕರನೇಕರು, ಈಗ್ಯೂ ಒಂದೇನಾದರೂ ಬರೆಯಬೇಕಾದರೆ ನಾಲ್ಕುಸಾರೆ ತಿದ್ದುತ್ತಾರೆ. ಎಷ್ಟೋಬಾರಿ ಹರಿದೊಗೆದು ಮತ್ತೆ ಬರೆಯುತ್ತಾರೆ. ಇದನ್ನೆಲ್ಲ ನಾವು ಲಕ್ಷಿಸಲಿಕ್ಕೆ ಬೇಕು.

ಹಲವು ಲೇಖಕರು ಲೋಕಪ್ರಿಯರಾಗಬಯಸಿ ಬೇಕಾದ್ದನ್ನು ಬರೆಯುವರು. ಕೇವಲ ರಂಜನೆಯೇ ಇವರ ಉದ್ದೇಶವಿರಬಹುದು. ಲೇಖಕರ ಈ ವೃತ್ತಿಯು ನಮ್ಮನ್ನು ಹಾಳುಮಾಡದೆ ಇರದು. ಲೋಕಪ್ರಿಯವಾಗುವದೇ ಲೇಖಕನ ಧ್ಯೇಯವಲ್ಲ. ಲೇಖಕನ ಧ್ಯೇಯವು ಇದಕ್ಕೂ ಉಚ್ಚತರವಾದುದು, ಒಟ್ಟಿಗೆ ಜನಮನಗಳ ಮಟ್ಟವನ್ನು ಎಲ್ಲ ರೀತಿಯಿಂದ ಮೇಲಕ್ಕೇರಿಸುವದೇ ಅವನ ಧ್ಯೇಯವೆಂದು ಹೇಳಬಹುದು. ಅನೇಕ ಉತ್ತಮ ಲೇಖಕರು ಲೋಕಪ್ರಿಯರಿರಲಿಲ್ಲ. ಈಗ ಲೋಕಪ್ರಿಯರಾದ ಅನೇಕ ಲೇಖಕರು ಲೋಕಪ್ರಿಯರಿರಲಿಲ್ಲ. ಇವನ್ನು ನಾವು ಲಕ್ಷಿಸಲಿಕ್ಕೆಬೇಕು. ಸತ್ಯದೃಷ್ಟಿ, ಜನರ ಭಾವಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ, ಸಾಹಿತ್ಯಕಲೆ, ಇವು ಲೇಖಕರಲ್ಲಿ ಮುಖ್ಯವಾಗಿ ಅವಶ್ಯ. ಲೇಖಕರಿಗೆ ಅನ್ವಯಿಸುವವು. ಅದರ ಬಗ್ಗೆ ಬೇರೆ ಬರೆಯ ಬೇಕಾಗಿಲ್ಲ.

ಇನ್ನು ನಮ್ಮ ವಾಚಕರನ್ನು ನಿರೀಕ್ಷಿಸಿದರೆ ಅಲ್ಲಿಯೂ ಇಷ್ಟವಾದ ವೃತ್ತಿ ಕಂಡು ಬರುವದಿಲ್ಲ. ಪುಸ್ತಕ, ವೃತ್ತಪತ್ರ ಇವುಗಳ ಬಗ್ಗೆ ನಮ್ಮ ನೀತಿಯು ಬಹಳ ನಿಂದಾಸ್ಪದವಿದೆ. ಪುಸ್ತಕ ಕೊಳ್ಳಬಾರದು, ಕೊಂಡರೆ ಓದಬಾರದು, ಓದಿದರೆ ನೆನಪಿಡಬಾರದು. ಕಡತಂದ ಪುಸ್ತಕ ತಿರುಗಿ ಕೊಡಬಾರದು, ತಂದ ಪುಸ್ತಕ ವ್ಯವಸ್ಥೆಯಿಂದ ಇಡಬಾರದು; ಈನೀತಿಯನ್ನು ಅನುಸರಿಸುವವರೇ ಬಹಳ! ಈಗ ಮನೆ ಮನೆ ಮಾರಾಟಕ್ಕೆ ಪುಸ್ತಕಗಳು ಬರುವದನ್ನು ಕಂಡು ವಾಚಕರು ಕಾಯಿಪಲ್ಲೆಯಂತೆ ಅವರ ಧಾರಣೆಕೇಳಲು ಪ್ರಾರಂಭಿಸಿದ್ದಾರೆ. ವೃತ್ತಪತ್ರ ವಾಚಕರ ಗತಿಯೂ ಇದೇ. 'ನಿಮ್ಮಲ್ಲಿ ವೃತ್ತಪತ್ರ ಬರುತ್ತಿದೆಯೋ' ಎಂದು ಕೇಳಿದರೆ, ನಮ್ಮ ಓಣಿಯಲ್ಲಿ ಬರುತ್ತಿದೆ ಎಂದು ಹೇಳುವವರು ಅನೇಕರು ಸಿಗುವರು. ವೃತ್ತಪತ್ರವೆಂಬುದೊಂದು ತಾವು ಸ್ವತಃ ಕೊಂಡು ಓದತಕ್ಕ ವಿಷಯ ಎಂಬುದನ್ನು ನಮ್ಮವರು ಇನ್ನೂ ಅರಿತುಕೊಂಡಿಲ್ಲ. ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಲ್ಲಿ ನಾವು ನೋಡಿದರೆ ಕೂಲಿಕಾರರ ವೃತ್ತಿಯು ಗಂಡಹೆಂಡರು ಕೂಡ ಪ್ರತ್ಯೇಕ ಪತ್ರಗಳನ್ನು ಕೊಂಡು ಓದುವ ಪರಿಪಾಠವಿದೆ. ಕೊಳ್ಳದ ಇವ್ವ ಬಗ್ಗೆ

ಈಗ ನಮ್ಮಲ್ಲಿ ಸ್ವಲ್ಪ ನಾಚಲಾರಂಭಿಸಿದ್ದಾರೆ. ಇದೇ ಒಳ್ಳೇ ಲಕ್ಷಣವೆಂದು ಹೇಳಬೇಕು.

### ವಿಮರ್ಶಕರು

ಲೇಖಕರು, ವಾಚಕರು ಇವರ ನಡುವೆ ವಿಮರ್ಶಕರದೊಂದು ವರ್ಗವಿದೆ. ಸಾಹಿತ್ಯದಲ್ಲಿಯ ಒಳಿತು ಕೆಡಕುಗಳನ್ನು ಹುಡುಕಿ, ನಿರ್ದಾಕ್ಷಿಣ್ಯವಾಗಿ ಮುಂದಿಡುವವರಿವರು. ನಮ್ಮಲ್ಲಿ ಈ ವಿಮರ್ಶಕ ಕಲೆಯು ಇನ್ನೂ ಅಷ್ಟೊಂದು ವಿಕಸಿತವಾಗಿಲ್ಲ. ಇನ್ನೂ 'ಅಹೋರೂಪ ಮಹೋಧ್ವನಿ' ಯಂಥ ವಿಮರ್ಶೆಯೇ ನಮ್ಮಲ್ಲಿ ಬಹಳವಿದೆ. ಇಲ್ಲದ ಗುಣಗಳ ಆರೋಪ, ಇದ್ದ ದೋಷಗಳ ಅನಾವಿಷ್ಕರಣ, ಇವೇ ಮುಖ್ಯವಾಗಿ ಈಗಿನ ವಿಮರ್ಶೆಯಲ್ಲಿ ಕಂಡುಬರುವುವು. ಮೊದಮೊದಲೇನೋ ಇದು ಆವಶ್ಯಕವಿರಬಹುದು. ಆದರೆ ಈಗ ವಿಮರ್ಶಕರು ಹೆಚ್ಚು ದಾಕ್ಷಿಣ್ಯರಹಿತರಾಗಿರಲಿಕ್ಕೆಬೇಕು. ಇದರಲ್ಲಿ ಇನ್ನೊಂದು ಭೆಯವಿದೆ. ಪುಸ್ತಕಗಳೇ ವಿಮರ್ಶೆಗೆ ಬಾರದೆ ಹೋಗಬಹುದು ! ಕೊಂಡಾದರೂ ಇಂಥ ವಿಮರ್ಶೆಮಾಡುವ ಧೈರ್ಯದಿಂದ ನಿಜವಾದ ವಿಮರ್ಶಕರು ಮುಂದೆ ಸಾಗಲಿಕ್ಕೆ ಬೇಕು. ಯಾವದೊಂದು ಪುಸ್ತಕದ ಧ್ಯೇಯ ಉದ್ದೇಶಗಳೇನು, ಅವೆಷ್ಟರ ಮಟ್ಟಿಗೆ ಸಾಧಿಸಿವೆ, ಲೇಖಕನ ಯೋಗ್ಯತೆ ಯೇನಿದೆ, ವಿಷಯಪ್ರತಿಪಾದನವು ಹೇಗಿದೆ, ಶೈಲಿ, ಪುಸ್ತಕದ ಅಚ್ಚು, ಬೆಲೆ ಇತ್ಯಾದಿ ಸರ್ವ ವಿಷಯಗಳನ್ನು ಕೇವಲ ಸತ್ಯಪಕ್ಷಪಾತದಿಂದ ಸಮಾಜಹಿತದೃಷ್ಟಿಯಿಂದ, ಅಭ್ಯಸಿಸಿ ಬರೆಯುವ ವಿಮರ್ಶಕರುನಮಗೆ ಈಗ ಬೇಕಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ವಿಮರ್ಶಕನ ಸ್ಥಾನವು ಬಹಳ ಮಹತ್ವದ್ದಿದೆ.

ಸಹೋದರ ಸಹೋದರಿಯರೇ, ಸಾಹಿತಿಯಲ್ಲದ ಸಾಮಾನ್ಯ ಜನರಲ್ಲಿ ಒಬ್ಬನಾದ ನನ್ನನ್ನು ಅಧ್ಯಕ್ಷಮಾಡಿದ ತಪ್ಪಿಗೆ, ಈವರೆಗೆ ಇಲ್ಲಿ ಕೂಡ್ರಿಸಿ ನಾನು ಈಗ ನಿಮಗೆ ಸಾಕಷ್ಟು ಪ್ರಾಯಶ್ಚಿತ್ತ ಕೊಟ್ಟಿದ್ದೇನೆ ! ಜನಸಾಮಾನ್ಯರಿಗೆ ಹೊಳೆಯತಕ್ಕ ನಾಲ್ಕುಮಾತುಗಳನ್ನೇ ನಿಮ್ಮೆದುರಿಗೆ ಇಟ್ಟಿದ್ದೇನೆ. ಅವುಗಳನ್ನೆಲ್ಲ ಸಮಾಲೋಚಿಸಿ, ಕೊನೆಯ ನಾಲ್ಕು ಸೂಚನೆಗಳನ್ನು ಕೊಟ್ಟು ಇನ್ನು ವಿರಮಿಸಬೇಕೆನ್ನುತ್ತೇನೆ.

ನಮ್ಮ ನುಡಿಗೆ ಅಂದರೆ ನಮ್ಮ ಪ್ರಾಂತದ ನುಡಿಗೆ, ಜನಸಾಮಾನ್ಯರ ನುಡಿಗೆ, ನಾವು ಅತ್ಯಂತ ಮಹತ್ವವನ್ನು ಕೊಡಲಿಕ್ಕೆಬೇಕು. ಈ ದೇಹದ ಜೀವನಕ್ಕೆ ಉಸಿರು ಇದ್ದಂತೆ, ನಮ್ಮ ಜೀವನಕ್ಕೆ ನಮ್ಮನುಡಿ. ಯಾರು ನುಡಿಗೆ ಎಷ್ಟು ಮಹತ್ವ ಕೊಡಬೇಕೆಂಬುದನ್ನು ಸಮದೃಷ್ಟಿಯಿಂದ ನಿರ್ಧರಿಸಿ, ಅದರಂತೆ ನಾವು ವ್ಯವಹಾರದಲ್ಲಿ ನಡೆದರೆ ನುಡಿಗಳ ತಾಕಲಾಟವು ಕಡಮೆಯಾಗಬಲ್ಲದು. ಆ ವಿಷಯದಲ್ಲಿ ಪ್ರಾಂತಿಕ ಭಾಷೆಯೇ ಪ್ರಧಾನ ಎಂದು ತಿಳಿಯುವದು ಅತ್ಯವಶ್ಯ. ನುಡಿಯೇ ರುಚಿಕಟ್ಟಾದ ಸುಂದರರೂಪವನ್ನು ಧರಿಸಿತೆಂದರೆ ಅದು ಸಾಹಿತ್ಯವೆನಿಸುವದು. ಕನ್ನಡನುಡಿ ಹಾಗೂ ನಮ್ಮ ವಿಲಕ್ಷಣವಾದ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೂಲಕ ನಮ್ಮನುಡಿ ಹಾಗೂ ಸಾಹಿತ್ಯಗಳ ಬೆಳೆವಣಿಗೆಗೆ ಹಲವು ಅಡ್ಡಿಗಳುಂಟಾಗಿವೆ. ಆದರೆ ಅಭಿಮಾನ ಶೂನ್ಯತೆ ನಮ್ಮ ಜಾಡ್ಯ, ಇವುಗಳನ್ನು ಬಿಟ್ಟು ನಾವು ಸಾಗಿದರೆ ಇತರ ಸಾಹಿತ್ಯಗಳಷ್ಟೆ ನಮ್ಮ ಸಾಹಿತ್ಯವು ಮುಂದುವರಿಯಬಹುದೆಂಬ ಭರವಸೆ ನನಗಿದೆ. ನಾವು ನಮ್ಮ ಸದ್ಯದ ಮಂದ ಪ್ರಗತಿಯಿಂದ ಸಂತುಷ್ಟರಾಗಿರುವದು ಮಾತ್ರ ಘಾತುಕವಿರುವದು. ನಾವು ಉಚ್ಚಧ್ಯೇಯಗಳನ್ನಿಟ್ಟುಕೊಂಡು ಅದನ್ನು ಮುಟ್ಟಲು ಹವಣಿಸಬೇಕು. ನುಡಿ ಮತ್ತು ಸಾಹಿತ್ಯಗಳ ವಿಷಯದಲ್ಲಿ ವ್ಯವಹಾರ ಮಾಡುವವರು ಮುಖ್ಯವಾಗಿ ವಾಗ್ಮಿಗಳು, ಲೇಖಕರು, ವಾಚಕರು ಮತ್ತು ವಿಮರ್ಶಕರು. ಅವರೆಲ್ಲರೂ ಉಚ್ಚ ಭಾವನೆಗಳಿಂದ ಪ್ರೇರಿತರಿರಲಿಕ್ಕೆಬೇಕು. ಅಂದರೆ ಸಮಾಜಕ್ಕೆ ಸಾಹಿತ್ಯದಿಂದ ನಿಜವಾದ ಲಾಭವಾಗುವದು. ಇನ್ನು ಸದ್ಯದ ನಮ್ಮ ನುಡಿ ಹಾಗು ಸಾಹಿತ್ಯಗಳ ಸ್ಥಿತಿ ನೋಡಿ ನಮ್ಮ ಧ್ಯೇಯದತ್ತ ಲಕ್ಷ್ಯವಿಟ್ಟು ವಿಚಾರಿಸಿದರೆ ನಾವು ಸದ್ಯದಲ್ಲಿ ಯಾವ ಕಾರ್ಯಕ್ರಮವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂಬುದನ್ನು ಸಂಕ್ಷೇಪದಲ್ಲಿ ಸೂಚಿಸುತ್ತೇನೆ.

### ಸೂಚನೆಗಳು

ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಒಪ್ಪಿ, ಮುಂಬಯಿ ಮದ್ರಾಸ ಸರಕಾರದವರು ಕರ್ನಾಟಕ ಪ್ರಾಂತೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದ್ದು ನಮ್ಮ ಧ್ಯೇಯಸಾಧನೆಗೆ ಅನುಕೂಲವಾದ್ದರಿಂದ ನಾವು ಆಯಾ ಸರಕಾರದವರನ್ನು ಅಭಿನಂದಿಸುವದು ನಮ್ಮ ಕರ್ತವ್ಯ.

ಸಾಹಿತ್ಯ ಪರಿಷತ್ ಸಂಸ್ಥೆಯನ್ನು ಸದಸ್ಯ ಸಂಖ್ಯೆ, ಧನ, ಕಾರ್ಯಕರ್ತರು ಇವುಗಳಿಂದ ಹೆಚ್ಚು ಬಲವುಳ್ಳದ್ದನ್ನಾಗಿ ಮಾಡಲಿಕ್ಕೆಬೇಕು.

ನಮ್ಮ ಸಾಹಿತ್ಯ ಪರಿಷತ್ತಿನ ಉದ್ದೇಶ ಮಾಲಿಕೆಯನ್ನು ನೋಡಿದರೆ ಕನ್ನಡ ಸಾಹಿತ್ಯದ ಬಗ್ಗೆ ಇದಕ್ಕೂ ಹೆಚ್ಚಿನದೇನಾದರೂ ಆಗಬೇಕು ಎಂದು ಹೇಳುವಂತೆ ಏನೂ ಉಳಿದಿಲ್ಲ. ಆ ಉದ್ದೇಶಗಳಲ್ಲಿಯ ಹಲವನ್ನೆತ್ತಿ ಸಾಧಿಸಲು ಯತ್ನಿಸುವದು ಅವಶ್ಯ ಎಂದು ಹೇಳಬಹುದು.

ಕನ್ನಡದಲ್ಲಿ ಅತ್ಯುಚ್ಚ ಸಾಹಿತ್ಯವು ನಿರ್ಮಾಣವಾಗಬೇಕೆಂದು ನಾವು ಬಯಸುವಂತೆ, ಕರ್ನಾಟಕದಲ್ಲಿಯ ಪ್ರತಿಯೊಬ್ಬನಿಗೆ ಕನ್ನಡ ಓದು ಬರಹವು ಬರುವಂತೆ ಮತ್ತು ಸರ್ವಸಾಮಾನ್ಯ ಜ್ಞಾನವೆಲ್ಲ ಅವನಿಗೆ ಕನ್ನಡದಲ್ಲಿ ದೊರಕುವಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯವೆಂದು ನಾವು ತಿಳಿದು ಸಾಗಲಿಕ್ಕೆಬೇಕು. ಈ ವಿಷಯದತ್ತ ನಾವು ಇನ್ನೂ ಅಷ್ಟು ಲಕ್ಷ್ಯಕೊಟ್ಟಿಲ್ಲ. ಕೊನೆಗೆ ಸರಕಾರದವರೇ ಇಂಥ ಕೆಲಸಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತು ನಿಜ. ಆದರೆ ಸರಕಾರವು ಈ ಕೆಲಸವನ್ನು ಕೈಗೊಳ್ಳುವಂತೆ ಮಾಡುವದು ನಮ್ಮ ದೀರ್ಘಪ್ರಯತ್ನದಿಂದಲೇ ಶಕ್ಯವು. ಬರೇ ನಾಲ್ಕು ಒಳ್ಳೇ ಕಾವ್ಯ ಪುಸ್ತಕಗಳು ಹೊರಟರೆ ಅದರಿಂದ ನಮ್ಮ ಉದ್ಧಾರವಾಗುವುದಿಲ್ಲ. ಜನಸಾಮಾನ್ಯರ ಕಾಲವಿದು. ಆದುದರಿಂದ ಎಲ್ಲರಿಗೂ ನುಡಿಯ ಜ್ಞಾನವಾದಾಗಲೆ ಮುಂದೆ ಆ ತಳಹದಿಯಮೇಲೆ ನಮ್ಮ ಸಾಹಿತ್ಯಮಂದಿರವನ್ನು ಸುವ್ಯವಸ್ಥಿತವಾಗಿ ಕಟ್ಟಲು ಆಸ್ಪದವಿರುವದು.

ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳು ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ. ಮೈಸೂರು ವಿಶ್ವವಿದ್ಯಾಲಯದವರು ಆ ರೀತಿ ಪ್ರಯತ್ನಮಾಡುತ್ತ ಹೋದಲ್ಲಿ ಅದು ಬೇಗ ಆಗುವದು ಕಠಿಣವಲ್ಲ. ಈಗ ಧಾರವಾಡದಲ್ಲಿ ಮುಂಬೈ ಸರಕಾರದವರು ಕನ್ನಡ ಸಂಶೋಧನೆಯ ಬಗ್ಗೆ ಒಂದು ಸಂಸ್ಥೆಯನ್ನು ಹೊರಡಿಸಬೇಕೆಂದಿದ್ದಾರೆ. ಅದರಲ್ಲಿಯೂ ಒಂದು ಪುಸ್ತಕಾಲಯದ ಯೋಜನೆ ಇದೆ. ಅಲ್ಲಿಯೂ ಪ್ರಯತ್ನಪಟ್ಟರೆ ಫಲಕಾರಿಯಾಗಬಹುದು.

ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಮಾಡುವ ವಿಚಾರವು ಒಮ್ಮೆ ಒಳ್ಳೆ ಜೋರಿನಿಂದ ಸಾಗಿ ಮುಂದೆ ಅದು ಮತ್ತೆ ತಣ್ಣಗಾಗಿದೆ. ಈ ಪ್ರಯತ್ನವನ್ನು ಪುನಃ ಮಾಡುವದು ಅವಶ್ಯವಿದೆ. ಅದೇ ರೀತಿ ಮುಂಬೈ ಇಲಾಖೆಯವರು ಹಾಗೂ ಮುಂಬೈ ವಿಶ್ವವಿದ್ಯಾಲಯದವರು ಈ ತತ್ವವನ್ನು ಒಪ್ಪಿರುವರು. ಆದರೆ ಅದು ಎಂದು ಆಗುವದೋ ತಿಳಿಯದು. ಈಗ ಇದ್ದ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ತಕ್ಕುದಾದ ಶ್ರೇಷ್ಠ ಸ್ಥಾನವು ಸಿಕ್ಕುವಂತೆ ನಾವು ಆಂದೋಲನವನ್ನು ನಡಸಲಿಕ್ಕೆಬೇಕು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕೂಡ ಇನ್ನೂ ಕನ್ನಡಕ್ಕೆ ಮುಖ್ಯ ಸ್ಥಾನವಿಲ್ಲ.

ಇದೇ ಸಂದರ್ಭದಲ್ಲಿ ಪ್ರೊ. ವಿಜಯೇಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಧಾರವಾಡದಲ್ಲಿ ಹೋದ ೮-೯ನೆಯ ತಾರೀಖಿನ ದಿವಸ ನೆರೆದ ಕರ್ನಾಟಕ ಶಿಕ್ಷಣ ಪರಿಷತ್ತಿನವರು ನೇಮಿಸಿದ ಮಂಡಳಕ್ಕೆ ನಾವೆಲ್ಲರೂ ಸಹಾಯ ಮಾಡುವದು ಅತ್ಯವಶ್ಯವಿರುವದು.

ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದು ನಮ್ಮೆದುರಿಗೆ ಮೇಲಿಂದ ಮೇಲೆ ಬರುತ್ತಿದೆ. ನನಗೆ ತಿಳಿದ ಮಟ್ಟಿಗೆ, ಅಲ್ಲಿ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗುವದು. ಅಲ್ಲಿ ಹೋಗಿ ಒಂದು ಶಾಲೆಯನ್ನೋ ವಾಚನಾಲಯವನ್ನೋ ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ, ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ ಎಂದು ನನ್ನ

ಈಗ ನಮ್ಮಲ್ಲಿ ಸ್ವಲ್ಪ ನಾಚಲಾರಂಭಿಸಿದ್ದಾರೆ. ಇದೇ ಒಳ್ಳೇ ಲಕ್ಷಣವೆಂದು ಹೇಳಬೇಕು.

## ವಿಮರ್ಶಕರು

ಲೇಖಕರು, ವಾಚಕರು ಇವರ ನಡುವೆ ವಿಮರ್ಶಕರದೊಂದು ವರ್ಗವಿದೆ. ಸಾಹಿತ್ಯದಲ್ಲಿಯ ಒಳಿತು ಕೆಡಕುಗಳನ್ನು ಹುಡುಕಿ, ನಿರ್ದಾಕ್ಷಿಣ್ಯವಾಗಿ ಮುಂದಿಡುವವರಿವರು. ನಮ್ಮಲ್ಲಿ ಈ ವಿಮರ್ಶಕ ಕಲೆಯು ಇನ್ನೂ ಅಷ್ಟೊಂದು ವಿಕಸಿತವಾಗಿಲ್ಲ. ಇನ್ನೂ 'ಅಹೋರೂಪ ಮಹೋಧ್ವನಿ' ಯಂಥ ವಿಮರ್ಶೆಯೇ ನಮ್ಮಲ್ಲಿ ಬಹಳವಿದೆ. ಇಲ್ಲದ ಗುಣಗಳ ಆರೋಪ, ಇದ್ದ ದೋಷಗಳ ಅನಾವಿಷ್ಕರಣ, ಇವೇ ಮುಖ್ಯವಾಗಿ ಈಗಿನ ವಿಮರ್ಶೆಯಲ್ಲಿ ಕಂಡುಬರುವುವು. ಮೊದಮೊದಲೇನೋ ಇದು ಆವಶ್ಯಕವಿರಬಹುದು. ಆದರೆ ಈಗ ವಿಮರ್ಶಕರು ಹೆಚ್ಚು ದಾಕ್ಷಿಣ್ಯರಹಿತರಾಗಿರಲಿಕ್ಕೆಬೇಕು. ಇದರಲ್ಲಿ ಇನ್ನೊಂದು ಭಯವಿದೆ. ಪುಸ್ತಕಗಳೇ ವಿಮರ್ಶೆಗೆ ಬಾರದೆ ಹೋಗಬಹುದು! ಕೊಂಡಾದರೂ ಇಂಥ ವಿಮರ್ಶೆಮಾಡುವ ಧೈರ್ಯದಿಂದ ನಿಜವಾದ ವಿಮರ್ಶಕರು ಮುಂದೆ ಸಾಗಲಿಕ್ಕೆ ಬೇಕು. ಯಾವದೊಂದು ಪುಸ್ತಕದ ಧ್ಯೇಯ ಉದ್ದೇಶಗಳೇನು, ಅವೆಷ್ಟರ ಮಟ್ಟಿಗೆ ಸಾಧಿಸಿವೆ, ಲೇಖಕನ ಯೋಗ್ಯತೆ ಯೇನಿದೆ, ವಿಷಯಪ್ರತಿಪಾದನವು ಹೇಗಿದೆ, ಶೈಲಿ, ಪುಸ್ತಕದ ಅಚ್ಚು, ಬೆಲೆ ಇತ್ಯಾದಿ ಸರ್ವ ವಿಷಯಗಳನ್ನು ಕೇವಲ ಸತ್ಯಪಕ್ಷಪಾತದಿಂದ ಸಮಾಜಹಿತದೃಷ್ಟಿಯಿಂದ, ಅಭ್ಯಸಿಸಿ ಬರೆಯುವ ವಿಮರ್ಶಕರುನಮಗೆ ಈಗ ಬೇಕಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ವಿಮರ್ಶಕನ ಸ್ಥಾನವು ಬಹಳ ಮಹತ್ವದ್ದಿದೆ.

ಸಹೋದರ ಸಹೋದರಿಯರೇ, ಸಾಹಿತಿಯಲ್ಲದ ಸಾಮಾನ್ಯ ಜನರಲ್ಲಿ ಒಬ್ಬನಾದ ನನ್ನನ್ನು ಅಧ್ಯಕ್ಷಮಾಡಿದ ತಪ್ಪಿಗೆ, ಈವರೆಗೆ ಇಲ್ಲಿ ಕೂಡ್ರಿಸಿ ನಾನು ಈಗ ನಿಮಗೆ ಸಾಕಷ್ಟು ಪ್ರಾಯಶ್ಚಿತ್ತ ಕೊಟ್ಟಿದ್ದೇನೆ! ಜನಸಾಮಾನ್ಯರಿಗೆ ಹೊಳೆಯತಕ್ಕ ನಾಲ್ಕುಮಾತುಗಳನ್ನೇ ನಿಮ್ಮೆದುರಿಗೆ ಇಟ್ಟಿದ್ದೇನೆ. ಅವುಗಳನ್ನೆಲ್ಲ ಸಮಾಲೋಚಿಸಿ, ಕೊನೆಯು ನಾಲ್ಕು ಸೂಚನೆಗಳನ್ನು ಕೊಟ್ಟು ಇನ್ನು ವಿರಮಿಸಬೇಕೆನ್ನುತ್ತೇನೆ.

ನಮ್ಮ ನುಡಿಗೆ ಅಂದರೆ ನಮ್ಮ ಪ್ರಾಂತದ ನುಡಿಗೆ, ಜನಸಾಮಾನ್ಯರ ನುಡಿಗೆ, ನಾವು ಅತ್ಯಂತ ಮಹತ್ವವನ್ನು ಕೊಡಲಿಕ್ಕೆಬೇಕು. ಈ ದೇಹದ ಜೀವನಕ್ಕೆ ಉಸಿರು ಇದ್ದಂತೆ, ನಮ್ಮ ಜೀವನಕ್ಕೆ ನಮ್ಮನುಡಿ. ಯಾರು ನುಡಿಗೆ ಎಷ್ಟು ಮಹತ್ವ ಕೊಡಬೇಕೆಂಬುದನ್ನು ಸಮದೃಷ್ಟಿಯಿಂದ ನಿರ್ಧರಿಸಿ, ಆದರಂತೆ ನಾವು ವ್ಯವಹಾರದಲ್ಲಿ ನಡೆದರೆ ನುಡಿಗಳ ತಾಕಲಾಟವು ಕಡಮೆಯಾಗಬಲ್ಲದು. ಆ ವಿಷಯದಲ್ಲಿ ಪ್ರಾಂತಿಕ ಭಾಷೆಯೇ ಪ್ರಧಾನ ಎಂದು ತಿಳಿಯುವದು ಅತ್ಯವಶ್ಯ. ನುಡಿಯೇ ರುಚಿಕಟ್ಟಾದ ಸುಂದರರೂಪವನ್ನು ಧರಿಸಿತೆಂದರೆ ಅದು ಸಾಹಿತ್ಯವೆನಿಸುವದು. ಕನ್ನಡನುಡಿ ಹಾಗೂ ನಮ್ಮ ವಿಲಕ್ಷಣವಾದ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೂಲಕ ನಮ್ಮನುಡಿ ಹಾಗೂ ಸಾಹಿತ್ಯಗಳ ಬೆಳೆವಣಿಗೆಗೆ ಹಲವು ಅಡ್ಡಿಗಳುಂಟಾಗಿವೆ. ಆದರೆ ಅಭಿಮಾನ ಶೂನ್ಯತೆ ನಮ್ಮ ಜಾಡ್ಯ, ಇವುಗಳನ್ನು ಬಿಟ್ಟು ನಾವು ಸಾಗಿದರೆ ಇತರ ಸಾಹಿತ್ಯಗಳಷ್ಟೆ ನಮ್ಮ ಸಾಹಿತ್ಯವು ಮುಂದುವರಿಯಬಹುದೆಂಬ ಭರವಸೆ ನನಗಿದೆ. ನಾವು ನಮ್ಮ ಸದ್ಯದ ಮಂದ ಪ್ರಗತಿಯಿಂದ ಸಂತುಷ್ಟರಾಗಿರುವದು ಮಾತ್ರ ಘಾತುಕವಿರುವದು. ನಾವು ಉಚ್ಚಧ್ಯೇಯಗಳನ್ನಿಟ್ಟುಕೊಂಡು ಅದನ್ನು ಮುಟ್ಟಲು ಹವಣಿಸಬೇಕು. ನುಡಿ ಮತ್ತು ಸಾಹಿತ್ಯಗಳ ವಿಷಯದಲ್ಲಿ ವ್ಯವಹಾರ ಮಾಡುವವರು ಮುಖ್ಯವಾಗಿ ವಾಗ್ಮಿಗಳು, ಲೇಖಕರು, ವಾಚಕರು ಮತ್ತು ವಿಮರ್ಶಕರು. ಅವರೆಲ್ಲರೂ ಉಚ್ಚ ಭಾವನೆಗಳಿಂದ ಪ್ರೇರಿತರಿರಲಿಕ್ಕೆಬೇಕು. ಅಂದರೆ ಸಮಾಜಕ್ಕೆ ಸಾಹಿತ್ಯದಿಂದ ನಿಜವಾದ ಲಾಭವಾಗುವದು. ಇನ್ನು ಸದ್ಯದ ನಮ್ಮ ನುಡಿ ಹಾಗು ಸಾಹಿತ್ಯಗಳ ಸ್ಥಿತಿ ನೋಡಿ ನಮ್ಮ ಧ್ಯೇಯದತ್ತ ಲಕ್ಷ್ಯವಿಟ್ಟು ವಿಚಾರಿಸಿದರೆ ನಾವು ಸದ್ಯದಲ್ಲಿ ಯಾವ ಕಾರ್ಯಕ್ರಮವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂಬುದನ್ನು ಸಂಕ್ಷೇಪದಲ್ಲಿ ಸೂಚಿಸುತ್ತೇನೆ.

## ಸೂಚನೆಗಳು

ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಒಪ್ಪಿ, ಮುಂಬಯಿ ಮದ್ರಾಸ ಸರಕಾರದವರು ಕರ್ನಾಟಕ ಪ್ರಾಂತೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದ್ದು ನಮ್ಮ ಧ್ಯೇಯಸಾಧನೆಗೆ ಅನುಕೂಲವಾದ್ದರಿಂದ ನಾವು ಆಯಾ ಸರಕಾರದವರನ್ನು ಅಭಿನಂದಿಸುವದು ನಮ್ಮ ಕರ್ತವ್ಯ.

ಸಾಹಿತ್ಯ ಪರಿಷತ್ ಸಂಸ್ಥೆಯನ್ನು ಸದಸ್ಯ ಸಂಖ್ಯೆ, ಧನ, ಕಾರ್ಯಕರ್ತರು ಇವುಗಳಿಂದ ಹೆಚ್ಚು ಬಲವುಳ್ಳದ್ದನ್ನಾಗಿ ಮಾಡಲಿಕ್ಕೆಬೇಕು.

ನಮ್ಮ ಸಾಹಿತ್ಯ ಪರಿಷತ್ತಿನ ಉದ್ದೇಶ ಮಾಲಿಕೆಯನ್ನು ನೋಡಿದರೆ ಕನ್ನಡ ಸಾಹಿತ್ಯದ ಬಗ್ಗೆ ಇದಕ್ಕೂ ಹೆಚ್ಚಿನದೇನಾದರೂ ಆಗಬೇಕು ಎಂದು ಹೇಳುವಂತೆ ಏನೂ ಉಳಿದಿಲ್ಲ. ಆ ಉದ್ದೇಶಗಳಲ್ಲಿಯ ಹಲವನ್ನೆತ್ತಿ ಸಾಧಿಸಲು ಯತ್ನಿಸುವದು ಅವಶ್ಯ ಎಂದು ಹೇಳಬಹುದು.

ಕನ್ನಡದಲ್ಲಿ ಅತ್ಯುಚ್ಚ ಸಾಹಿತ್ಯವು ನಿರ್ಮಾಣವಾಗಬೇಕೆಂದು ನಾವು ಬಯಸುವಂತೆ, ಕರ್ನಾಟಕದಲ್ಲಿಯ ಪ್ರತಿಯೊಬ್ಬನಿಗೆ ಕನ್ನಡ ಓದು ಬರಹವು ಬರುವಂತೆ ಮತ್ತು ಸರ್ವಸಾಮಾನ್ಯ ಜ್ಞಾನವೆಲ್ಲ ಅವನಿಗೆ ಕನ್ನಡದಲ್ಲಿ ದೊರಕುವಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯವೆಂದು ನಾವು ತಿಳಿದು ಸಾಗಲಿಕ್ಕೆಬೇಕು. ಈ ವಿಷಯದತ್ತ ನಾವು ಇನ್ನೂ ಅಷ್ಟು ಲಕ್ಷ್ಯಕೊಟ್ಟಿಲ್ಲ. ಕೊನೆಗೆ ಸರಕಾರದವರೇ ಇಂಥ ಕೆಲಸಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತು ನಿಜ. ಆದರೆ ಸರಕಾರವು ಈ ಕೆಲಸವನ್ನು ಕೈಗೊಳ್ಳುವಂತೆ ಮಾಡುವದು ನಮ್ಮ ದೀರ್ಘಪ್ರಯತ್ನದಿಂದಲೇ ಶಕ್ಯವು. ಬರೇ ನಾಲ್ಕು ಒಳ್ಳೇ ಕಾವ್ಯ ಪುಸ್ತಕಗಳು ಹೊರಟರೆ ಅದರಿಂದ ನಮ್ಮ ಉದ್ಧಾರವಾಗುವುದಿಲ್ಲ. ಜನಸಾಮಾನ್ಯರ ಕಾಲವಿದು. ಆದುದರಿಂದ ಎಲ್ಲರಿಗೂ ನುಡಿಯ ಜ್ಞಾನವಾದಾಗಲೆ ಮುಂದೆ ಆ ತಳಹದಿಯಮೇಲೆ ನಮ್ಮ ಸಾಹಿತ್ಯಮಂದಿರವನ್ನು ಸುವ್ಯವಸ್ಥಿತವಾಗಿ ಕಟ್ಟಲು ಆಸ್ಪದವಿರುವದು.

ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳು ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ. ಮೈಸೂರು ವಿಶ್ವವಿದ್ಯಾಲಯದವರು ಆ ರೀತಿ ಪ್ರಯತ್ನಮಾಡುತ್ತ ಹೋದಲ್ಲಿ ಅದು ಬೇಗ ಆಗುವದು ಕಠಿಣವಲ್ಲ. ಈಗ ಧಾರವಾಡವಲ್ಲಿ ಮುಂಬೈ ಸರಕಾರದವರು ಕನ್ನಡ ಸಂಶೋಧನೆಯ ಬಗ್ಗೆ ಒಂದು ಸಂಸ್ಥೆಯನ್ನು ಹೊರಡಿಸಬೇಕೆಂದಿದ್ದಾರೆ. ಅದರಲ್ಲಿಯೂ ಒಂದು ಪುಸ್ತಕಾಲಯದ ಯೋಜನೆ ಇದೆ. ಅಲ್ಲಿಯೂ ಪ್ರಯತ್ನಪಟ್ಟರೆ ಫಲಕಾರಿಯಾಗಬಹುದು.

ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಮಾಡುವ ವಿಚಾರವು ಒಮ್ಮೆ ಒಳ್ಳೆ ಜೋರಿನಿಂದ ಸಾಗಿ ಮುಂದೆ ಅದು ಮತ್ತೆ ತಣ್ಣಗಾಗಿದೆ. ಈ ಪ್ರಯತ್ನವನ್ನು ಪುನಃ ಮಾಡುವದು ಅವಶ್ಯವಿದೆ. ಅದೇ ರೀತಿ ಮುಂಬೈ ಇಲಾಖೆಯವರು ಹಾಗೂ ಮುಂಬೈ ವಿಶ್ವವಿದ್ಯಾಲಯದವರು ಈ ತತ್ವವನ್ನು ಒಪ್ಪಿರುವರು. ಆದರೆ ಅದು ಎಂದು ಆಗುವದೋ ತಿಳಿಯದು. ಈಗ ಇದ್ದ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ತಕ್ಕುದಾದ ಶ್ರೇಷ್ಠ ಸ್ಥಾನವು ಸಿಕ್ಕುವಂತೆ ನಾವು ಆಂದೋಲನವನ್ನು ನಡಸಲಿಕ್ಕೆಬೇಕು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕೂಡ ಇನ್ನೂ ಕನ್ನಡಕ್ಕೆ ಮುಖ್ಯ ಸ್ಥಾನವಿಲ್ಲ.

ಇದೇ ಸಂದರ್ಭದಲ್ಲಿ ಪ್ರೊ. ವಿಜಯೇಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಧಾರವಾಡದಲ್ಲಿ ಹೋದ ೮-೯ನೆಯ ತಾರೀಖಿನ ದಿವಸ ನೆರೆದ ಕರ್ನಾಟಕ ಶಿಕ್ಷಣ ಪರಿಷತ್ತಿನವರು ನೇಮಿಸಿದ ಮಂಡಳಕ್ಕೆ ನಾವೆಲ್ಲರೂ ಸಹಾಯ ಮಾಡುವದು ಅತ್ಯವಶ್ಯವಿರುವದು.

ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದು ನಮ್ಮೆದುರಿಗೆ ಮೇಲಿಂದ ಮೇಲೆ ಬರುತ್ತದೆ. ನನಗೆ ತಿಳಿದ ಮಟ್ಟಿಗೆ, ಅಲ್ಲಿ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗುವದು. ಅಲ್ಲಿ ಹೋಗಿ ಒಂದು ಶಾಲೆಯನ್ನೊ, ವಾಚನಾಲಯವನ್ನೊ ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ, ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ ಎಂದು ನನ್ನ

ಘಟವನೆ. ಆ ಕೆಲಸ ಮಾಡುವ ತರುಣ ಕಾರ್ಯಕರ್ತರು ಈಗ ಅವಶ್ಯ. ಅಂಥವರು ಇದ್ದರೆ ಮಾತ್ರ ಕಾರ್ಯವಾಗುವದು. ಇಲ್ಲವಿದ್ದರೆ ನಮ್ಮ ಹೆಜ್ಜೆ ಮುಂದೆ ಬೀಳದು.

ಕನ್ನಡ ಮೊಳೆಗಳ ಜೋಡಣೆಯಲ್ಲಿ ಸುಧಾರಣೆಯಾಗುವದು ಅವಶ್ಯವೆಂದು ಎಲ್ಲರಿಗೂ ಎನಿಸುತ್ತ ಬಂದಿದೆ. ಈಗ ಹೊಸ ಮೊಳೆಗಳನ್ನು ತಯಾರಿಸದೆ, ಇದ್ದುದರಲ್ಲಿ ಯಾವ ಸುಧಾರಣೆ ಮಾಡಬಹುದೆಂಬುವನ್ನು ಪರಿಷತ್ತಿನವರು 'ಕನ್ನಡ ಬಾವುಟ'ದಲ್ಲಿ ತೋರಿಸಿರುವರು. ಅವರಲ್ಲಿಯ ಅನೇಕ ಸೂಚನೆಗಳು ಗ್ರಹಿಸಲು ಯೋಗ್ಯವಾಗಿವೆ. ದಿನಪತ್ರಿಕೆ ಹಾಗೂ ಇತರ ಪತ್ರಿಕೆಯವರು ಅವುಗಳಲ್ಲಿಯ ಹಲವನ್ನಾದರೂ ಸ್ವೀಕರಿಸಿದರೆ ಅದು ಸುಧಾರಣೆಯ ಮೊದಲನೆಯ ಹೆಜ್ಜೆಯಾಗಬಹುದು.

ಕನ್ನಡದಲ್ಲಿ ಲಘುಲಿಪಿ ಹಾಗೂ ಟೈಪ್‌ರೈಟರ್ ಇವುಗಳ ಅತ್ಯಂತ ಆವಶ್ಯಕತೆ ಇದೆ. ಇವು ಆಗುವವರೆಗೆ ನಮ್ಮ ಪತ್ರವ್ಯವಹಾರವನ್ನೂ, ಪರಿಪತ್ರಗಳನ್ನೂ, ಕನ್ನಡದಲ್ಲಿ ಬರೆಯುವದು ಅಶಕ್ಯವೇ ಆಗಿದೆ. ಆದ್ದರಿಂದ ಇತ್ತ ನಾವೆಲ್ಲರೂ ಗಮನಕೊಡಬೇಕು.

ಗ್ರಾಮೋಫೋನ್, ರೇಡಿಯೋ, ಸಿನಿಮಾ ಮುಂತಾದ ಕ್ಷೇತ್ರಗಳಲ್ಲಿಯೂ ಕನ್ನಡಿಗರು ತಮ್ಮ ಹಕ್ಕು-ಬಾಧ್ಯತೆಗಳನ್ನು ಸ್ಥಾಪಿಸಲಿಕ್ಕೆ ಬೇಕು. ಹಾಗೂ ಆ ರೀತಿ ಮಾಡುವವರಿಗೆ ನಾವು ಬಲಕೊಡಬೇಕು.

ಸಹೋದರ ಸಹೋದರಿಯರೇ, ನೀವು ಈವರೆಗೆ ನಾನು ನುಡಿದ ನಾಲ್ಕು ಅಪ್ಪುತಪ್ಪು ಮಾತುಗಳನ್ನು ಕೇಳಿಕೊಂಡಿರಿ. ನಾನು ಸಾಹಿತಿಯಲ್ಲ ಎಂಬುದನ್ನು ಮೊದಲೇ ಹೇಳಿದ್ದೇನೆ. ಈಗ ನಾನು ವಾಗ್ಮಿಯೂ ಅಲ್ಲವೆಂಬುದು ನಿಮಗೆ ತಿಳಿದಿರಲಿಕ್ಕೆ ಸಾಕು. ನಾನು ವಿದ್ವಾಂಸನು ಅಲ್ಲವೆಂಬುದು ನನ್ನ ವಿಷಯವಿವೇಚನೆಯಿಂದ ನಿಮಗೆ ಗೊತ್ತಿರಬೇಕು. ಹೀಗಿದ್ದರೂ ನೀವು ಶಾಂತರೀತಿಯಿಂದ ನಾನು ಹೇಳಿದುದನ್ನು ಕೇಳಿಕೊಂಡಿರಿ. ಇನ್ನು ನಾವೆಲ್ಲರೂ ಈ ಸಮ್ಮೇಳನ ಕಾರ್ಯದಲ್ಲಿ ತೊಡಗಿ, ಪ್ರೇಮದಿಂದ ಸಾಗಿ ಇಲ್ಲಿ ತೀರ್ಮಾನಿಸಿದಂತೆ ನಡಕೊಳ್ಳುವ ನಿರ್ಧಾರ ಮಾಡೋಣ.

ನಾವೆಲ್ಲರೂ ಕನ್ನಡ ನುಡಿಯ ಸೇವಕರು. ಅದರ ಬೆಳವಣಿಗೆ ಆಗುವಂತೆ ವರ್ತಿಸೋಣ. ಅದರ ಬೆಳಕು ಬೀಳುವಂತೆ ನಡೆಯೋಣ. ಅದರ ಕೀರ್ತಿ ದಿಗಂತವಾಗುವಂತೆ ಪ್ರಯತ್ನಿಸೋಣ.

---

## "ಲೋಕಮತ"

### ೨೩ನೆಯ ಕನ್ನಡ ಸಾಹಿತ್ಯ ಸಮ್ಮೇಲನ

ಕನ್ನಡ ಸಾಹಿತ್ಯ ಸಮ್ಮೇಲನದ ೨೩ನೆಯ ಅಧಿವೇಶನವು ಶ್ರೀ. ದಿವಾಕರ ರಂಗನಾಥರಾಯರ ಅಧ್ಯಕ್ಷತೆಯಲ್ಲಿ ಬಳ್ಳಾರಿಯಲ್ಲಿ ಬಹಳ ವಿಜೃಂಭಣೆಯಿಂದ ಸಾಂಗವಾಯಿತು. ಸೊಂಡೂರ ರಾಜೇಸಾಹೇಬರು ಸಮ್ಮೇಳನವನ್ನು ಪ್ರಾರಂಭಿಸಿದರು. ಸರ್ವದರ್ಶನ ತೀರ್ಥ ಪಂಡಿತ ಶ್ರೀ. ನಾಗೇಶ ಶಾಸ್ತ್ರಿಗಳು ಸ್ವಾಗತಾಧ್ಯಕ್ಷರಾಗಿದ್ದರು. ಅನೇಕ ದೃಷ್ಟಿಯಿಂದ ಈ ಸಮ್ಮೇಳನವು ಅಪೂರ್ವವಾಯಿತೆಂದು ಹೇಳಬಹುದು. ರಾಜರಿಂದ ಉದ್ಘಾಟನವಾಯಿತು. ಅಧ್ಯಕ್ಷರ ಭಾಷಣದಲ್ಲಿ ಕೇವಲ ಹಿಂದಿನ ಹಿರಿಮೆಗೇ ಹೆಚ್ಚು ಪ್ರಾಶಸ್ತ್ಯ ಕೊಟ್ಟಿರದೆ ಕನ್ನಡ ನಾಡು, ನುಡಿ, ಸಂಸ್ಕೃತಿ ಸಂವರ್ಧನೆಗಾಗಿ ಕನ್ನಡಿಗರು ಏನು ಮಾಡಬೇಕೆಂಬ ಬಗ್ಗೆ ವ್ಯಾವಹಾರಿಕ ಸೂಚನೆ ಕೊಟ್ಟಿರುವರು. ಪರಿಷತ್ತಿನ ಘಟನೆಯಲ್ಲಿ ಮಹತ್ವದ ತಿದ್ದುಪಡಿಗಳಾದವು. ಕರ್ನಾಟಕವೆಂಬ ಹೆಸರಿನ ಬದಲು ಕನ್ನಡ ಎಂಬ ಹೆಸರು ಗೊತ್ತಾಯಿತು. ಸಮ್ಮೇಳನದಲ್ಲಿ ಸ್ವೀಕೃತವಾದ ಗೊತ್ತುವಳಿಗಳು ಕನ್ನಡ ನಾಡಿನ ಸಾರ್ವಾಂಗಿಕ ಉನ್ನತಿಗೆ ಪರಿಪೋಷಕವಾದಂತಹವಾಗಿವೆ. ಕನ್ನಡಿಗರು ಪರದೇಶ ಪರಭಾಷೆಗಳಿಗೆ ಹಿಂದಿನಂತೆ ಮನಸೋಲದೆ ಸಾಹಿತ್ಯ ಸಮ್ಮೇಲನದ ನೇತೃತ್ವದಲ್ಲಿ ತಮ್ಮ ನಾಡು ನುಡಿಯ ಉದ್ಧಾರ ಮಾಡಿಕೊಳ್ಳಲು ಉಜ್ಜುಗರಾಗಬೇಕೆಂದು ನಾವು ಬಿನ್ನವಿಸುತ್ತೇವೆ.

— ಸಂಯುಕ್ತ ಕರ್ನಾಟಕ.

೧೮೮ನೆಯ ಪುಟದಿಂದ ಮುಂದುವರಿದುದು.

ಪ್ರತಿನಿಧಿ ಮಂಡಲಿ ಕಾರ್ಯಸಮಿತಿ ಇವುಗಳ ಸಂಬಂಧ, ಕಾರ್ಯಕ್ಷೇತ್ರ ಮುಂತಾದ ವಿವರಗಳನ್ನು ಗೊತ್ತುಮಾಡಲು ಕಾರ್ಯಸಮಿತಿಗೆ ಸಕಲ ಸದಸ್ಯ ಅಧಿವೇಶನ ಅಧಿಕಾರ ಕೊಟ್ಟಿದೆ.

**ಈ ಸಲದ ವಾರ್ಷಿಕಾಧಿವೇಶನ**

ಮೇಲೆ ಪ್ರಸ್ತಾಪಿಸಿರುವ ಪರಿಷತ್ತಿನ ಪುನರ್ಘಟನೆಗೆ ಸಂಬಂಧಪಟ್ಟ ತೀರ್ಮಾನಗಳ ದೃಷ್ಟಿಯಿಂದ ಈ ಸಲದ ವಾರ್ಷಿಕಾಧಿವೇಶನ ವಿಶೇಷ ಮಹತ್ವವುಳ್ಳದ್ದಾಗಿದೆ. ಅಲ್ಲದೆ, ಅದರಲ್ಲಿ ಸುಮಾರು ೬೬ಮಂದಿ ಸದಸ್ಯರು ಹಾಜರಿದ್ದರು; ಬೆಂಗಳೂರಿನ ಹೊರಗೆ ನಡೆದ ಯಾವ ಅಧಿವೇಶನದಲ್ಲೂ ಇಷ್ಟು ಮಂದಿ ಸದಸ್ಯರು ಹಾಜರಿರಲಿಲ್ಲವೆಂದು ನಮ್ಮ ನೆನವು. ಮತ್ತು ಬೆಳಗ್ಗೆ ಕಾಲಾತೀತವಾದ್ದರಿಂದ ರಾತ್ರಿಗೆ ಅಧಿವೇಶನವನ್ನು ಮುಂದುವರಿಸಿದಾಗ, ಎಲ್ಲ ಸದಸ್ಯರೂ ೧೦ ಘಂಟೆಯಿಂದ ಮಾರನೆಯ ಬೆಳಗ್ಗೆ ೫ರ ವರೆಗೂ ಒಂದೇ ಸಮನಾಗಿ ಕುಳಿತು, ತಾಳ್ಮೆಯಿಂದಲೂ ಶ್ರದ್ಧೆಯಿಂದಲೂ ಸೌಹಾರ್ದದಿಂದಲೂ ಕೆಲಸ ನಡಸಿಕೊಟ್ಟದ್ದು ಅಭಿನಂದನೀಯವೂ ಅಭಿವಂದನೀಯವೂ ಆಗಿದೆ.

**ಕೃತಜ್ಞತೆ : ಅಭಿನಂದನೆ**

ಪರಿಷತ್ತಿನ ಎಲ್ಲ ಕಾರ್ಯಗಳಲ್ಲೂ ನೆರವಾದ ಹಿಂದಿನ ವರ್ಷದ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಿಗೆಲ್ಲ ಪರಿಷತ್ತಿನ ಪರವಾದ ವಂದನೆಗಳನ್ನು ಸಮರ್ಪಿಸುತ್ತೇವೆ; ಮತ್ತು ಈ ವರ್ಷ ಹೊಸದಾಗಿ ಆಯ್ದು ಬಂದಿರುವ ಪ್ರತಿನಿಧಿಗಳಿಗೂ, ಕಾರ್ಯಸಮಿತಿಯ ಸದಸ್ಯರಿಗೂ, ಉಪಾಧ್ಯಕ್ಷರು ಮತ್ತು ಅಧಿಕಾರಿಗಳಿಗೂ ಅಭಿನಂದನೆಗಳನ್ನು ಅರ್ಪಿಸಲು ಹರ್ಷಿಸುತ್ತೇವೆ.

---

ಭಾವನೆ. ಆ ಕೆಲಸ ಮಾಡುವ ತರುಣ ಕಾರ್ಯಕರ್ತರು ಈಗ ಅವಶ್ಯ. ಅಂಥವರು ಇದ್ದರೆ ಮಾತ್ರ ಕಾರ್ಯವಾಗುವದು. ಇಲ್ಲದಿದ್ದರೆ ನಮ್ಮ ಹೆಜ್ಜೆ ಮುಂದೆ ಬೀಳದು.

ಕನ್ನಡ ಮೊಳೆಗಳ ಜೋಡಣೆಯಲ್ಲಿ ಸುಧಾರಣೆಯಾಗುವದು ಅವಶ್ಯವೆಂದು ಎಲ್ಲರಿಗೂ ಎನಿಸುತ್ತ ಬಂದಿದೆ. ಈಗ ಹೊಸ ಮೊಳೆಗಳನ್ನು ತಯಾರಿಸದೆ, ಇದ್ದುದರಲ್ಲಿ ಯಾವ ಸುಧಾರಣೆ ಮಾಡಬಹುದೆಂಬವನ್ನು ಪರಿಷತ್ತಿನವರು 'ಕನ್ನಡ ಬಾವುಟ'ದಲ್ಲಿ ತೋರಿಸಿರುವರು. ಅವರಲ್ಲಿಯ ಅನೇಕ ಸೂಚನೆಗಳು ಗ್ರಹಿಸಲು ಯೋಗ್ಯವಾಗಿವೆ. ದಿನಪತ್ರಿಕೆ ಹಾಗೂ ಇತರ ಪತ್ರಿಕೆಯವರು ಅವುಗಳಲ್ಲಿಯ ಹಲವನ್ನಾದರೂ ಸ್ವೀಕರಿಸಿದರೆ ಅದು ಸುಧಾರಣೆಯ ಮೊದಲನೆಯ ಹೆಜ್ಜೆಯಾಗಬಹುದು.

ಕನ್ನಡದಲ್ಲಿ ಶೀಘ್ರಲಿಪಿ ಹಾಗೂ ಟೈಪ್‌ರೈಟರ್ ಇವುಗಳ ಅತ್ಯಂತ ಆವಶ್ಯಕತೆ ಇದೆ. ಇವು ಆಗುವವರೆಗೆ ನಮ್ಮ ಪತ್ರವ್ಯವಹಾರವನ್ನೂ, ಪರಿಪತ್ರಗಳನ್ನೂ, ಕನ್ನಡದಲ್ಲಿ ಬರೆಯುವದು ಅಶಕ್ಯವೇ ಆಗಿದೆ. ಅದ್ದರಿಂದ ಇತ್ತ ನಾವೆಲ್ಲರೂ ಗಮನಕೊಡಬೇಕು.

ಗ್ರಾಮೋಫೋನ್, ರೇಡಿಯೋ, ಸಿನಿಮಾ ಮುಂತಾದ ಕ್ಷೇತ್ರಗಳಲ್ಲಿಯೂ ಕನ್ನಡಿಗರು ತಮ್ಮ ಹಕ್ಕು-ಬಾಧ್ಯತೆಗಳನ್ನು ಸ್ಥಾಪಿಸಲಿಕ್ಕೆ ಬೇಕು. ಹಾಗೂ ಆ ರೀತಿ ಮಾಡುವವರಿಗೆ ನಾವು ಬಲಕೊಡಬೇಕು.

ಸಹೋದರ ಸಹೋದರಿಯರೇ, ನೀವು ಈವರೆಗೆ ನಾನು ನುಡಿದ ನಾಲ್ಕು ಅಪ್ಪು ತಪ್ಪು ಮಾತುಗಳನ್ನು ಕೇಳಿಕೊಂಡಿರಿ. ನಾನು ಸಾಹಿತಿಯಲ್ಲ ಎಂಬುದನ್ನು ಮೊದಲೇ ಹೇಳಿದ್ದೇನೆ. ಈಗ ನಾನು ವಾಗ್ಮಿಯೂ ಅಲ್ಲವೆಂಬುದು ನಿಮಗೆ ತಿಳಿದಿರಲಿಕ್ಕೆ ಸಾಕು. ನಾನು ವಿದ್ವಾಂಸನು ಅಲ್ಲವೆಂಬುದು ನನ್ನ ವಿಷಯವಿವೇಚನೆಯಿಂದ ನಿಮಗೆ ಗೊತ್ತಿರಬೇಕು. ಹೀಗಿದ್ದರೂ ನೀವು ಶಾಂತರೀತಿಯಿಂದ ನಾನು ಹೇಳಿದುದನ್ನು ಕೇಳಿಕೊಂಡಿರಿ. ಇನ್ನು ನಾವೆಲ್ಲರೂ ಈ ಸಮ್ಮೇಳನ ಕಾರ್ಯದಲ್ಲಿ ತೊಡಗಿ, ಪ್ರೇಮದಿಂದ ಸಾಗಿ ಇಲ್ಲಿ ತೀರ್ಮಾನಿಸಿದಂತೆ ನಡೆಕೊಳ್ಳುವ ನಿರ್ಧಾರ ಮಾಡೋಣ.

ನಾವೆಲ್ಲರೂ ಕನ್ನಡ ನುಡಿಯ ಸೇವಕರು. ಅದರ ಬೆಳವಣಿಗೆ ಆಗುವಂತೆ ವರ್ತಿಸೋಣ. ಅದರ ಬೆಳಕು ಬೀಳುವಂತೆ ನಡೆಯೋಣ. ಆದರ ಕೀರ್ತಿ ದಿಗಂತವಾಗುವಂತೆ ಪ್ರಯತ್ನಿಸೋಣ.

---

"ಲೋಕಮತ"

## ೨೩ನೆಯ ಕನ್ನಡ ಸಾಹಿತ್ಯ ಸಮ್ಮೇಲನ

ಕನ್ನಡ ಸಾಹಿತ್ಯ ಸಮ್ಮೇಲನದ ೨೩ನೆಯ ಅಧಿವೇಶನವು ಶ್ರೀ. ದಿವಾಕರ ರಂಗನಾಥರಾಯರ ಅಧ್ಯಕ್ಷತೆಯಲ್ಲಿ ಬಳ್ಳಾರಿಯಲ್ಲಿ ಒಳ್ಳೇ ವಿಜೃಂಭಣೆಯಿಂದ ಸಾಂಗವಾಯಿತು. ಸೊಂಡೂರ ರಾಜೇಸಾಹೇಬರು ಸಮ್ಮೇಳನವನ್ನು ಪ್ರಾರಂಭಿಸಿದರು. ಸರ್ವದರ್ಶನ ತೀರ್ಥ ಪಂಡಿತ ವೈ. ನಾಗೇಶ ಶಾಸ್ತ್ರಿಗಳು ಸ್ವಾಗತಾಧ್ಯಕ್ಷರಾಗಿದ್ದರು. ಅನೇಕ ದೃಷ್ಟಿಯಿಂದ ಈ ಸಮ್ಮೇಳನವು ಅಪೂರ್ವವಾಯಿತೆಂದು ಹೇಳಬಹುದು. ರಾಜರಿಂದ ಉದ್ಘಾಟನವಾಯಿತು. ಅಧ್ಯಕ್ಷರ ಭಾಷಣದಲ್ಲಿ ಕೇವಲ ಹಿಂದಿನ ಹಿರಿಮೆಗೇ ಹೆಚ್ಚು ಪ್ರಾಶಸ್ತ್ಯ ಕೊಟ್ಟರದೆ ಕನ್ನಡ ನಾಡು, ನುಡಿ, ಸಂಸ್ಕೃತಿ ಸಂವರ್ಧನೆಗಾಗಿ ಕನ್ನಡಿಗರು ಏನು ಮಾಡಬೇಕೆಂಬ ಬಗ್ಗೆ ವ್ಯಾವಹಾರಿಕ ಸೂಚನೆ ಕೊಟ್ಟಿರುವರು. ಪರಿಷತ್ತಿನ ಘಟನೆಯಲ್ಲಿ ಮಹತ್ವದ ತಿದ್ದುಪಡಿಗಳಾದವು. ಕರ್ನಾಟಕವೆಂಬ ಹೆಸರಿನ ಬದಲು ಕನ್ನಡ ಎಂಬ ಹೆಸರು ಗೊತ್ತಾಯಿತು. ಸಮ್ಮೇಳನದಲ್ಲಿ ಸ್ವೀಕೃತವಾದ ಗೊತ್ತುವಳಿಗಳು ಕನ್ನಡ ನಾಡಿನ ಸರ್ವಾಂಗಿಕ ಉನ್ನತಿಗೆ ಪರಿಪೋಷಕವಾದಂತಹವಾಗಿವೆ. ಕನ್ನಡಿಗರು ಪರದೇಶ ಪರಭಾಷೆಗಳಿಗೆ ಹಿಂದಿನಂತೆ ಮನಸೋಲದೆ ಸಾಹಿತ್ಯ ಸಮ್ಮೇಲನದ ನೇತೃತ್ವದಲ್ಲಿ ತಮ್ಮ ನಾಡು ನುಡಿಯ ಉದ್ಧಾರ ಮಾಡಿಕೊಳ್ಳಲು ಉಜ್ಜುಗರಾಗಬೇಕೆಂದು ನಾವು ಬಿನ್ನವಿಸುತ್ತೇವೆ.

— ಸಂಯುಕ್ತ ಕರ್ನಾಟಕ.

— ೧೧೧ನೆಯ ಪುಟದಿಂದ ಮುಂದುವರಿಸಿದ್ದು.

ಪ್ರತಿನಿಧಿ ಮಂಡಲಿ ಕಾರ್ಯಸಮಿತಿ ಇವುಗಳ ಸಂಬಂಧ, ಕಾರ್ಯಕ್ಷೇತ್ರ ಮುಂತಾದ ವಿವರಗಳನ್ನು ಗೊತ್ತುಮಾಡಲು ಕಾರ್ಯಸಮಿತಿಗೆ ಸಕಲ ಸದಸ್ಯ ಅಧಿವೇಶನ ಅಧಿಕಾರ ಕೊಟ್ಟಿದೆ.

**ಈ ಸಲದ ವಾರ್ಷಿಕಾಧಿವೇಶನ**

ಮೇಲೆ ಪ್ರಸ್ತಾವಿಸಿರುವ ಪರಿಷತ್ತಿನ ಪುನರ್ಘಟನೆಗೆ ಸಂಬಂಧಪಟ್ಟ ತೀರ್ಮಾನಗಳ ದೃಷ್ಟಿಯಿಂದ ಈ ಸಲದ ವಾರ್ಷಿಕಾಧಿವೇಶನ ವಿಶೇಷ ಮಹತ್ವವುಳ್ಳದ್ದಾಗಿದ್ದಿತು. ಅಲ್ಲದೆ, ಅದರಲ್ಲಿ ಸುಮಾರು ೬೬ಮಂದಿ ಸದಸ್ಯರು ಹಾಜರಿದ್ದರು; ಬೆಂಗಳೂರಿನ ಹೊರಗೆ ನಡೆದ ಯಾವ ಅಧಿವೇಶನದಲ್ಲೂ ಇಷ್ಟು ಮಂದಿ ಸದಸ್ಯರು ಹಾಜರಿರಲಿಲ್ಲವೆಂದು ನಮ್ಮ ನೆನಪು. ಮತ್ತು ಬೆಳಗ್ಗೆ ಕಾಲಾತೀತವಾದ್ದರಿಂದ ರಾತ್ರಿಗೆ ಅಧಿವೇಶನವನ್ನು ಮುಂದುವರಿಸಿದಾಗ, ಎಲ್ಲ ಸದಸ್ಯರೂ ೧೦ ಘಂಟೆಯಿಂದ ಮಾರನೆಯ ಬೆಳಗ್ಗೆ ೫ರ ವರೆಗೂ ಒಂದೇ ಸಮವಾಗಿ ಕುಳಿತು, ತಾಳ್ಮೆಯಿಂದಲೂ ಶ್ರದ್ಧೆಯಿಂದಲೂ ಸೌಹಾರ್ದದಿಂದಲೂ ಕೆಲಸ ನಡೆಸಿಕೊಟ್ಟಿದ್ದು ಅಭಿನಂದನೀಯವೂ ಅಭಿವಂದನೀಯವೂ ಆಗಿದೆ.

**ಕೃತಜ್ಞತೆ : ಅಭಿನಂದನೆ**

ಪರಿಷತ್ತಿನ ಎಲ್ಲ ಕಾರ್ಯಗಳಲ್ಲೂ ನೆರವಾದ ಹಿಂದಿನ ವರ್ಷದ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರಿಗೆಲ್ಲ ಪರಿಷತ್ತಿನ ಪರವಾದ ವಂದನೆಗಳನ್ನು ಸಮರ್ಪಿಸುತ್ತೇವೆ; ಮತ್ತು ಈ ವರ್ಷ ಹೊಸದಾಗಿ ಆಯ್ದು ಬಂದಿರುವ ಪ್ರತಿನಿಧಿಗಳಿಗೂ, ಕಾರ್ಯಸಮಿತಿಯ ಸದಸ್ಯರಿಗೂ, ಉಪಾಧ್ಯಕ್ಷರು ಮತ್ತು ಅಧಿಕಾರಿಗಳಿಗೂ ಅಭಿನಂದನೆಗಳನ್ನು ಅರ್ಪಿಸಲು ಹರ್ಷಿಸುತ್ತೇವೆ.

---

# ಪರಿಷತ್ತಿನ ಸುದ್ದಿ

## ಕಾರ್ಯಸಮಿತಿಯ ಅಧಿವೇಶನ

ಹೊಸ ಕಾರ್ಯಸಮಿತಿಯ ಸದಸ್ಯರು ಕಳೆದ ಡಿಸೆಂಬರ್ ೩೧ನೆಯ ತಾರೀಖಿನ ದಿನ ಬಳ್ಳಾರಿಯಲ್ಲಿ ಸಭೆ ಸೇರಿ ಕೆಲವು ಆಡಳಿತ ವಿಚಾರಗಳನ್ನೂ, ಪ್ರಾಂತ ಸಮಿತಿಗಳನ್ನು ಶೀಘ್ರದಲ್ಲಿಯೇ ಸಿದ್ಧಪಡಿಸುವುದಕ್ಕೆ ಬೇಕಾದ ಏರ್ಪಾಟುಗಳನ್ನೂ ನಿರ್ಣಯಿಸಿದರು.

## ಕನ್ನಡ ಪಠ್ಯಪುಸ್ತಕ ಸಮಿತಿ

ಮೇಲ್ಕಂಡ ಸಮಿತಿ ೩೧ನೆಯ ತಾರೀಖು ಬಳ್ಳಾರಿಯಲ್ಲಿ ಸಭೆ ಸೇರಿ ಕನ್ನಡ ನಾಡಿಗೆಲ್ಲಾ ಒಂದೇ ಪಠ್ಯಪುಸ್ತಕ ಸಮಿತಿ (one Federal Text Book Committee for all Karnataka) ಇರಬೇಕೆಂಬ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಿ ಕೆಲವು ನಿರ್ಣಯಗಳನ್ನು ಮಾಡಿತು. ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರೂ, ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಪರವಾಗಿ ಶ್ರೀ॥ ಜೆಟ್ಟಪಿ ನರಹರಿ ಶಾಸ್ತ್ರಿಗಳವರೂ, ಬೊಂಬಾಯಿ ಸರಕಾರದ ಪರವಾಗಿ ಧಾರವಾಡದ ಪ್ರೊ॥ ಎಸ್. ಎಸ್. ಮಾಳವಾಡರವರೂ, ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರೂ ಅಧಿವೇಶನದಲ್ಲಿ ಭಾಗವಹಿಸಿದ್ದರು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ಸಭಾಪತಿಗಳಾಗಿದ್ದರು. ಸಭಾಪತಿಗಳು ಕೋರಿದ ಕೋರಿಕೆಗೆ ಶ್ರೀ॥ ಗಳಾದ ಸಿ. ಸೀತಾರಾಮಯ್ಯನವರೂ, ಕೆ. ಎಸ್. ಕಾರಂತರೂ, ಡಿ. ರಾಮಚಂದ್ರಪ್ರಿಯರವರೂ, ರಂಗನಾಥ ದಿವಾಕರರವರೂ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳೂ ಅಧಿವೇಶನದಲ್ಲಿ ಹಾಜರಿದ್ದು ಉಪಯುಕ್ತವಾದ ಸಲಹೆಗಳನ್ನು ಕೊಟ್ಟರು. ಸಮಿತಿಯ ಸಲಹೆ ಸೂಚನೆಗಳನ್ನು ಕಾಲಕ್ರಮದಲ್ಲಿ ಪ್ರಕಟಿಸಲಾಗುವುದು.

## ಈ ವರ್ಷದ ಲೆಕ್ಕಶೋಧಕರು

ಬಳ್ಳಾರಿಯಲ್ಲಿ ನಡೆದ ಸಕಲ ಸದಸ್ಯ ವಾರ್ಷಿಕಾಧಿವೇಶನದಲ್ಲಿ ಶ್ರೀ॥ ಎಂ. ಎಲ್. ನರಸಿಂಹಾಚಾರ್ಯರವರೇ ಈ ವರ್ಷಕ್ಕೂ ಪರಿಷತ್ತಿನ ಲೆಕ್ಕಶೋಧಕರಾಗಿ ಆಯ್ಕೆ ಬಂದಿದ್ದಾರೆ.

# ಕನ್ನಡ ಸುದ್ದಿ

## ಮೈಸೂರಿನ ರಾಜಮನೆತನದ ಪ್ರಶಂಸೆ

ಡಿಸೆಂಬರ್ ೩೦ನೆಯ ತಾರೀಖಿನ ದಿನ ಮದರಾಸಿನಲ್ಲಿರುವ 'ಮೈಸೂರು ಕೆಫೆ'ಯಲ್ಲಿ ಮೈಸೂರು ಶ್ರೀಮನ್ಮಹಾರಾಜರವರ, ಶ್ರೀಮದ್ಯುವರಾಜರವರ ಮತ್ತು ಶ್ರೀ ಜಯಚಾಮರಾಜ ಒಡೆಯರವರ ಭಾವಚಿತ್ರಗಳ ಅನಾವರಣೋತ್ಸವವು ನಡೆಯಿತು. ಡಾ॥ ಯು. ರಾಮರಾಯರು ಸಭಾಧ್ಯಕ್ಷತೆ ವಹಿಸಿದ್ದರು. ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಅವರು ಭಾವಚಿತ್ರಗಳನ್ನು ಅನಾವರಣ ಮಾಡುತ್ತ ಶ್ರೀಮನ್ಮಹಾರಾಜರವರಿಗೂ, ಶ್ರೀಮದ್ಯುವರಾಜರವರಿಗೂ, ಶ್ರೀ ಯುವರಾಜ ಕುಮಾರರಿಗೂ ತಮ್ಮ ಹೃದಯಪೂರ್ವಕವಾದ ಪ್ರಶಂಸೆಯನ್ನು ಸಮರ್ಪಿಸಿದರು. ಅವರು ಶ್ರೀಮನ್ಮಹಾರಾಜರವರನ್ನು ಕುರಿತು—'ಶ್ರೀಮನ್ಮಹಾರಾಜರವರು ಸರ್ವ ರೀತಿಯಲ್ಲೂ ಆದರ್ಶಪ್ರಭುಗಳಾಗಿದ್ದಾರೆ. ಮಹಾಸ್ವಾಮಿಯವರಂತೆ ಸಮಗ್ರ ಭರತಖಂಡದಲ್ಲಿ ತೀರ್ಥಯಾತ್ರೆ ಮಾಡಿರುವ ಭಾರತೀಯ ರಾಜರು ಮತ್ತೊಬ್ಬರಿಲ್ಲ. ಹಿಂದೂ ಧರ್ಮವನ್ನು ಅವರು ಒಂದು ಸಂಪ್ರದಾಯವೆಂದು ತಿಳಿದಿಲ್ಲ. ವೈದಿಕಧರ್ಮ ಅವರ ಸರ್ವಸ್ವವಾಗಿದೆ. ಇತರ ಧರ್ಮಗಳಲ್ಲಿ ಅವರಿಗಿರುವ ಸಮದೃಷ್ಟಿ ಅಸಾಧ್ಯಕರವಾದುದು' ಎಂಬುದಾಗಿ ಹೇಳಿದರು.

## ಮದರಾಸು ಸಂಗೀತ ಸಮ್ಮೇಳನದಲ್ಲಿ ಶ್ರೀಮದ್ಯುವರಾಜರವರ ಪ್ರಶಂಸೆ

ಕಳೆದ ಡಿಸೆಂಬರ್ ೨೩ನೆಯ ತಾರೀಖಿನ ದಿವಸ ಮದರಾಸಿನಲ್ಲಿ, ಮದರಾಸು ಸಂಗೀತ ಪರಿಷತ್ತಿನ ೨೨ನೆಯ ವಾರ್ಷಿಕಾಧಿವೇಶನವನ್ನು ಮೈಸೂರಿನ ಶ್ರೀಮದ್ಯುವರಾಜರವರು ಆರಂಭಗೊಳಿಸುತ್ತ ಸ್ಫೂರ್ತಿದಾಯಕವಾದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಶ್ರೀ॥ ಎಸ್. ಸತ್ಯಮೂರ್ತಿಯವರು ಶ್ರೀಮದ್ಯುವರಾಜರವರಿಗೆ ವಂದನೆಗಳನ್ನು ಸಮರ್ಪಿಸುತ್ತಾ, ಶ್ರೀಮದ್ಯುವರಾಜರವರು ಭಾರತೀಯ ಸಂಸ್ಕೃತಿಯ ಪುನರುಜ್ಜೀವನದಲ್ಲಿ ತಮಗೆ ವಿಶೇಷ ಆಸಕ್ತಿಯಿರುವುದರಿಂದ ತಾವು ಈ ಸಮಾರಂಭದಲ್ಲಿ ಭಾಗವಹಿಸುವಾಗಿ ಅಪ್ಪಣೆ ಕೊಡಿಸಿದ್ದು ಎಲ್ಲರ ಅಂತಃಕರಣದಲ್ಲೂ ಪರಿತೋಷವನ್ನುಂಟು ಮಾಡಿದೆಯೆಂದೂ, ಶ್ರೀಮದ್ಯುವರಾಜರವರೂ ಅವರ ಪೂಜ್ಯಸಹೋದರರಾದ ಶ್ರೀಮನ್ಮಹಾರಾಜರವರೂ ಕರ್ನಾಟಕ ಸಂಗೀತದಲ್ಲಿ ವಿಶೇಷ ಆಸಕ್ತಿ ವಹಿಸಿರುವುದು ಎಲ್ಲರಿಗೂ ತಿಳಿದ ಸಂಗತಿಯೆಂದೂ ಹೇಳಿದರು.

## ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನ: ಕನ್ನಡದಲ್ಲಿ ಕಾರ್ಯಕಲಾಪ

ಅಖಿಲ ಕರ್ನಾಟಕದ ಆಯುರ್ವೇದ ಸಮ್ಮೇಳನದ ೧೦ನೆಯ ಅಧಿವೇಶನ ಈ ಸಲ ಬಳ್ಳಾರಿಯಲ್ಲಿ, ಸಾಹಿತ್ಯ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ, ಮೈಸೂರಿನ ಆಯುರ್ವೇದ ಮತ್ತು ಯುನಾನಿ ಕಾಲೇಜಿನ ಪ್ರಿನ್ಸಿಪಾಲರವರಾದ ಡಾ॥ ಪೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಸಮ್ಮೇಳನದ ಅಧ್ಯಕ್ಷರು ಕನ್ನಡದಲ್ಲಿ ಭಾಷಣ ಮಾಡಿದ್ದಲ್ಲದೆ, ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲಿ ಆಯುರ್ವೇದ ಮಹಾಪಾಠಶಾಲೆಗಳು ಸ್ಥಾಪಿತವಾಗಬೇಕೆಂದೂ ಅಲ್ಲೆಲ್ಲಾ ಬೋಧನೆ ಕನ್ನಡದ ಮೂಲಕವೇ ನಡೆಯುವಂತೆ ಏರ್ಪಾಟಾಗಬೇಕೆಂದೂ ಸೂಚಿಸಿರುವುದು ಅಭಿನಂದನೀಯವಾಗಿದೆ. ಸಮ್ಮೇಳನದ ನಡವಳಿಕೆಗಳೆಲ್ಲ ಕನ್ನಡದಲ್ಲಿಯೇ ನಡೆಯಿತೆಂಬುದೂ ಸಂತೋಷದ ಸಂಗತಿಯಾಗಿದೆ.

## ಬೋಧಕ ಭಾಷೆ ಕನ್ನಡ

ಡಿಸೆಂಬರ್ ೨೫ ರಲ್ಲಿ ಮಂಗಳೂರಿನ ಕೆನರಾ ಹೈಸ್ಕೂಲಿನ ವಾರ್ಷಿಕೋತ್ಸವ ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರವರಾದ ರಾಜಕಾರ್ಯಪ್ರವೀಣ ಶ್ರೀ॥ ಎನ್. ಎಸ್. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ನೆರವೇರಿತು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ, ಮೈಸೂರಿನ ಪ್ರಯೋಗ ತೃಪ್ತಿಕರವಾಗಿದೆಯೆಂದೂ, ಕನ್ನಡೇತರ ವಿಷಯಗಳನ್ನು ಕನ್ನಡದಲ್ಲಿಯೇ ಬೋಧಿಸಬೇಕೆಂದೂ ಅಭಿಪ್ರಾಯಪಟ್ಟರು.

## ಮಾತೃಭಾಷೆಯಲ್ಲಿ ಶಿಕ್ಷಣ

ಡಿಸೆಂಬರ್ ೨೭ರಿಂದ ೩೦ರವರೆಗೆ ಬೊಂಬಾಯಿಯಲ್ಲಿ ಅಖಿಲಭಾರತ ಶಿಕ್ಷಣ ಪರಿಷತ್ತು ನಡೆಯಿತು. ಎಲ್ಲ ತರಗತಿಗಳ ಶಿಕ್ಷಣವೂ ಮಾತೃಭಾಷೆಯಲ್ಲಿಯೇ ನಡೆಯತಕ್ಕದ್ದೆಂಬ ಬಗ್ಗೆ ಒಂದು ಗೊತ್ತುವಳಿಯಾಯಿತು.

## ವೀರಶೈವ ಮಹಾಸಭೆ

ಅಖಿಲ ಭಾರತ ವೀರಶೈವ ಮಹಾಸಭೆಯ ೧೪ನೆಯ ಅಧಿವೇಶನವು ಡಿಸೆಂಬರ್ ೨೬ನೆಯ ತಾರೀಖಿನಿಂದ ಮೊದಲುಗೊಂಡು ಮೂರು ದಿನ ಹುಬ್ಬಳ್ಳಿಯಲ್ಲಿ ವಿಜೃಂಭಣೆಯಿಂದ ನಡೆಯಿತು. ಕನ್ನಡದ ಅಭಿಮಾನಿಗಳಾದ ಪ್ರೊ॥ ಎಸ್. ಎಸ್. ಬಸವನಾಳ ಅವರು ಮಹಾಸಭೆಯ ಅಧ್ಯಕ್ಷರಾಗಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಹಾಸಭೆಯ ಬೆಳವಣಿಗೆಯನ್ನು ವಿವರಿಸಿ ವೀರಶೈವರಲ್ಲಿ ಒಕ್ಕಟ್ಟು ಉಂಟಾಗಬೇಕೆಂದು ಕೋರಿ, ಪ್ರತ್ಯೇಕ ಕರ್ನಾಟಕ ಪ್ರಾಂತರಚನೆಯ ಆವಶ್ಯಕತೆಯನ್ನು ಕುರಿತು ಒತ್ತಿ ಹೇಳಿದರು. ರಾಷ್ಟ್ರೀಯ ಭಾವನೆಯ ಬೆಳವಣಿಗೆಗೆ ಪೋಷಕವಾದ ಹಲವು ಗೊತ್ತುವಳಿಗಳು ಸ್ವೀಕೃತವಾದುವು.

## ಬೊಂಬಾಯಿನ ಶ್ರೀ॥ ಕೆ. ರಾಮಸ್ವಾಮಿಯವರಿಗೆ ಬಿರುದು

ಕನ್ನಡದ ಅಭಿಮಾನಿಗಳಾದ, ಬೊಂಬಾಯಿನಲ್ಲಿರುವ ಮೈಸೂರಿನವರ ಮುಖಂಡರಾದ ರಾವ್ ಬಹದೂರ್ ಕೆ. ರಾಮಸ್ವಾಮಿಯವರಿಗೆ ಸಾರ್ವಭೌಮ ಸರ್ಕಾರದವರು "ದಿವಾನ್ ಬಹದ್ದೂರ್" ಎಂಬ ಹೊಸವರ್ಷದ ಮನ್ನಣೆಯ ಬಿರುದು ಕೊಟ್ಟು ಗೌರವಿಸಿರುತ್ತಾರೆ. ಅವರಿಗೆ ಅಭಿನಂದನೆಗಳು.

## ಸೊಂಡೂರಿನಲ್ಲಿ ಶ್ರೀ॥ ಸಂಪತ್ಕುಮಾರಾಚಾರ್ಯರ ಭಾರತವಾಚನ

ಇದೇ ತಾ॥ ೧ರಲ್ಲಿ ಸೊಂಡೂರು ಮಹಾರಾಜರ ದರ್ಬಾರು ಭವನದಲ್ಲಿ ಗಮಕಿ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರು 'ಕುಮಾರವ್ಯಾಸ ಭಾರತ'ವನ್ನು ವಾಚನಮಾಡಿ, ಕನ್ನಡ ಸಾಹಿತ್ಯದ ಪ್ರಾಮುಖ್ಯತೆಯನ್ನು ಕುರಿತು ಮಾತಾಡಿದರೆಂದು ತಿಳಿಯಬರುತ್ತದೆ.

## ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘ: ಉಪನ್ಯಾಸ ಮಾಲೆ

ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘದವರು ಕಳೆದ ಡಿಸೆಂಬರ್ ೨೩ರಿಂದ ೨೬ರ ವರೆಗೆ ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲೂ, ಇದೇ ಜನವರಿ ೨ರಿಂದ ೭ರ ವರೆಗೆ ದಾವಣಗೆರೆಯ ಶಿವಯೋಗಿ ಆಶ್ರಮದ ಆಶ್ರಯದಲ್ಲೂ ೧೫ ಮತ್ತು ೧೬ನೆಯ ಕನ್ನಡ ಉಪನ್ಯಾಸ ಮಾಲೆಗಳನ್ನು ನೆರವೇರಿಸಿದರು.

## ಹರೀಶ್ವರ ಜಯಂತ್ಯುತ್ಸವ

ಚೆನ್ನರಾಯಪಟ್ಟಣದ ಕರ್ನಾಟಕ ಸಂಘದ ಆಶ್ರಯದಲ್ಲಿ ಕಳೆದ ಡಿಸೆಂಬರ್ ೨೫ರಲ್ಲಿ, ಸಂಘದ ಅಧ್ಯಕ್ಷರಾದ ಶ್ರೀ॥ ಎಸ್. ಎಂ. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರ ಕವಿಯ ಜಯಂತ್ಯುತ್ಸವ ವಿಜೃಂಭಣೆಯಿಂದ ನೆರವೇರಿತೆಂದು ತಿಳಿಯಬರುತ್ತದೆ.

---

## ಕೃತಜ್ಞತೆ

ಕನ್ನಡ ನಾಡಿನ ಭೂಪಟದ ಚಿತ್ರದ ಪಡಿಯಚ್ಚನ್ನು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರೂ, ಸೊಂಡೂರು ಮಹಾರಾಜರ ಭಾವಚಿತ್ರದ ಪಡಿಯಚ್ಚನ್ನು 'ವಿಶ್ವಕರ್ನಾಟಕ'ದ ಸಂಪಾದಕರೂ, ಸೊಂಡೂರು ಮಹಾರಾಜರು ಆನೆಯ ಮೇಲೆ ಅಂಬಾರಿಯಲ್ಲಿ ಮಂಡಿಸಿರುವ ಚಿತ್ರದ ಪಡಿಯಚ್ಚು ಮತ್ತು ಸ್ವಾಗತಾಧ್ಯಕ್ಷರು, ಸೊಂಡೂರು ಮಹಾರಾಜರು, ಸಮ್ಮೇಳನಾಧ್ಯಕ್ಷರು ಇವರುಗಳಿರುವ ಚಿತ್ರದ ಪಡಿಯಚ್ಚು ಇವೆರಡನ್ನೂ 'ತಾಯಿನಾಡು' ಪತ್ರಿಕೆಯ ಸಂಪಾದಕರೂ ಕೃಪೆಮಾಡಿ ಕೊಟ್ಟು ಉಪಕಾರಮಾಡಿರುತ್ತಾರೆ. ಇವರಿಗೆಲ್ಲ 'ಕನ್ನಡ ನುಡಿ' ಕೃತಜ್ಞತೆಯುಳ್ಳದ್ದಾಗಿದೆ.

---

ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ,
ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಕನ್ನಡ ನುಡಿ


ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಸಂಪಾದಕ: ಅ. ನ. ಕೃಷ್ಣರಾಯ

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಜನವರಿ ೬, ೧೯೩೯ [ಸಂಚಿಕೆ ೧೪




# ಕನ್ನಡ ನುಡಿ


ಕನ್ನಡ ಸಾಹಿತ್ಯ ಪರಿಷತ್ತಿನ ವಾರಪತ್ರಿಕೆ

ಸಂಪಾದಕ: ಅ. ನ. ಕೃಷ್ಣರಾಯ

ವಾರ್ಷಿಕ ಚಂದಾ: ರೂ. ೧-೮-೦
ಅಂಚೆ ಮೂಲಕ: ರೂ. ೨-೪-೦

ಪ್ರತಿ ಶುಕ್ರವಾರ ಹೊರಡುತ್ತದೆ
ಬಿಡಿ ಪತ್ರಿಕೆ: ೬ ಕಾಸು

ಸಂಪುಟ ೧] ಬೆಂಗಳೂರು, ಶುಕ್ರವಾರ, ಜನವರಿ ೬, ೧೯೩೯ [ಸಂಚಿಕೆ ೧೪


## ಕನ್ನಡ ನಾಡು



|| ಸಿರಿಗನ್ನಡಂ ಗೆಲ್ಗೆ ||

ಕನ್ನಡನುಡಿ

ಶುಕ್ರವಾರ, ಜನವರಿ ೬, ೧೯೩೯

## ಹೊಸ ವರ್ಷದ ಹಾರೈಕೆ

ಇಂದು ಹೊಸವರ್ಷ ಬಂದು ಮುಂದಡಿಯಿಡುತ್ತಿದೆ. ಪರಿಷತ್ತೂ, ಅದರ ಕಹಳೆಯಾದ 'ಕನ್ನಡನುಡಿ'ಯೂ ಹೊಸ ವರ್ಷದ ಹೊಸ ಬಾಳಿಗೆ ಕಾಲಿಟ್ಟಿವೆ. ಈ ಸಂದರ್ಭದಲ್ಲಿ ಪರಿಷತ್ತಿನ ಪೂಜ್ಯ ಮಹಾ ಪೋಷಕರಾದ ಶ್ರೀಮನ್ಮಹಾರಾಜರವರಿಗೂ, ಪರಿಷತ್ತಿನ ಪೋಷಕರೂ, ಪೂಜ್ಯ ಅಧ್ಯಕ್ಷರೂ ಆದ ಶ್ರೀಮದ್ಯುವರಾಜರವರಿಗೂ ಮತ್ತು ಪರಿಷತ್ತಿನ ಅಭಿಮಾನಿಗಳಾದ ಶ್ರೀ ಜಯಚಾಮರಾಜ ಒಡೆಯರವರಿಗೂ ಎಲ್ಲ ಶಾಂತಿ ಸುಖಗಳೂ, ವೈಭವಗಳೂ ದೊರೆಯಲೆಂದು ಹಾರೈಸುವುದಲ್ಲದೆ, ಅವರು ಪರಿಷತ್ತಿನ ಮತ್ತು ಕನ್ನಡದ ಏಳಿಗೆಯ ವಿಷಯದಲ್ಲಿ ತೋರುತ್ತಿರುವ ವಿಶೇಷ ಆದರ ಪ್ರೋತ್ಸಾಹಗಳಿಗಾಗಿ ಅವರಿಗೆ ಪರಿಷತ್ತಿನ ಪರವಾದ ಕೃತಜ್ಞತೆಯನ್ನು ಭಕ್ತಿಪುರಸ್ಸರವಾಗಿ ಸಮರ್ಪಿಸುತ್ತೇವೆ.

ಪರಿಷತ್ತಿನ ಸದಸ್ಯರಿಗೂ ಮತ್ತು ನಮ್ಮ ವಾಚಕವೃಂದಕ್ಕೂ ಸಹ ಈ ಹೊಸ ವರ್ಷದಲ್ಲಿ ಎಲ್ಲ ಸುಖ ಸಂಪತ್ತುಗಳೂ ದೊರೆಯಲೆಂದು ಹಾರೈಸಲು ಸಂತೋಷಿಸುತ್ತೇವೆ.

ಈ ಹೊಸ ವರ್ಷದಲ್ಲಿ ಕನ್ನಡಕ್ಕೆ ಎಲ್ಲ ಬಗೆಯಲ್ಲೂ ಶ್ರೇಯಸ್ಸುಂಟಾಗಲಿ, ಕನ್ನಡ ಮುಂದಾಗಲಿ, ಕನ್ನಡನಾಡು ಮುಂದಾಗಿ ಒಂದಾಗಲಿ, ಕನ್ನಡ ಗೆಲ್ಲಲಿ, ಕನ್ನಡತಾಯ ಗುಡಿಯಾದ ಪರಿಷತ್ತು ಹೆಚ್ಚಿನ ಕಳೆಯಿಂದ ಬೆಳಗಲಿ, ಕನ್ನಡ ಬಾವುಟ ವೈಭವದಿಂದ ಹಾರಾಡುತ್ತಿರಲಿ!

## ಪರಿಷತ್ತಿನಲ್ಲಿ ಹೊಸ ಮಾರ್ಪಾಟುಗಳು

ಹೊಸವರ್ಷದ ಹೊಸತನದ ಕುರುಹೆಂಬಂತೆ ಪರಿಷತ್ತಿನಲ್ಲಿ ಕೆಲವು ಹೊಸ ಮಾರ್ಪಾಟುಗಳಾಗಿವೆ. ಆದರೆ ಹೊಸತನವೊಂದೇ ಅವುಗಳ ಮುಖ್ಯ ಲಕ್ಷಣವಲ್ಲ: ಬರಿಯ ಮಾರ್ಪಾಟೊಂದೇ ಹೊಸತನವೂ ಅಲ್ಲ. ಹಳೆಯದರ, ಹಳೆತನದ, ಹಿರಿಯರ ಅನುಭವದ ಸಾರವನ್ನು ಉಳಿಸಿಕೊಂಡು, ಪ್ರಗತಿಸಾಧಕವಾದ ಬದಲಾವಣೆ ಹೊಂದುವುದೇ ನಿಜವಾದ ಹೊಸತನ. ಈ ದೃಷ್ಟಿಯಿಂದ ಪರಿಷತ್ತಿನ ಇತಿಹಾಸದಲ್ಲಿ ಈಗ ಒಂದು ಹೊಸತನ ಮೂಡಿದೆ, ಒಂದು ಹೊಸಯುಗ ಮೊದಲಾಗಿದೆ—ಎಂದು ಹೇಳಿದರೆ ತಪ್ಪಾಗದೆಂದು ನಾವು ಭಾವಿಸುತ್ತೇವೆ.

## ಹೆಸರು ಬದಲಾವಣೆ: ಕನ್ನಡ ಸಾಹಿತ್ಯ ಪರಿಷತ್ತು

ಬಳ್ಳಾರಿಯಲ್ಲಿ ತಾ|| ೩೦—೧೨—೧೯೩೮ರಲ್ಲಿ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಆದ ಒಂದೆರಡು ಮುಖ್ಯ ತೀರ್ಮಾನಗಳು ಪರಿಷತ್ತಿನ ಹೊಸ ಯುಗವನ್ನು ಪ್ರಾರಂಭಿಸಿವೆಯೆಂದು ಹೇಳಬಹುದು. ಒಂದು ಪರಿಷತ್ತಿನ ಹೊಸ ಹೆಸರು. ಮತ್ತೊಂದು ಪರಿಷತ್ತಿನ ಅಂಗ ರಚನೆಯ ಪುನರ್ಘಟನೆ.

ದ್ರಾವಿಡ ಭಾಷಾಶಾಸ್ತ್ರದ ದೃಷ್ಟಿಯಿಂದ 'ಕರ್ನಾಟಕ' ಎಂಬ ಶಬ್ದರೂಪವು "ಕರ್ಣಾಟಕ" ಎಂಬ 'ಸಂಸ್ಕೃತ' ಶಬ್ದರೂಪಕ್ಕೆ ಮೂಲವೆಂದೂ, ಅದರಷ್ಟೇ ಸಾಧುವಾದದ್ದೆಂದೂ, ಕನ್ನಡನಾಡಿನಲ್ಲೆಲ್ಲ ಒಂದೇ ರೂಪ ಬಳಕೆಯಲ್ಲಿರಬೇಕೆಂದೂ ಭಾವಿಸಿ ಪರಿಷತ್ಪತ್ರಿಕೆಯಲ್ಲಿಯೂ ವ್ಯವಹಾರದಲ್ಲಿಯೂ ಪರಿಷತ್ತಿನ ಹೆಸರಿನಲ್ಲಿ "ಕರ್ನಾಟಕ" ಎಂಬ ರೂಪವನ್ನೇ ಬಳಕೆಗೆ ತಂದದ್ದೂ, ಕೆಲವು ಮಹನೀಯರು ಈ ಬದಲಾವಣೆಗೆ ಆಕ್ಷೇಪಿಸಿದ್ದೂ ತಿಳಿದ ಸಂಗತಿಗಳು. ಈ ವಿಷಯವನ್ನು ಮೊನ್ನೆ ಬಳ್ಳಾರಿಯಲ್ಲಿ ಸಕಲ ಸದಸ್ಯರ ತೀರ್ಮಾನಕ್ಕೆ ಇರಿಸಲಾಗಿ, "ಕರ್ಣಾಟಕ" ರೂಪವನ್ನೇ ಉಳಿಸಿಕೊಳ್ಳಬೇಕೆಂಬ ಸೂಚನೆ ಬಹುಮತದಿಂದ ಬಿದ್ದುಹೋಯಿತು. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ 'ಕರ್ನಾಟಕ' ಎಂಬ ರೂಪವನ್ನೇ ಇಟ್ಟುಕೊಳ್ಳತಕ್ಕದ್ದೆಂದೂ, ನಿಬಂಧನ ಪರಿಷ್ಕರಣ ಸಮಿತಿಯವರು 'ಕರ್ನಾಟಕ' ಅಥವಾ 'ಕನ್ನಡ' ಎಂಬ ರೂಪವನ್ನು ಇಟ್ಟುಕೊಳ್ಳಬಹುದೆಂದೂ ಸೂಚಿಸಿದ್ದರು. ಸರ್ವಸಮ್ಮತವಾದ "ಕನ್ನಡ" ಎಂಬ ರೂಪವನ್ನೇ ಬಳಕೆಗೆ ತರಬಹುದೆಂದು "ಪರಿಷತ್ಪತ್ರಿಕೆ"ಯ ಸಂಪಾದಕರೂ ಹಿಂದೆ ಸೂಚನೆ ಕೊಟ್ಟಿದ್ದರು. 'ಕನ್ನಡ' ಎಂಬುದರ ಪರವಾಗಿ ಸದಸ್ಯರಿಂದಲೂ ಸೂಚನೆ ಬಂದಿತ್ತು. ಈ ಎರಡು ರೂಪಗಳನ್ನೂ ಸಭೆಯ ಅಭಿಮತಕ್ಕೆ ಒಡ್ಡಲಾಗಿ, ಮೊದಲು ಎರಡರ ಪರವಾಗಿಯೂ ಸಮಸಮವಾಗಿ ಮತಗಳು ಬಂದದ್ದರಿಂದ ಉಪಾಧ್ಯಕ್ಷರು ತಮ್ಮ ನಿರ್ಧಾರಕ ಅಭಿಮತವನ್ನು (casting vote) ಕೊಡದೆ ಮತ್ತೆ ಅಭಿಮತವನ್ನು ತೆಗೆದುಕೊಳ್ಳಲಾಗಿ, 'ಕನ್ನಡ'ಕ್ಕೇ ಬಹುಮತದ ಒಪ್ಪಿಗೆ ದೊರೆತು, ಪರಿಷತ್ತಿನ ಹೆಸರು **'ಕನ್ನಡ' ಸಾಹಿತ್ಯ ಪರಿಷತ್ತು** ಎಂದು ಬದಲಾವಣೆ ಹೊಂದಿತು.

"ಕನ್ನಡ" ಎಂಬ ಮಾತಿನಲ್ಲಿ ಕನ್ನಡಿಗರಿಗೆಲ್ಲಾ ನಿಜವಾಗಿಯೂ ಒಂದು ಇಂಪಿದೆ, ಒಂದು ಸೊಂಪಿದೆ. "ಕವಿರಾಜಮಾರ್ಗ"ವನ್ನು ಹಾಕಿದ ನೃಪತುಂಗನ ಬಾಯಲ್ಲೂ, ಎಲ್ಲೆಲ್ಲೂ 'ಕನ್ನಡ'ವೇ: ನೃಪತುಂಗ, ಪಂಪ, ರನ್ನರು ತಿರುಳ್ಗನ್ನಡ, ಒಳ್ಗನ್ನಡ ಎಂದು ಪ್ರೀತಿಯಿಂದ ಕರೆದಿದ್ದಾರೆ. ಕವಿಪರಂಪರೆಯಾಗಿ ಸಾವಿರ ವರ್ಷದಿಂದ 'ಕನ್ನಡ' ಎಂಬುದೇ ಪ್ರಿಯವಾದ ಮಾತಾಗಿದೆ. ಪರಿಷತ್ತಿನ ಹೆಸರಿನಲ್ಲಿ 'ಕನ್ನಡ' ನೆಲಸಿದ್ದು ಕನ್ನಡಿಗರಿಗೆಲ್ಲ ಸಂತೋಷದ ವಿಷಯವೆಂದೇ ನಮ್ಮ ದೃಢವಾದ ನಂಬಿಕೆ. 'ಕನ್ನಡ' ಮಾತಿನಲ್ಲಿರುವ ಮಂತ್ರಶಕ್ತಿಯಿಂದ ಕನ್ನಡ ಮಕ್ಕಳೆಲ್ಲರೂ ಒಡಕು ತೊಲಗಿ ಒಕ್ಕೂಟವಾಗಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ಪರಿಷತ್ತಿನ ಹೊಸ ಅಂಗರಚನೆ

೨೩ ವರ್ಷಗಳ ಹಿಂದೆ, ಕನ್ನಡ ಭಾಷೆ ಸಾಹಿತ್ಯಗಳನ್ನು ಬೆಳಸಿ, ಒಂದುಗೂಡಿಸಿ, ಸಾರ್ವಜನಿಕವಾಗಿ ಹರಡುವ ಉದ್ದೇಶದಿಂದ ಕನ್ನಡ ನಾಡಿನ ಹಿರಿಯರು ಸೇರಿ ಈ ಪರಿಷತ್ತನ್ನು ಸ್ಥಾಪಿಸಿದರು; ಪರಿಷತ್ತು ಅಖಿಲ ಕರ್ನಾಟಕ ಸಂಸ್ಥೆಯಾಗಬೇಕೆಂಬ ಉದ್ದೇಶದಿಂದ ಅದರ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕನ್ನಡನಾಡಿನ ಬೇರೆ ಬೇರೆ ೬ ಪ್ರಾಂತಗಳ ಪ್ರತಿನಿಧಿಗಳು ಇರಬೇಕೆಂಬ ಯೋಜನೆ ಮಾಡಿದರು. ಅದೇ ಮೇರೆಗೆ ಇಂದಿನವರೆಗೂ ಪರಿಷತ್ತು ಎಲ್ಲ ಕನ್ನಡಿಗರ ಪರವಾಗಿ, ಎಲ್ಲ ಕನ್ನಡಿಗರಿಗಾಗಿ ಕೆಲಸಮಾಡುತ್ತ ಬಂದಿತು: ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದು, ಪರಿಷತ್ಪತ್ರಿಕೆಯನ್ನು ಪ್ರಕಟಿಸುವುದು, ಪ್ರತಿ ವರ್ಷವೂ ಸಮ್ಮೇಳನ ನಡಸುವುದು—ಮುಂತಾದ ಉಪಯುಕ್ತ ಕಾರ್ಯಗಳನ್ನು ಪರಿಷತ್ತು ನಡಸಿಕೊಂಡು ಬಂದಿತು. ೫-೬ ವರ್ಷಗಳ ಕೆಳಗೆ ಪರಿಷತ್ತಿಗೆ ಒಂದು ಮಂದಿರವಾಯಿತು; ಕನ್ನಡಕ್ಕೆ ಯಾವ ಮಹಾಸ್ವಾಮಿಯವರು ಆಶ್ರಯದಾತರಾಗಿರುವರೋ ಆ ಮಹಾನುಭಾವರಾದ, ರಾಜರ್ಷಿಗಳಾದ ಶ್ರೀಮನ್ಮಹಾರಾಜರವರು ಕನ್ನಡದ ಮಂದಿರಕ್ಕೆ ತಮ್ಮ ದಿವ್ಯನಾಮಾಂಕಿತವನ್ನು ಕರುಣಿಸಿ ಅದನ್ನು ಹರಸಿದರು. ಶ್ರೀಮದ್ಯುವರಾಜರವರು ಮಮತೆ ವಾತ್ಸಲ್ಯದಿಂದ ಪರಿಷತ್ತಿನ ಅಧ್ಯಕ್ಷರಾಗಲೊಪ್ಪಿ, ಬಹು ಕಾಲದಿಂದ ಇಂದಿನವರೆಗೂ ಅಧ್ಯಕ್ಷರಾಗಿದ್ದುಕೊಂಡು ಪರಿಷತ್ತನ್ನು ಅಭಿಮಾನದಿಂದ ಪೋಷಿಸಿಕೊಂಡು ಬರುತ್ತಿದ್ದಾರೆ. ಪರಿಷತ್ತಿಗೊಂದು ಕಟ್ಟಡದೊರೆತ ತರುವಾಯವಲ್ಲಿಯೇ ಶ್ರೀ|| ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿ, ೪ ವರ್ಷಕಾಲ ಒಂದೇ ಸಮವಾಗಿ ಪರಿಷತ್ತಿಗಾಗಿ ದುಡಿದು, ತಿಂಗಳು ತಿಂಗಳೂ ಕಾರ್ಯನಿರ್ವಾಹಕ ಮಂಡಲಿ ಕೂಡುವಂತೆ ಮಾಡಿ, ತಿಂಗಳು ತಿಂಗಳಿಗೂ ೩–೪ ಉಪನ್ಯಾಸ ನಡೆಯುವಂತೆ ಏರ್ಪಡಿಸಿ, ವಿಶೇಷ ಸಾಹಿತ್ಯೋತ್ಸವ, ಗ್ರಂಥಪ್ರದರ್ಶನ, ಸಂಘಸಮ್ಮೇಳನ ಮುಂತಾದ ಹೊಸ ಕಾರ್ಯಗಳನ್ನು ಹೂಡಿ, ಸಮ್ಮೇಳನದ ಏರ್ಪಾಟನ್ನು ವ್ಯವಸ್ಥೆಗೆ ತಂದು ಪರಿಷತ್ತಿನ ಕಾರ್ಯಕ್ಷೇತ್ರವನ್ನು ಬಹುಮುಖವಾಗಿ

|| ಸಿರಿಗನ್ನಡಂ ಗೆಲ್ಗೆ ||

# ಕನ್ನಡ ನುಡಿ

ಶುಕ್ರವಾರ, ಜನವರಿ ೬, ೧೯೩೯

## ಹೊಸ ವರ್ಷದ ಹಾರೈಕೆ

ಇಂದು ಹೊಸವರ್ಷ ಬಂದು ಮುಂದಡಿಯಿಡುತ್ತಿದೆ. ಪರಿಷತ್ತೂ, ಅದರ ಕಹಳೆಯಾದ 'ಕನ್ನಡನುಡಿ'ಯೂ ಹೊಸ ವರ್ಷದ ಹೊಸ ಬಾಳಿಗೆ ಕಾಲಿಟ್ಟಿವೆ. ಈ ಸಂದರ್ಭದಲ್ಲಿ ಪರಿಷತ್ತಿನ ಪೂಜ್ಯ ಮಹಾ ಪೋಷಕರಾದ ಶ್ರೀಮನ್ಮಹಾರಾಜರವರಿಗೂ, ಪರಿಷತ್ತಿನ ಪೋಷಕರೂ, ಪೂಜ್ಯ ಅಧ್ಯಕ್ಷರೂ ಆದ ಶ್ರೀಮದ್ಯುವರಾಜರವರಿಗೂ ಮತ್ತು ಪರಿಷತ್ತಿನ ಅಭಿಮಾನಿಗಳಾದ ಶ್ರೀ ಜಯಚಾಮರಾಜ ಒಡೆಯರವರಿಗೂ ಎಲ್ಲ ಶಾಂತಿ ಸುಖಗಳೂ, ವೈಭವಗಳೂ ದೊರೆಯಲೆಂದು ಹಾರೈಸುವುದಲ್ಲದೆ, ಅವರು ಪರಿಷತ್ತಿನ ಮತ್ತು ಕನ್ನಡದ ಏಳಿಗೆಯ ವಿಷಯದಲ್ಲಿ ತೋರುತ್ತಿರುವ ವಿಶೇಷ ಆದರ ಪ್ರೋತ್ಸಾಹಗಳಿಗಾಗಿ ಅವರಿಗೆ ಪರಿಷತ್ತಿನ ಪರವಾದ ಕೃತಜ್ಞತೆಯನ್ನು ಭಕ್ತಿಪುರಸ್ಸರವಾಗಿ ಸಮರ್ಪಿಸುತ್ತೇವೆ.

ಪರಿಷತ್ತಿನ ಸದಸ್ಯರಿಗೂ ಮತ್ತು ನಮ್ಮ ವಾಚಕವೃಂದಕ್ಕೂ ಸಹ ಈ ಹೊಸ ವರ್ಷದಲ್ಲಿ ಎಲ್ಲ ಸುಖ ಸಂಪತ್ತುಗಳೂ ದೊರೆಯಲೆಂದು ಹಾರೈಸಲು ಸಂತೋಷಿಸುತ್ತೇವೆ.

ಈ ಹೊಸ ವರ್ಷದಲ್ಲಿ ಕನ್ನಡಕ್ಕೆ ಎಲ್ಲ ಬಗೆಯಲ್ಲೂ ಶ್ರೇಯಸ್ಸುಂಟಾಗಲಿ, ಕನ್ನಡ ಮುಂದಾಗಲಿ, ಕನ್ನಡನಾಡು ಮುಂಧಾಗಿ ಒಂದಾಗಲಿ, ಕನ್ನಡ ಗೆಲ್ಲಲಿ, ಕನ್ನಡತಾಯ ಗುಡಿಯಾದ ಪರಿಷತ್ತು ಹೆಚ್ಚಿನ ಕಳೆಯಿಂದ ಬೆಳಗಲಿ, ಕನ್ನಡ ಬಾವುಟ ವೈಭವದಿಂದ ಹಾರಾಡುತ್ತಿರಲಿ!

## ಪರಿಷತ್ತಿನಲ್ಲಿ ಹೊಸ ಮಾರ್ಪಾಟುಗಳು

ಹೊಸವರ್ಷದ ಹೊಸತನದ ಕುರುಹೆಂಬಂತೆ ಪರಿಷತ್ತಿನಲ್ಲಿ ಕೆಲವು ಹೊಸ ಮಾರ್ಪಾಟುಗಳಾಗಿವೆ. ಆದರೆ ಹೊಸತನವೊಂದೇ ಅವುಗಳ ಮುಖ್ಯ ಲಕ್ಷಣವಲ್ಲ: ಬರಿಯ ಮಾರ್ಪಾಟೊಂದೇ ಹೊಸತನವೂ ಅಲ್ಲ. ಹಳೆಯದರ, ಹಳೆತನದ, ಹಿರಿಯರ ಅನುಭವದ ಸಾರವನ್ನು ಉಳಿಸಿಕೊಂಡು, ಪ್ರಗತಿಸಾಧಕವಾದ ಬದಲಾವಣೆ ಹೊಂದುವುದೇ ನಿಜವಾದ ಹೊಸತನ. ಈ ದೃಷ್ಟಿಯಿಂದ ಪರಿಷತ್ತಿನ ಇತಿಹಾಸದಲ್ಲಿ ಈಗ ಒಂದು ಹೊಸತನ ಮೂಡಿದೆ, ಒಂದು ಹೊಸಯುಗ ಮೊದಲಾಗಿದೆ—ಎಂದು ಹೇಳಿದರೆ ತಪ್ಪಾಗದೆಂದು ನಾವು ಭಾವಿಸುತ್ತೇವೆ.

## ಹೆಸರು ಬದಲಾವಣೆ: ಕನ್ನಡ ಸಾಹಿತ್ಯ ಪರಿಷತ್ತು

ಬಳ್ಳಾರಿಯಲ್ಲಿ ತಾ|| ೨೦—೧೨—೧೯೩೮ರಲ್ಲಿ ಸಕಲ ಸದಸ್ಯರ ವಾರ್ಷಿಕಾಧಿವೇಶನದಲ್ಲಿ ಆದ ಒಂದೆರಡು ಮುಖ್ಯ ತೀರ್ಮಾನಗಳು ಪರಿಷತ್ತಿನ ಹೊಸ ಯುಗವನ್ನು ಪ್ರಾರಂಭಿಸಿವೆಯೆಂದು ಹೇಳಬಹುದು. ಒಂದು ಪರಿಷತ್ತಿನ ಹೊಸ ಹೆಸರು. ಮತ್ತೊಂದು ಪರಿಷತ್ತಿನ ಅಂಗರಚನೆಯ ಪುನರ್ಘಟನೆ.

ದ್ರಾವಿಡ ಭಾಷಾಶಾಸ್ತ್ರದ ದೃಷ್ಟಿಯಿಂದ 'ಕರ್ನಾಟಕ' ಎಂಬ ಶಬ್ದರೂಪವು "ಕರ್ಣಾಟಕ" ಎಂಬ 'ಸಂಸ್ಕೃತ' ಶಬ್ದರೂಪಕ್ಕೆ ಮೂಲವೆಂದೂ, ಅದರಷ್ಟೇ ಸಾಧುವಾದದ್ದೆಂದೂ, ಕನ್ನಡನಾಡಿನಲ್ಲೆಲ್ಲ ಒಂದೇರೂಪ ಬಳಕೆಯಲ್ಲಿರಬೇಕೆಂದೂ ಭಾವಿಸಿ ಪರಿಷತ್ಪತ್ರಿಕೆಯಲ್ಲಿಯೂ ವ್ಯವಹಾರದಲ್ಲಿಯೂ ಪರಿಷತ್ತಿನ ಹೆಸರಿನಲ್ಲಿ "ಕರ್ನಾಟಕ" ಎಂಬ ರೂಪವನ್ನೇ ಬಳಕೆಗೆ ತಂದದ್ದೂ, ಕೆಲವು ಮಹನೀಯರು ಈ ಬದಲಾವಣೆಗೆ ಆಕ್ಷೇಪಿಸಿದ್ದೂ ತಿಳಿದ ಸಂಗತಿಗಳು. ಈ ವಿಷಯವನ್ನು ಮೊನ್ನೆ ಬಳ್ಳಾರಿಯಲ್ಲಿ ಸಕಲ ಸದಸ್ಯರ ತೀರ್ಮಾನಕ್ಕೆ ಇರಿಸಲಾಗಿ, "ಕರ್ಣಾಟಕ" ರೂಪವನ್ನೇ ಉಳಿಸಿಕೊಳ್ಳಬೇಕೆಂಬ ಸೂಚನೆ ಬಹುಮತದಿಂದ ಬಿದ್ದುಹೋಯಿತು. ಪರಿಷತ್ತಿನ ಕಾರ್ಯನಿರ್ವಾಹಕ ಮಂಡಲಿ 'ಕರ್ನಾಟಕ' ಎಂಬ ರೂಪವನ್ನೇ ಇಟ್ಟುಕೊಳ್ಳತಕ್ಕದ್ದೆಂದೂ, ನಿಬಂಧನ ಪರಿಷ್ಕರಣ ಸಮಿತಿಯವರು 'ಕರ್ನಾಟಕ' ಅಥವಾ 'ಕನ್ನಡ' ಎಂಬ ರೂಪವನ್ನು ಇಟ್ಟುಕೊಳ್ಳಬಹುದೆಂದೂ ಸೂಚಿಸಿದ್ದರು. ಸರ್ವಸಮ್ಮತವಾದ "ಕನ್ನಡ" ಎಂಬ ರೂಪವನ್ನೇ ಬಳಕೆಗೆ ತರಬಹುದೆಂದು "ಪರಿಷತ್ಪತ್ರಿಕೆ"ಯ ಸಂಪಾದಕರೂ ಹಿಂದೆ ಸೂಚನೆ ಕೊಟ್ಟಿದ್ದರು. 'ಕನ್ನಡ' ಎಂಬುದರ ಪರವಾಗಿ ಸದಸ್ಯರಿಂದಲೂ ಸೂಚನೆ ಬಂದಿತ್ತು. ಈ ಎರಡು ರೂಪಗಳನ್ನೂ ಸಭೆಯ ಅಭಿಮತಕ್ಕೆ ಒಡ್ಡಲಾಗಿ, ಮೊದಲು ಎರಡರ ಪರವಾಗಿಯೂ ಸಮಸಮವಾಗಿ ಮತಗಳು ಬಂದದ್ದರಿಂದ ಉಪಾಧ್ಯಕ್ಷರು ತಮ್ಮ ನಿರ್ಧಾರಕ ಅಭಿಮತವನ್ನು (casting vote) ಕೊಡದೆ ಮತ್ತೆ ಅಭಿಮತವನ್ನು ತೆಗೆದುಕೊಳ್ಳಲಾಗಿ, 'ಕನ್ನಡ'ಕ್ಕೇ ಬಹುಮತದ ಒಪ್ಪಿಗೆ ದೊರೆತು, ಪರಿಷತ್ತಿನ ಹೆಸರು '**ಕನ್ನಡ' ಸಾಹಿತ್ಯ ಪರಿಷತ್ತು** ಎಂದು ಬದಲಾವಣೆ ಹೊಂದಿತು.

"ಕನ್ನಡ" ಎಂಬ ಮಾತಿನಲ್ಲಿ ಕನ್ನಡಿಗರಿಗೆಲ್ಲಾ ನಿಜವಾಗಿಯೂ ಒಂದು ಇಂಪಿದೆ, ಒಂದು ಸೊಂಪಿದೆ. "ಕವಿರಾಜಮಾರ್ಗ"ವನ್ನು ಹಾಕಿದ ನೃಪತುಂಗನ ಬಾಯಲ್ಲೂ, ಎಲ್ಲೆಲ್ಲೂ 'ಕನ್ನಡ'ವೇ: ನೃಪತುಂಗ, ಪಂಪ, ರನ್ನರು ತಿರುಳ್ಗನ್ನಡ, ಒಳ್ಗನ್ನಡ ಎಂದು ಪ್ರೀತಿಯಿಂದ ಕರೆದಿದ್ದಾರೆ. ಕವಿಪರಂಪರೆಯಾಗಿ ಸಾವಿರ ವರ್ಷದಿಂದ 'ಕನ್ನಡ' ಎಂಬುದೇ ಪ್ರಿಯವಾದ ಮಾತಾಗಿದೆ. ಪರಿಷತ್ತಿನ ಹೆಸರಿನಲ್ಲಿ 'ಕನ್ನಡ' ನೆಲಸಿದ್ದು ಕನ್ನಡಿಗರಿಗೆಲ್ಲ ಸಂತೋಷದ ವಿಷಯವೆಂಬುದೇ ನಮ್ಮ ದೃಢವಾದ ನಂಬಿಕೆ. 'ಕನ್ನಡ' ಮಾತಿನಲ್ಲಿರುವ ಮಂತ್ರಶಕ್ತಿಯಿಂದ ಕನ್ನಡ ಮಕ್ಕಳೆಲ್ಲರೂ ಒಡಕು ತೊಲಗಿ ಒಕ್ಕೂಟವಾಗಲೆಂದು ಮನಃಪೂರ್ವಕವಾಗಿ ಹಾರೈಸುತ್ತೇವೆ.

## ಪರಿಷತ್ತಿನ ಹೊಸ ಅಂಗರಚನೆ

೨೩ ವರ್ಷಗಳ ಹಿಂದೆ, ಕನ್ನಡ ಭಾಷೆ ಸಾಹಿತ್ಯಗಳನ್ನು ಬೆಳಸಿ, ಒಂದುಗೂಡಿಸಿ, ಸಾರ್ವಜನಿಕವಾಗಿ ಹರಡುವ ಉದ್ದೇಶದಿಂದ ಕನ್ನಡ ನಾಡಿನ ಹಿರಿಯರು ಸೇರಿ ಈ ಪರಿಷತ್ತನ್ನು ಸ್ಥಾಪಿಸಿದರು; ಪರಿಷತ್ತು ಅಖಿಲ ಕರ್ನಾಟಕ ಸಂಸ್ಥೆಯಾಗಬೇಕೆಂಬ ಉದ್ದೇಶದಿಂದ ಅದರ ಕಾರ್ಯನಿರ್ವಾಹಕ ಮಂಡಲಿಯಲ್ಲಿ ಕನ್ನಡನಾಡಿನ ಬೇರೆ ಬೇರೆ ೬ ಪ್ರಾಂತಗಳ ಪ್ರತಿನಿಧಿಗಳು ಇರಬೇಕೆಂಬ ಯೋಜನೆ ಮಾಡಿದರು. ಅದೇ ಮೇರೆಗೆ ಇಂದಿನವರೆಗೂ ಪರಿಷತ್ತು ಎಲ್ಲ ಕನ್ನಡಿಗರ ಪರವಾಗಿ, ಎಲ್ಲ ಕನ್ನಡಿಗರಿಗಾಗಿ ಕೆಲಸಮಾಡುತ್ತ ಬಂದಿತು: ಪ್ರಾಚೀನ ಗ್ರಂಥಗಳನ್ನು ಪ್ರಕಟಿಸುವುದು, ಪರಿಷತ್ಪತ್ರಿಕೆಯನ್ನು ಪ್ರಕಟಿಸುವುದು, ಪ್ರತಿವರ್ಷವೂ ಸಮ್ಮೇಳನ ನಡಸುವುದು—ಮುಂತಾದ ಉಪಯುಕ್ತ ಕಾರ್ಯಗಳನ್ನು ಪರಿಷತ್ತು ನಡಸಿಕೊಂಡು ಬಂದಿತು. ೫-೬ ವರ್ಷಗಳ ಕೆಳಗೆ ಪರಿಷತ್ತಿಗೆ ಒಂದು ಮಂದಿರವಾಯಿತು; ಕನ್ನಡಕ್ಕೆ ಯಾವ ಮಹಾಸ್ವಾಮಿಯವರು ಆಶ್ರಯದಾತರಾಗಿರುವರೋ ಆ ಮಹಾನುಭಾವರಾದ, ರಾಜರ್ಷಿಗಳಾದ ಶ್ರೀಮನ್ಮಹಾರಾಜರವರು ಕನ್ನಡದ ಮಂದಿರಕ್ಕೆ ತಮ್ಮ ದಿವ್ಯನಾಮಾಂಕಿತವನ್ನು ಕರುಣಿಸಿ ಅದನ್ನು ಹರಸಿದರು. ಶ್ರೀಮದ್ಯುವರಾಜರವರು ಮಮತೆ ವಾತ್ಸಲ್ಯದಿಂದ ಪರಿಷತ್ತಿನ ಅಧ್ಯಕ್ಷರಾಗಲೊಪ್ಪಿ, ಬಹುಕಾಲದಿಂದ ಇಂದಿನವರೆಗೂ ಅಧ್ಯಕ್ಷರಾಗಿದ್ದುಕೊಂಡು ಪರಿಷತ್ತನ್ನು ಅಭಿಮಾನದಿಂದ ಪೋಷಿಸಿಕೊಂಡು ಬರುತ್ತಿದ್ದಾರೆ. ಪರಿಷತ್ತಿಗೊಂದು ಕಟ್ಟಡದೊರೆತ ತರುವಾಯದಲ್ಲಿಯೇ ಶ್ರೀ|| ಡಿ. ವಿ. ಗುಂಡಪ್ಪನವರು ಉಪಾಧ್ಯಕ್ಷರಾಗಿ, ೪ ವರ್ಷಕಾಲ ಒಂದೇ ಸಮವಾಗಿ ಪರಿಷತ್ತಿಗಾಗಿ ದುಡಿದು, ತಿಂಗಳು ತಿಂಗಳೂ ಕಾರ್ಯನಿರ್ವಾಹಕ ಮಂಡಲಿ ಕೂಡುವಂತೆ ಮಾಡಿ, ತಿಂಗಳು ತಿಂಗಳಿಗೂ ೩-೪ ಉಪನ್ಯಾಸ ನಡೆಯುವಂತೆ ಏರ್ಪಡಿಸಿ, ವಿಶೇಷ ಸಾಹಿತ್ಯೋತ್ಸವ, ಗ್ರಂಥಪ್ರದರ್ಶನ, ಸಂಘಸಮ್ಮೇಳನ ಮುಂತಾದ ಹೊಸ ಕಾರ್ಯಗಳನ್ನು ಹೂಡಿ, ಸಮ್ಮೇಳನದ ಏರ್ಪಾಟನ್ನು ವ್ಯವಸ್ಥೆಗೆ ತಂದು ಪರಿಷತ್ತಿನ ಕಾರ್ಯಕ್ಷೇತ್ರವನ್ನು ಬಹುಮುಖವಾಗಿ

ವಿಸ್ತಾರ ಪಡಿಸಿದರು. ಅವರ ಕಾಲದಲ್ಲಿ ಪರಿಷತ್ತಿಗೆ ಒಂದು ಹೊಸ ಯುಗ ಪ್ರಾರಂಭವಾಯಿತೆಂದು ಹೇಳಬೇಕು.

ಪರಿಷತ್ತಿನ ಈಗಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಮುಂದಾಳುತನದಲ್ಲಿ ಕಳೆದ ವರ್ಷದಲ್ಲಿ ಪರಿಷತ್ತು ಮೈಸೂರಿನ ಒಂದು ಹಳ್ಳಿಯಲ್ಲಿ, ಉತ್ತರ ಕರ್ನಾಟಕದಲ್ಲಿ ವಸಂತೋತ್ಸವವನ್ನು ನಡಸಿ, 'ಕನ್ನಡ ಬಾವುಟ'ವನ್ನು ಪ್ರಕಟಿಸಿ, 'ಕನ್ನಡನಾಡಿನ ಚರಿತ್ರೆ'ಯನ್ನು ಬರಸುವ ಏರ್ಪಾಡುಮಾಡಿ, ಮಹಿಳೆಯರನ್ನು ಪರಿಷತ್ತಿಗೆ ಹೆಚ್ಚಾಗಿ ಸೇರಿಸಿ, ಹೊಸಹೊಸ ಕಾರ್ಯಗಳನ್ನು ನಡಸಿದ್ದಲ್ಲದೆ, ಮುಖ್ಯವಾಗಿ ಪರಿಷತ್ತಿನ ಘಟನೆಯಲ್ಲಿ ಮಾರ್ಪಾಟುಗಳನ್ನು ಮಾಡಿ ಪರಿಷತ್ತಿನ ದೌರ್ಬಲ್ಯಗಳನ್ನು ನಿವಾರಿಸಿ, ಅದು ಹೆಚ್ಚು ಬಲದಿಂದಲೂ, ಕಾರ್ಯಶಕ್ತಿಯಿಂದಲೂ, ಪ್ರಾಂತಗಳ ವಿಜೃಂಭಣೆಯಿಂದಲೂ ಮುಂದೆ ಸಾಗುವುದಕ್ಕೆ ತಳಹದಿಯನ್ನು ಹಾಕಿದೆ.

೧೯೩೮ನೆಯ ಡಿಸೆಂಬರಿನಲ್ಲಿ ಜಮಖಂಡಿಯಲ್ಲಾದ ವಾರ್ಷಿಕಾಧಿವೇಶನದಲ್ಲಿ ಪರಿಷತ್ತಿನ ನಿಬಂಧನೆಗಳನ್ನೆಲ್ಲ ಪರಿಷ್ಕರಿಸುವ ಸಲುವಾಗಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕವಾಯಿತಷ್ಟೆ. ಆ ಸಮಿತಿ, ಪರಿಷತ್ತಿನ ಉದ್ದೇಶ ಸಾಧನೆ ಕಾರ್ಯಕಲಾಪಗಳಲ್ಲಿ ಸಹಕರಿಸಲು ಒಂದು ಪ್ರತಿನಿಧಿಮಂಡಲಿ ಇರತಕ್ಕದ್ದೆಂದೂ, ಪರಿಷತ್ತಿನ (ಹಿಂದಿನ) ಕಾರ್ಯನಿರ್ವಾಹಕ ಮಂಡಲಿಯ ಯೋಜನೆಯೇ ಇದಕ್ಕೂ ಅನ್ವಯಿಸತಕ್ಕದ್ದೆಂದೂ, ಪರಿಷತ್ತಿನ ಆಡಳಿತವನ್ನು ನೋಡಿಕೊಳ್ಳಲು ೧೨ ಮಂದಿ ಸದಸ್ಯರುಳ್ಳ ಒಂದು ಕಾರ್ಯಸಮಿತಿಯಿರತಕ್ಕದ್ದೆಂದೂ, ಇದಕ್ಕೆ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ಅರಮನೆಯ ಪ್ರತಿನಿಧಿಗಳು ಇವರ ಜೊತೆಗೆ ನಾಲ್ಕುಪ್ರಾಂತಗಳಿಂದ ಇಷ್ಟಿಷ್ಟರಂತೆ ಎಂಟುಮಂದಿ ಪ್ರಾಂತ ಪ್ರತಿನಿಧಿಗಳಿರಬೇಕೆಂದೂ, ಮೈಸೂರು – ಕೊಡಗು ಒಂದು ಪ್ರಾಂತವಾಗಿಯೂ ಉತ್ತರ ಕರ್ನಾಟಕ ಸಂಸ್ಥಾನಗಳು ಮುಂಬೈ ಕರ್ನಾಟಕದೊಂದಿಗೆ ಸೇರಿ ಒಂದು ಪ್ರಾಂತವಾಗಿಯೂ, ಎರಡು ಪ್ರಾಂತಗಳನ್ನು ಕಡಮೆ ಮಾಡಬೇಕೆಂದೂ, ಪ್ರಾಂತಗಳ ಕೆಲಸಗಳನ್ನು ನಿರ್ವಹಿಸಲು ಪ್ರಾಂತ ಪ್ರತಿನಿಧಿಗಳನ್ನೊಳಗೊಂಡ ಪ್ರಾಂತಸಮಿತಿಗಳಿರತಕ್ಕದ್ದೆಂದೂ, ಪ್ರಾಂತದ ಉತ್ಪನ್ನದಲ್ಲಿ ಶೇಕಡ ೭೦ರಷ್ಟನ್ನು ಪರಿಷತ್ತಿಗೆ ಸಲ್ಲಿಸಿ, ಉಳಿದಷ್ಟನ್ನು ಪ್ರಾಂತದ ಕೆಲಸಕ್ಕೆ ವಿನಿಯೋಗಿಸಿಕೊಳ್ಳತಕ್ಕದ್ದೆಂದೂ ಸಲಹೆ ಮಾಡಿತು. ಸಕಲ ಸದಸ್ಯರ ಅಧಿವೇಶನ ಈ ವಿಚಾರವನ್ನು ಕೂಲಂಕಷವಾಗಿ ಪರ್ಯಾಲೋಚಿಸಿ ಕೆಲವು ಬದಲಾವಣೆಗಳೊಡನೆ ಮುಖ್ಯಾಂಶಗಳನ್ನು ಒಪ್ಪಿತು. ಈ ಹೊಸ ಅಂಗರಚನೆ ಹೇಗೆಂದರೆ—

**(೧) ಪ್ರಾಂತಗಳು ನಾಲ್ಕು**

ಪರಿಷತ್ತಿನ ಘಟನೆಯ ದೃಷ್ಟಿಯಿಂದ ಕನ್ನಡನಾಡನ್ನು ಹಿಂದೆ ಮೈಸೂರು, ಬೊಂಬಾಯಿ, ಮದರಾಸು, ಹೈದರಾಬಾದು, ಕೊಡಗು, ಉತ್ತರ ಕರ್ನಾಟಕ ಸಂಸ್ಥಾನಗಳು ಎಂದು ೬ ಪ್ರಾಂತಗಳಾಗಿ ವಿಂಗಡಿಸಿತ್ತು. ಈಗ ನಾಲ್ಕುಪ್ರಾಂತಗಳಾಗಿ ಪುನರ್ವಿಭಾಗವಾಗಿದೆ :— (೧) ಮೈಸೂರು ಕರ್ನಾಟಕ (ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮತ್ತೂರು, ಕೊಳ್ಳೇಗಾಲ, ಸೇಲಂಗಳ ಕನ್ನಡ ಭಾಗಗಳು), (೨) ಉತ್ತರ ಕರ್ನಾಟಕ (ಧಾರವಾಡ, ಉತ್ತರ ಕನ್ನಡ, ಬೆಳಗಾಂವಿ, ಬಿಜಾಪುರ, ಬಳ್ಳಾರಿ-ಅನಂತಪುರ, ಸೋಲಾಪುರ, ಸತಾರ ಜಿಲ್ಲೆಗಳ ಕನ್ನಡ ಭಾಗಗಳು, ಕೊಪ್ಪಳ ಮತ್ತು ಮುಂಬೈ ಕರ್ನಾಟಕ ಸಂಸ್ಥಾನಗಳು), (೩) ಹೈದರಾಬಾದು ಕರ್ನಾಟಕ (ಹೈದರಾಬಾದು ಸಂಸ್ಥಾನದ ಕನ್ನಡ ಜಿಲ್ಲೆಗಳು – ಕೊಪ್ಪಳವನ್ನು ಬಿಟ್ಟು) ಮತ್ತು (೪) ದಕ್ಷಿಣ ಕರ್ನಾಟಕ (ದಕ್ಷಿಣ ಕನ್ನಡ ಮತ್ತು ಕೊಡಗು)

**(೨) ಪ್ರತಿನಿಧಿಗಳ ಮಂಡಲಿ**

ಮೇಲೆಕಂಡ ಪ್ರತಿಯೊಂದು ಪ್ರಾಂತದಿಂದಲೂ ಪ್ರತಿನಿಧಿಗಳನ್ನು ಆಯ್ದು ಪ್ರತಿನಿಧಿ ಮಂಡಲಿಯನ್ನು ಯೋಜಿಸಲಾಗಿದೆ. ಒಟ್ಟು ಪ್ರತಿನಿಧಿಗಳ ಸಂಖ್ಯೆ ೫೦ ಮಂದಿ. ಈ ಪೈಕಿ ೨೫ ಮಂದಿಯನ್ನು ಆಯಾಪ್ರಾಂತದ ಜನಸಂಖ್ಯಾನುಗುಣವಾಗಿಯೂ, ಉಳಿದ ೨೫ಮಂದಿಯನ್ನು ಆಯಾ ಪ್ರಾಂತದ ಸದಸ್ಯ ಸಂಖ್ಯಾನುಸಾರವಾಗಿಯೂ ಹಂಚತಕ್ಕದ್ದೆಂದು ತೀರ್ಮಾನವಾದ ಮೇರೆಗೆ **ಈ ವರ್ಷ** ಮೈಸೂರು ಪ್ರಾಂತಕ್ಕೆ ೨೯ ಮಂದಿ, ಉತ್ತರಕರ್ನಾಟಕ ಪ್ರಾಂತಕ್ಕೆ ೧೫ ಮಂದಿ, ದಕ್ಷಿಣಕರ್ನಾಟಕ ಪ್ರಾಂತಕ್ಕೆ ೩ ಮಂದಿ, ಹೈದರಾಬಾದು ಪ್ರಾಂತಕ್ಕೆ ೩ ಮಂದಿ ಈ ರೀತಿ ಪ್ರತಿನಿಧಿಗಳ ಹಂಚಿಕೆಯಾಗಿದೆ.

**(೩) ಪ್ರಾಂತ ಸಮಿತಿಗಳು**

ಆಯಾ ಪ್ರಾಂತದ ಪ್ರತಿನಿಧಿಗಳೇ ಪ್ರಾಂತ ಸಮಿತಿಯಾಗಿರುವರು. ಪ್ರಾಂತ ಸಮಿತಿ ತನ್ನ ಪ್ರಾಂತದಲ್ಲಿ ಉತ್ಪನ್ನವಾಡಿದ ಸಾಮಾನ್ಯ ಸದಸ್ಯರ, ಸಾಮಾನ್ಯ ಅಂಗಸಂಸ್ಥೆಗಳ ಮತ್ತು ಅಭಿಮಾನಿಗಳ ಚಂದಾ ಮೊಬಲಗಿನ ಮೊತ್ತದಲ್ಲಿ ಒಂದು ಅಂಶವನ್ನು ಪ್ರಾಂತದ ಕೆಲಸಕ್ಕೆ ಉಳಿಸಿಕೊಂಡು, ಎರಡು ಅಂಶಗಳನ್ನು ಪರಿಷತ್ತಿಗೆ ಸಲ್ಲಿಸತಕ್ಕದ್ದು.

**(೪) ಕಾರ್ಯಸಮಿತಿ**

ಕೇಂದ್ರದಲ್ಲಿ ಪರಿಷತ್ತಿನ ಆಡಳಿತಗಳನ್ನೂ, ಅಖಿಲ ಕರ್ನಾಟಕ ವ್ಯಾಪ್ತಿಯುಳ್ಳ ಮುಖ್ಯ ಮುಖ್ಯ ಕಾರ್ಯಗಳನ್ನೂ ನಿರ್ವಹಿಸಲು ಅಧ್ಯಕ್ಷರಲ್ಲದೆ ಅಧಿಕಾರಿಗಳು (೩), ಅರಮನೆಯ ಪ್ರತಿನಿಧಿಗಳು (೧) ಈ ನಾಲ್ವರನ್ನೂ ಬಿಟ್ಟು ೮ ಮಂದಿ ಪ್ರಾಂತಪ್ರತಿನಿಧಿಗಳಾದ ಸದಸ್ಯರನ್ನುಳ್ಳ ಕಾರ್ಯಸಮಿತಿ ಏರ್ಪಟ್ಟಿದೆ. ಉತ್ತರ ಕರ್ನಾಟಕ ಪ್ರಾಂತಕ್ಕೆ ೫ ಮಂದಿ, ಮೈಸೂರು ಪ್ರಾಂತಕ್ಕೆ ಒಬ್ಬರು (ಮೇಲೆ ಹೇಳಿದ ನಾಲ್ವರೂ ಕೂಡಿ ಒಟ್ಟು ೫), ದಕ್ಷಿಣ ಕರ್ನಾಟಕ ಪ್ರಾಂತಕ್ಕೆ ಒಬ್ಬರು, ಮತ್ತು ಹೈದರಾಬಾದು ಪ್ರಾಂತಕ್ಕೆ ಒಬ್ಬರು. ಹೀಗೆ ಕಾರ್ಯಸಮಿತಿಯಲ್ಲಿ ಇರತಕ್ಕ ಒಟ್ಟು ಸದಸ್ಯರ ಸಂಖ್ಯೆ ೧೨.

**(೫) ಚುನಾವಣೆಯ ಕ್ರಮ**

ಇದುವರೆಗೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರು ಸೂಚನೆಯನ್ನು (Nomination) ಆಯಾ ಪ್ರಾಂತದ ಸದಸ್ಯರು ಮಾಡಿ, ಎಲ್ಲ ಸದಸ್ಯರೂ ಆಯ್ಕೆ (Election) ಮಾಡುತ್ತಿದ್ದರು. ಈಗ ಯಾವ ಪ್ರಾಂತದ ಸದಸ್ಯರು ಬೇಕಾದರೂ ಹೆಸರು ಸೂಚನೆಯನ್ನು ಮಾಡಬಹುದು. ಇದರಿಂದ ಪರಿಷತ್ತಿನ ಸರ್ವಸದಸ್ಯರೂ ಪ್ರತಿನಿಧಿಗಳನ್ನೂ, ಕಾರ್ಯಸಮಿತಿಯ ಸದಸ್ಯರನ್ನೂ ಹೆಸರು ಸೂಚಿಸಲೂ, ಚುನಾವಣೆ ಮಾಡಲೂ ಅರ್ಹರಾಗುತ್ತಾರೆ. ಚುನಾವಣೆ ವಾರ್ಷಿಕಾಧಿವೇಶನದಲ್ಲಿ ನಡೆಯುತ್ತದೆ. ಎಂದಿನಂತೆ ಸಕಲ ಸದಸ್ಯರೇ ಉಪಾಧ್ಯಕ್ಷರನ್ನೂ ಚುನಾಯಿಸುತ್ತಾರೆ. ಕಾರ್ಯದರ್ಶಿಗಳನ್ನೂ ಕೋಶಾಧ್ಯಕ್ಷರನ್ನೂ ಉಪಾಧ್ಯಕ್ಷರೇ ನೇಮಿಸಿಕೊಳ್ಳುವಂತೆ ತೀರ್ಮಾನವಾಗಿದೆ. ಈ ರೀತಿಯಲ್ಲಿ ಕಾರ್ಯಸಮಿತಿ ಅರೆಪಾಲು "ಕ್ಯಾಬಿನೆಟ್" ತತ್ವವನ್ನು ಅಂಗೀಕರಿಸಿದಂತಾಯಿತು. ಉಪಾಧ್ಯಕ್ಷರೇ ಇತರ ಸದಸ್ಯರನ್ನೂ ನೇಮಕ ಮಾಡಿಕೊಂಡು, ಪೂರ್ತಿ ಕ್ಯಾಬಿನೆಟ್ ಮಾಡಿಕೊಳ್ಳಬಹುದೆಂಬ ಸೂಚನೆ ಬಂದು ದೀರ್ಘಚರ್ಚೆ ನಡೆಯಿತು. ಸದ್ಯಕ್ಕೆ ಉಪಾಧ್ಯಕ್ಷರಿಗೆ ಇಷ್ಟೊಂದು ಅಧಿಕಾರವೂ ಜವಾಬ್ದಾರಿಯೂ ಬೇಡವೆಂಬುದಾಗಿ ಅಭಿಪ್ರಾಯಪಟ್ಟು ಈ ಸೂಚನೆಗೆ ಉಪಾಧ್ಯಕ್ಷರೇ ಒಪ್ಪಲಿಲ್ಲ. ಸೂಚನೆಯನ್ನು ಅಭಿಮತಕ್ಕೆ ಒಡ್ಡಿದಾಗ ಅದು ಬಹುಮತದಿಂದ ಬಿದ್ದುಹೋಯಿತು.

**ಈ ವರ್ಷದ ಆಯ್ಕೆಗಳು :**

ಮೇಲೆ ಕಂಡ ಹೊಸ ತೀರ್ಮಾನಗಳನ್ನು ಅನುಸರಿಸಿಯೇ ಈ ವರ್ಷದ ಪ್ರತಿನಿಧಿಮಂಡಲಿ ಮತ್ತು ಕಾರ್ಯಸಮಿತಿಯ ಸದಸ್ಯರು, ಉಪಾಧ್ಯಕ್ಷರು. ಮತ್ತು ಇತರ ಅಧಿಕಾರಿಗಳು ಇವರ ಆಯ್ಕೆಯಾಗಿದೆ. (ಪ್ರತಿನಿಧಿ ಮಂಡಲಿಯ ಸದಸ್ಯರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು ; ಕಾರ್ಯ ಸಮಿತಿಯ ಸದಸ್ಯರ ಹೆಸರನ್ನು ಇದೇ ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಕೊಟ್ಟಿದೆ.) ಉಪಾಧ್ಯಕ್ಷರಾದ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ತಾವು ಎರಡು ವರ್ಷಕ್ಕೆ ಚುನಾಯಿತರಾಗಿದ್ದರೂ, ಹೊಸ ಅಂಗರಚನೆಯ ಕಾಲದಲ್ಲಿ ಸದಸ್ಯರು ಸ್ವತಂತ್ರರಾಗಿರತಕ್ಕದ್ದೆಂದು ತಮ್ಮ ಸ್ಥಳವನ್ನು ಬಿಟ್ಟುಕೊಟ್ಟರು. ಹೊಸ ಚುನಾವಣೆಯಲ್ಲಿ, ಶ್ರೀ|| ಶ್ರೀಕಂಠಯ್ಯನವರೇ ಸರ್ವಾನುಮತದಿಂದ ಈ ವರ್ಷವೂ ಉಪಾಧ್ಯಕ್ಷರಾಗಿ ಆಯ್ದು ಬಂದರು; ಉಪಾಧ್ಯಕ್ಷರು ಶ್ರೀ|| ಸಿ. ಕೆ. ವೆಂಕಟರಾಮಯ್ಯನವರನ್ನು ಗೌರವ ಕಾರ್ಯದರ್ಶಿಯವರಾಗಿಯೂ, ಶ್ರೀ|| ಪಿ. ಸೀತಾರಾಮಯ್ಯನವರನ್ನು ಗೌರವ ಕೋಶಾಧ್ಯಕ್ಷರಾಗಿಯೂ ನೇಮಕ ಮಾಡಿದರು.

* * *

(೧೧೯ನೆಯ ಪುಟಕ್ಕೆ ಮುಂದುವರಿಸಿದೆ.)

ವಿಸ್ತಾರ ಪಡಿಸಿದರು. ಅವರ ಕಾಲದಲ್ಲಿ ಪರಿಷತ್ತಿಗೆ ಒಂದು ಹೊಸ ಯುಗ ಪ್ರಾರಂಭವಾಯಿತೆಂದು ಹೇಳಬೇಕು.

ಪರಿಷತ್ತಿನ ಈಗಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಮುಂದಾಳುತನದಲ್ಲಿ ಕಳೆದ ವರ್ಷದಲ್ಲಿ ಪರಿಷತ್ತು ಮೈಸೂರಿನ ಒಂದು ಹಳ್ಳಿಯಲ್ಲಿ, ಉತ್ತರ ಕರ್ನಾಟಕದಲ್ಲಿ ವಸಂತೋತ್ಸವನ್ನು ನಡಸಿ, 'ಕನ್ನಡ ಬಾವುಟ'ವನ್ನು ಪ್ರಕಟಿಸಿ, 'ಕನ್ನಡನಾಡಿನ ಚರಿತ್ರೆ'ಯನ್ನು ಬರಸುವ ಏರ್ಪಾಡುಮಾಡಿ, ಮಹಿಳೆಯರನ್ನು ಪರಿಷತ್ತಿಗೆ ಹೆಚ್ಚಾಗಿ ಸೇರಿಸಿ, ಹೊಸಹೊಸ ಕಾರ್ಯಗಳನ್ನು ನಡಸಿದ್ದಲ್ಲದೆ, ಮುಖ್ಯವಾಗಿ ಪರಿಷತ್ತಿನ ಘಟನೆಯಲ್ಲಿ ಮಾರ್ಪಾಟುಗಳನ್ನು ಮಾಡಿ ಪರಿಷತ್ತಿನ ದೌರ್ಬಲ್ಯಗಳನ್ನು ನಿವಾರಿಸಿ, ಅದು ಹೆಚ್ಚು ಬಲದಿಂದಲೂ, ಕಾರ್ಯಶಕ್ತಿಯಿಂದಲೂ, ಪ್ರಾಂತಗಳ ವಿಜೃಂಭಣೆಯಿಂದಲೂ ಮುಂದೆ ಸಾಗುವುದಕ್ಕೆ ತಳಹದಿಯನ್ನು ಹಾಕಿದೆ.

೧೯೩೮ನೆಯ ಡಿಸೆಂಬರಿನಲ್ಲಿ ಜಮಖಂಡಿಯಲ್ಲಾದ ವಾರ್ಷಿಕಾಧಿವೇಶನದಲ್ಲಿ ಪರಿಷತ್ತಿನ ನಿಬಂಧನೆಗಳನ್ನೆಲ್ಲ ಪರಿಷ್ಕರಿಸುವ ಸಲುವಾಗಿ ರಾಜಸೇವಾಸಕ್ತ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕವಾಯಿತಷ್ಟೆ. ಆ ಸಮಿತಿ, ಪರಿಷತ್ತಿನ ಉದ್ದೇಶ ಸಾಧನೆ ಕಾರ್ಯಕಲಾಪಗಳಲ್ಲಿ ಸಹಕರಿಸಲು ಒಂದು ಪ್ರತಿನಿಧಿಮಂಡಲಿ ಇರತಕ್ಕದ್ದೆಂದೂ, ಪರಿಷತ್ತಿನ (ಹಿಂದಿನ) ಕಾರ್ಯನಿರ್ವಾಹಕ ಮಂಡಲಿಯ ಯೋಜನೆಯೇ ಇದಕ್ಕೂ ಅನ್ವಯಿಸತಕ್ಕದ್ದೆಂದೂ, ಪರಿಷತ್ತಿನ ಆಡಳಿತವನ್ನು ನೋಡಿಕೊಳ್ಳಲು ೧೫ ಮಂದಿ ಸದಸ್ಯರುಳ್ಳ ಒಂದು ಕಾರ್ಯಸಮಿತಿಯಿರತಕ್ಕದ್ದೆಂದೂ, ಇದಕ್ಕೆ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ಅರಮನೆಯ ಪ್ರತಿನಿಧಿಗಳು ಇವರ ಜೊತೆಗೆ ನಾಲ್ಕುಪ್ರಾಂತಗಳಿಂದ ಇಬ್ಬಿಬ್ಬರಂತೆ ಎಂಟುಮಂದಿ ಪ್ರಾಂತ ಪ್ರತಿನಿಧಿಗಳಿರಬೇಕೆಂದೂ, ಮೈಸೂರು – ಕೊಡಗು ಒಂದು ಪ್ರಾಂತವಾಗಿಯೂ ಉತ್ತರ ಕರ್ನಾಟಕ ಸಂಸ್ಥಾನಗಳು ಮುಂಬೈ ಕರ್ನಾಟಕದೊಂದಿಗೆ ಸೇರಿ ಒಂದು ಪ್ರಾಂತವಾಗಿಯೂ, ಎರಡು ಪ್ರಾಂತಗಳನ್ನು ಕಡಮೆ ಮಾಡಬೇಕೆಂದೂ, ಪ್ರಾಂತಗಳ ಕೆಲಸಗಳನ್ನು ನಿರ್ವಹಿಸಲು ಪ್ರಾಂತ ಪ್ರತಿನಿಧಿಗಳನ್ನೊಳಗೊಂಡ ಪ್ರಾಂತಸಮಿತಿಗಳಿರತಕ್ಕದ್ದೆಂದೂ, ಪ್ರಾಂತದ ಉತ್ಪನ್ನದಲ್ಲಿ ಶೇಕಡ ೬೦ರಷ್ಟನ್ನು ಪರಿಷತ್ತಿಗೆ ಸಲ್ಲಿಸಿ, ಉಳಿದದ್ದನ್ನು ಪ್ರಾಂತದ ಕೆಲಸಕ್ಕೆ ವಿನಿಯೋಗಿಸಿಕೊಳ್ಳತಕ್ಕದ್ದೆಂದೂ ಸಲಹೆ ಮಾಡಿತು. ಸಕಲ ಸದಸ್ಯರ ಅಧಿವೇಶನ ಈ ವಿಚಾರವನ್ನು ಕೂಲಂಕಷವಾಗಿ ಪರ್ಯಾಲೋಚಿಸಿ ಕೆಲವು ಬದಲಾವಣೆಗಳೊಡನೆ ಮುಖ್ಯಾಂಶಗಳನ್ನು ಒಪ್ಪಿತು. ಈ ಹೊಸ ಅಂಗರಚನೆ ಹೇಗೆಂದರೆ—

**(೧) ಪ್ರಾಂತಗಳು ನಾಲ್ಕು**

ಪರಿಷತ್ತಿನ ಘಟನೆಯ ದೃಷ್ಟಿಯಿಂದ ಕನ್ನಡನಾಡನ್ನು ಹಿಂದೆ ಮೈಸೂರು, ಬೊಂಬಾಯಿ, ಮದರಾಸು, ಹೈದರಾಬಾದು, ಕೊಡಗು, ಉತ್ತರ ಕರ್ನಾಟಕ ಸಂಸ್ಥಾನಗಳು ಎಂದು ೬ ಪ್ರಾಂತಗಳಾಗಿ ವಿಂಗಡಿಸಿತ್ತು. ಈಗ ನಾಲ್ಕುಪ್ರಾಂತಗಳಾಗಿ ಪುನರ್ವಿಭಾಗವಾಗಿದೆ :—

(೧) ಮೈಸೂರು ಕರ್ನಾಟಕ (ಮೈಸೂರು ಸಂಸ್ಥಾನ, ನೀಲಗಿರಿ, ಕೊಯಮುತ್ತೂರು, ಕೊಳ್ಳೇಗಾಲ, ಸೇಲಂಗಳ ಕನ್ನಡ ಭಾಗಗಳು), (೨) ಉತ್ತರ ಕರ್ನಾಟಕ (ಧಾರವಾಡ, ಉತ್ತರ ಕನ್ನಡ, ಬೆಳಗಾಂವಿ, ಬಿಜಾಪುರ, ಬಳ್ಳಾರಿ-ಅನಂತಪುರ, ಸೋಲಾಪುರ, ಸತಾರ ಜಿಲ್ಲೆಗಳ ಕನ್ನಡ ಭಾಗಗಳು, ಕೊಪ್ಪಳ ಮತ್ತು ಮುಂಬೈ ಕರ್ನಾಟಕ ಸಂಸ್ಥಾನಗಳು), (೩) ಹೈದರಾಬಾದು ಕರ್ನಾಟಕ (ಹೈದರಾಬಾದು ಸಂಸ್ಥಾನದ ಕನ್ನಡ ಜಿಲ್ಲೆಗಳು – ಕೊಪ್ಪಳವನ್ನು ಬಿಟ್ಟು) ಮತ್ತು (೪) ದಕ್ಷಿಣ ಕರ್ನಾಟಕ (ದಕ್ಷಿಣ ಕನ್ನಡ ಮತ್ತು ಕೊಡಗು)

**(೨) ಪ್ರತಿನಿಧಿಗಳ ಮಂಡಲಿ**

ಮೇಲೆಕಂಡ ಪ್ರತಿಯೊಂದು ಪ್ರಾಂತದಿಂದಲೂ ಪ್ರತಿನಿಧಿಗಳನ್ನು ಆಯ್ದು ಪ್ರತಿನಿಧಿ ಮಂಡಲಿಯನ್ನು ಯೋಜಿಸಲಾಗಿದೆ. ಒಟ್ಟು ಪ್ರತಿನಿಧಿಗಳ ಸಂಖ್ಯೆ ೫೦ ಮಂದಿ. ಈ ಪೈಕಿ ೨೫ ಮಂದಿಯನ್ನು ಆಯಾಪ್ರಾಂತದ ಜನಸಂಖ್ಯಾನುಗುಣವಾಗಿಯೂ, ಉಳಿದ ೨೫ಮಂದಿಯನ್ನು ಆಯಾ ಪ್ರಾಂತದ ಸದಸ್ಯ ಸಂಖ್ಯಾನುಸಾರವಾಗಿಯೂ ಹಂಚತಕ್ಕದ್ದೆಂದು ತೀರ್ಮಾನವಾದ ಮೇರೆಗೆ **ಈ ವರ್ಷ** ಮೈಸೂರು ಪ್ರಾಂತಕ್ಕೆ ೨೯ ಮಂದಿ, ಉತ್ತರಕರ್ನಾಟಕ ಪ್ರಾಂತಕ್ಕೆ ೧೫ ಮಂದಿ, ದಕ್ಷಿಣಕರ್ನಾಟಕ ಪ್ರಾಂತಕ್ಕೆ ೩ ಮಂದಿ, ಹೈದರಾಬಾದು ಪ್ರಾಂತಕ್ಕೆ ೩ ಮಂದಿ ಈ ರೀತಿ ೫೦ಪ್ರತಿನಿಧಿಗಳ ಹಂಚಿಕೆಯಾಗಿದೆ.

**(೩) ಪ್ರಾಂತ ಸಮಿತಿಗಳು**

ಆಯಾ ಪ್ರಾಂತದ ಪ್ರತಿನಿಧಿಗಳೇ ಪ್ರಾಂತ ಸಮಿತಿಯಾಗಿರುವರು. ಪ್ರಾಂತ ಸಮಿತಿ ತನ್ನ ಪ್ರಾಂತದಲ್ಲಿ ಉತ್ಪನ್ನವಾದ ಸಾಮಾನ್ಯ ಸದಸ್ಯರ, ಸಾಮಾನ್ಯ ಅಂಗಸಂಸ್ಥೆಗಳ ಮತ್ತು ಅಭಿಮಾನಿಗಳ ಚಂದಾ ಮೊಬಲಗಿನ ಮೊತ್ತದಲ್ಲಿ ಒಂದು ಅಂಶವನ್ನು ಪ್ರಾಂತದ ಕೆಲಸಕ್ಕೆ ಉಳಿಸಿಕೊಂಡು, ಎರಡು ಅಂಶಗಳನ್ನು ಪರಿಷತ್ತಿಗೆ ಸಲ್ಲಿಸತಕ್ಕದ್ದು.

**(೪) ಕಾರ್ಯಸಮಿತಿ**

ಕೇಂದ್ರದಲ್ಲಿ ಪರಿಷತ್ತಿನ ಆಡಳಿತಗಳನ್ನೂ, ಅಖಿಲ ಕರ್ನಾಟಕ ವ್ಯಾಪ್ತಿಯುಳ್ಳ ಮುಖ್ಯ ಮುಖ್ಯ ಕಾರ್ಯಗಳನ್ನೂ ನಿರ್ವಹಿಸಲು ಅಧ್ಯಕ್ಷರಲ್ಲದೆ ಅಧಿಕಾರಿಗಳು (೬), ಅರಮನೆಯ ಪ್ರತಿನಿಧಿಗಳು (೧) ಈ ನಾಲ್ವರನ್ನೂ ಬಿಟ್ಟು ೮ ಮಂದಿ ಪ್ರಾಂತಪ್ರತಿನಿಧಿಗಳಾದ ಸದಸ್ಯರನ್ನುಳ್ಳ ಕಾರ್ಯಸಮಿತಿ ಏರ್ಪಟ್ಟಿದೆ. ಉತ್ತರ ಕರ್ನಾಟಕ ಪ್ರಾಂತಕ್ಕೆ ೫ ಮಂದಿ, ಮೈಸೂರು ಪ್ರಾಂತಕ್ಕೆ ಒಬ್ಬರು (ಮೇಲೆ ಹೇಳಿದ ನಾಲ್ವರೂ ಕೂಡಿ ಒಟ್ಟು ೫), ದಕ್ಷಿಣ ಕರ್ನಾಟಕ ಪ್ರಾಂತಕ್ಕೆ ಒಬ್ಬರು, ಮತ್ತು ಹೈದರಾಬಾದು ಪ್ರಾಂತಕ್ಕೆ ಒಬ್ಬರು. ಹೀಗೆ ಕಾರ್ಯಸಮಿತಿಯಲ್ಲಿ ಇರತಕ್ಕ ಒಟ್ಟು ಸದಸ್ಯರ ಸಂಖ್ಯೆ ೧೫.

**(೫) ಚುನಾವಣೆಯ ಕ್ರಮ**

ಇದುವರೆಗೆ ಕಾರ್ಯನಿರ್ವಾಹಕ ಮಂಡಲಿಯ ಸದಸ್ಯರ ಹೆಸರು ಸೂಚನೆಯನ್ನು (Nomination) ಆಯಾ ಪ್ರಾಂತದ ಸದಸ್ಯರು ಮಾಡಿ, ಎಲ್ಲ ಸದಸ್ಯರೂ ಆಯ್ಕೆ (Election) ಮಾಡುತ್ತಿದ್ದರು. ಈಗ ಯಾವ ಪ್ರಾಂತದ ಸದಸ್ಯರು ಬೇಕಾದರೂ ಹೆಸರು ಸೂಚನೆಯನ್ನು ಮಾಡಬಹುದು. ಇದರಿಂದ ಪರಿಷತ್ತಿನ ಸರ್ವಸದಸ್ಯರೂ ಪ್ರತಿನಿಧಿಗಳನ್ನೂ, ಕಾರ್ಯಸಮಿತಿಯ ಸದಸ್ಯರನ್ನೂ ಹೆಸರು ಸೂಚಿಸಲೂ, ಚುನಾವಣೆ ಮಾಡಲೂ ಅರ್ಹರಾಗುತ್ತಾರೆ. ಚುನಾವಣೆ ವಾರ್ಷಿಕಾಧಿವೇಶನದಲ್ಲಿ ನಡೆಯುತ್ತದೆ. ಎಂದಿನಂತೆ ಸಕಲ ಸದಸ್ಯರೇ ಉಪಾಧ್ಯಕ್ಷರನ್ನೂ ಚುನಾಯಿಸುತ್ತಾರೆ. ಕಾರ್ಯದರ್ಶಿಗಳನ್ನೂ ಕೋಶಾಧ್ಯಕ್ಷರನ್ನೂ ಉಪಾಧ್ಯಕ್ಷರೇ ನೇಮಿಸಿಕೊಳ್ಳುವಂತೆ ತೀರ್ಮಾನವಾಗಿದೆ. ಈ ರೀತಿಯಲ್ಲಿ ಕಾರ್ಯಸಮಿತಿ ಅರೆಪಾಲು "ಕ್ಯಾಬಿನೆಟ್" ತತ್ತ್ವವನ್ನು ಅಂಗೀಕರಿಸಿದಂತಾಯಿತು. ಉಪಾಧ್ಯಕ್ಷರೇ ಇತರ ಸದಸ್ಯರನ್ನೂ ನೇಮಕ ಮಾಡಿಕೊಂಡು, ಪೂರ್ತಿ ಕ್ಯಾಬಿನೆಟ್ ಮಾಡಿಕೊಳ್ಳಬಹುದೆಂಬ ಸೂಚನೆ ಬಂದು ದೀರ್ಘಚರ್ಚೆ ನಡೆಯಿತು. ಸದ್ಯಕ್ಕೆ ಉಪಾಧ್ಯಕ್ಷರಿಗೆ ಇಷ್ಟೊಂದು ಅಧಿಕಾರವೂ ಜವಾಬ್ದಾರಿಯೂ ಬೇಡವೆಂಬುದಾಗಿ ಅಭಿಪ್ರಾಯಪಟ್ಟು ಈ ಸೂಚನೆಗೆ ಉಪಾಧ್ಯಕ್ಷರೇ ಒಪ್ಪಲಿಲ್ಲ. ಸೂಚನೆಯನ್ನು ಅಭಿಮತಕ್ಕೆ ಒಡ್ಡಿದಾಗ ಅದು ಬಹುಮತದಿಂದ ಬಿದ್ದುಹೋಯಿತು.

**ಈ ವರ್ಷದ ಆಯ್ಕೆಗಳು :**

ಮೇಲೆ ಕಂಡ ಹೊಸ ತೀರ್ಮಾನಗಳನ್ನು ಅನುಸರಿಸಿಯೇ ಈ ವರ್ಷದ ಪ್ರತಿನಿಧಿಮಂಡಲಿ ಮತ್ತು ಕಾರ್ಯಸಮಿತಿಯ ಸದಸ್ಯರು, ಉಪಾಧ್ಯಕ್ಷರು. ಮತ್ತು ಇತರ ಅಧಿಕಾರಿಗಳು ಇವರ ಆಯ್ಕೆಯಾಗಿದೆ. (ಪ್ರತಿನಿಧಿ ಮಂಡಲಿಯ ಸದಸ್ಯರ ಹೆಸರುಗಳನ್ನು ಮುಂದಿನ ಸಂಚಿಕೆಯಲ್ಲಿ ಕೊಡಲಾಗುವುದು ; ಕಾರ್ಯ ಸಮಿತಿಯ ಸದಸ್ಯರ ಹೆಸರನ್ನು ಇದೇ ಸಂಚಿಕೆಯಲ್ಲಿ ಪ್ರತ್ಯೇಕವಾಗಿ ಕೊಟ್ಟಿದೆ.) ಉಪಾಧ್ಯಕ್ಷರಾದ ಶ್ರೀ|| ಬಿ. ಎಂ. ಶ್ರೀಕಂಠಯ್ಯನವರು ತಾವು ಎರಡು ವರ್ಷಕ್ಕೆ ಚುನಾಯಿತರಾಗಿದ್ದರೂ, ಹೊಸ ಅಂಗರಚನೆಯ ಕಾಲದಲ್ಲಿ ಸದಸ್ಯರು ಸ್ವತಂತ್ರರಾಗಿರತಕ್ಕದ್ದೆಂದು ತಮ್ಮ ಸ್ಥಳವನ್ನು ಬಿಟ್ಟುಕೊಟ್ಟರು. ಹೊಸ ಚುನಾವಣೆಯಲ್ಲಿ, ಶ್ರೀ|| ಶ್ರೀಕಂಠಯ್ಯನವರೇ ಸರ್ವಾನುಮತದಿಂದ ಈ ವರ್ಷವೂ ಉಪಾಧ್ಯಕ್ಷರಾಗಿ ಆಯ್ದು ಬಂದರು; ಉಪಾಧ್ಯಕ್ಷರು ಶ್ರೀ|| ಸಿ. ಕೆ. ವೆಂಕಟರಾಮಯ್ಯನವರನ್ನು ಗೌರವ ಕಾರ್ಯದರ್ಶಿಯನ್ನಾಗಿಯೂ, ಶ್ರೀ|| ಪಿ. ಸೀತಾರಾಮಯ್ಯನವರನ್ನು ಗೌರವ ಕೋಶಾಧ್ಯಕ್ಷರಾಗಿಯೂ ನೇಮಕ ಮಾಡಿದರು.

* * *

(೧೧೯ನೆಯ ಪುಟಕ್ಕೆ ಮುಂದುವರಿಸಿದೆ.)

## ಕನ್ನಡ ಸಾಹಿತ್ಯ ಸಮ್ಮೇಳನ
## ೨೪ನೆಯ ಅಧಿವೇಶನ, ಬಳ್ಳಾರಿ
### ಸೊಂಡೂರು ಮಹಾರಾಜರ ಪ್ರಾರಂಭ ಭಾಷಣ

ಮಾನ್ಯರಾದ ಮಹನೀಯರೇ, ಮಹಿಳೆಯರೇ—

ಇಂದಿನ ಈ ಪ್ರಸಂಗವು ನಮ್ಮ ಆಯುಷ್ಯದಲ್ಲಿಯೇ ಅಪೂರ್ವವಾಗಿದೆ. ತಮ್ಮ ಸತ್ಕಾರಸಭೆಯ ಅಧ್ಯಕ್ಷರು ಸೂಚಿಸಿದ ಪ್ರಕಾರ ಅಖಿಲ ಕರ್ನಾಟಕದ ೨೪ನೆಯ ಈ ಸಾಹಿತ್ಯ ಸಮ್ಮೇಲನದ ಉದ್ಘಾಟನವನ್ನು ನಾವು ಮಾಡಬೇಕಾಗಿದೆ. ಸಮ್ಮೇಲನದ ಸತ್ಕಾರಸಮಿತಿಯವರು ಈ ಕಾರ್ಯಕ್ಕೆ ನಮ್ಮನ್ನು ಕರೆದು ನಮ್ಮ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾರೆಂದು ನಾವು ತಿಳಿಯುತ್ತೇವೆ. ನಾವು ಹುಟ್ಟಿದ್ದು ಕನ್ನಡ ನಾಡು, ಬೆಳೆದದ್ದು ಕನ್ನಡ ನಾಡು. ಆದರೂ ಕೆಲವೊಂದು ಕಾರಣಗಳ ಮೂಲಕ ನಾವು ಕನ್ನಡ ನಾಡಿನ ಹೊರಗೆ ನಾಲ್ಕು ಅಕ್ಷರಗಳನ್ನು ಕಲಿತು ವಿದ್ಯಾಭ್ಯಾಸ ಮಾಡಬೇಕಾಯಿತು. ಆದುದರಿಂದ ನಾವು ನಮ್ಮ ಜನ್ಮಭೂಮಿಗೆ ಬಹಳ ದಿವಸ ಎರವಾಗಬೇಕಾಯಿತು. ನಮ್ಮ ಜೀವನದೊಳಗಿನ ಜ್ಞಾನಸಂಪಾದನೆಯ ಕಾಲವನ್ನೆಲ್ಲಾ ಕನ್ನಡ ನಾಡಿನ ಹೊರಗೆ ನಾವು ಕಳೆಯಬೇಕಾದುದರಿಂದ ಕನ್ನಡ ಭಾಷೆ, ವಾಙ್ಮಯ, ಇತಿಹಾಸ ಮೊದಲಾದ ಕನ್ನಡ ಸಂಸ್ಕೃತಿಯ ಘನವಿಷಯಗಳ ಪರಿಚಯವು ನಮಗೆ ಆಗುವುದಕ್ಕೆ ಅವಕಾಶ ದೊರೆಯಲಿಲ್ಲ. ಆದುದರಿಂದ ಕನ್ನಡ ನಾಡಿನ ಸರ್ವತೋಮುಖವಾದ ಉನ್ನತಿಗಾಗಿ ಯತ್ನಿಸುವ ತಮ್ಮಂತಹ ಮಹನೀಯರ ಮಹಾ ಸಮ್ಮೇಲನದ ಉದ್ಘಾಟನ ಮಾಡುವ ಜವಾಬುದಾರಿಯನ್ನು ಹೊರುವುದಕ್ಕೆ ನಮಗೆ ಒಂದು ಬಗೆಯ ಅಧೈರ್ಯವುಂಟಾಗಿದೆ. ಆದರೆ ಮನುಷ್ಯಬುದ್ಧಿಗೆ ನಿಲುಕದಾದ ಯಾವದೋ ಅದೃಷ್ಟಶಕ್ತಿಯ ದೈವಿಕಲೀಲೆಯ ಪ್ರಭಾವದಿಂದ ನಾವು ನಮ್ಮ ಮುಂದಿನ ಆಯುಷ್ಯವನ್ನೆಲ್ಲ ನಾವು ಹುಟ್ಟಿದ ಕನ್ನಡ ನಾಡಿನಲ್ಲಿಯೇ ಕಳೆಯತಕ್ಕ ಭಾಗ್ಯವು ನಮಗೆ ದೊರೆತಿದೆ. ಅದೇ ಶಕ್ತಿಯ ದೈವಿಕ ಘಟನೆಯಿಂದ ಇಡಿಯ ಕನ್ನಡ ನಾಡಿನ ತಮ್ಮಂಥ ಸುಸಂಸ್ಕೃತ ಮಹಾಜನರ ಪರಿಚಯವಾಗುವ ಈ ಸುಯೋಗವು ಬಂದಿರುವದೆಂದು ನಾವು ಭಾವಿಸುತ್ತೇವೆ. ಅಂತೇ ಈ ಕಾರ್ಯವನ್ನು ಆನಂದದಿಂದ ಕೈಗೊಂಡಿದ್ದೇವೆ.

ಮಹನೀಯರೇ, ಕನ್ನಡನಾಡಿನ ವಿಶೇಷ ಪರಿಚಯವು ನಮಗಿಲ್ಲವೆಂಬ ಸಂಗತಿಯು ತಮಗೆ ತಿಳಿದೇ ಇದೆ. ಆದರೂ ಸೊಂಡೂರು ಸಂಸ್ಥಾನದಲ್ಲಿ ಬಂದು ನಿಂತಾಗಿನಿಂದ, ಕನ್ನಡ ನಾಡಿನ ಭಾಷೆ ಮೊದಲಾದ ಸಂಸ್ಕೃತಿಯ ವಿಷಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ನಡಸಿದ್ದೇವೆ. ಆ ಪ್ರಯತ್ನದ ಫಲವಾಗಿ ಕನ್ನಡನಾಡಿನ ಪ್ರಾಚೀನ ಮಹತ್ವವು ನಮಗೆ ಚೆನ್ನಾಗಿಯೇ ನಿದರ್ಶನಕ್ಕೆ ಬರುತ್ತಿದೆ. ಸಾಹಿತ್ಯ, ಲಲಿತಕಲೆ, ವ್ಯಾಪಾರ, ಉದ್ಯೋಗ, ರಾಜಕಾರಣ, ಪರಾಕ್ರಮ ಮೊದಲಾದ ಎಲ್ಲಾ ವಿಷಯಗಳಲ್ಲಿ ಕರ್ನಾಟಕವು ಹಿಂದೂಸ್ಥಾನದ ಯಾವ ಭಾಗಕ್ಕೂ ಹಿಂದಿಲ್ಲವೆಂಬುದು ತಮ್ಮಂತೆಯೇ ನಮಗೂ ಅಭಿಮಾನದ ಮಾತಾಗಿದೆ. ಕೆಲವು ಪ್ರಸಂಗಗಳಲ್ಲಿ ಕರ್ನಾಟಕವೇ ಮಿಕ್ಕ ಭಾರತಕ್ಕೆ ಮಾರ್ಗದರ್ಶಕವಾಗಿರುವದೆಂದು ಕಂಡುಬರುತ್ತದೆ. ಈಗ ಎರಡು ವರ್ಷಗಳ ಹಿಂದೆ ಇಲ್ಲಿಯ ಸಮೀಪದಲ್ಲಿ ಹಂಪಿಯಲ್ಲಿ ನಡೆದ ಶ್ರೀ ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ಜನಾಂಗದ ಈ ಸಾಮ್ರಾಜ್ಯದ ಘನತೆ, ಪರಾಕ್ರಮ, ವೈಭವಗಳನ್ನು ಇಡೀ ಭಾರತವೇ ಕೊಂಡಾಡಿ, ಅದನ್ನು ಸ್ಥಾಪಿಸಿದ ಮಹಾನುಭಾವರ ಹಾಗೂ ಅವರ ತರುವಾಯ ಅದರ ಪ್ರತಾಪವನ್ನು ಬೆಳಗಿಸಿದ ಮಹಾಪುರುಷರ ದಿವ್ಯಸ್ಮರಣಾರ್ಥವಾಗಿ ಭಾರತವು ತನ್ನ ಭಕ್ತಿಪೂರ್ವಕವಾದ ಶ್ರದ್ಧಾಂಜಲಿಗಳನ್ನು ಸಮರ್ಪಿಸಿದೆ. ಭಾರತೀಯ ಇತಿಹಾಸದಲ್ಲಿ ವಿಜಯನಗರದ ಕಾಲವು ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದೆಂಬ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಅದೇ ಅವಧಿಯಲ್ಲಿ ಕನ್ನಡ ಜನಾಂಗದ ಸಾಂಸ್ಕೃತಿಕ ಸದ್ಗುಣಗಳು ಪರಮಾವಧಿಯ ಉತ್ಕರ್ಷವನ್ನು ಹೊಂದಿದವೆಂಬುದು ಯಾರಿಗೂ ತಿಳಿಯದ ಮಾತಲ್ಲ. ಒಂದು ಜನಾಂಗದಲ್ಲಿ ಸದ್ಗುಣಗಳ ಉತ್ಕರ್ಷವೆಂಬುದು ಪರಮಾವಧಿಸ್ಥಿತಿಗೆ ಮುಟ್ಟಬೇಕಾದರೆ ಅದು ಆಕಸ್ಮಿಕವಾಗಿಯಾಗಲಾರದು. ಅದಕ್ಕೆ ಎಷ್ಟೋ ಶತಮಾನಗಳ ಕ್ರಮಶಃ ಬೆಳವಣಿಗೆಯ ಪರಂಪರೆಯು ಬೇಕಾಗುತ್ತದೆ. ಇದು ಉತ್ಕ್ರಾಂತಿ ತತ್ವದ ಸಿದ್ಧಾಂತವಾಗಿದೆ. ಇದಕ್ಕನುಸರಿಸಿ ನೋಡಿದರೆ ವಿಜಯನಗರದ ಕಾಲದ ಕನ್ನಡ ಜನಾಂಗದ ಉತ್ಕರ್ಷಕ್ಕೆ ಸಾವಿರಾರು ವರ್ಷಗಳ ಪೂರ್ವಪರಂಪರೆಯು ಆಧಾರವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಕನ್ನಡನಾಡಿನ ಬಹು ಪುರಾತನ ಇತಿಹಾಸವು ಇದನ್ನೇ ಸಾರುತ್ತದೆ. ಹೀಗೆ ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿಯಿಂದ ಬೆಳೆದುಬಂದ ಕನ್ನಡನಾಡಿನ ಉಜ್ವಲ ಪರಂಪರೆಯು ಯಾರಿಗೆ ಅಭಿಮಾನಕಾರಕವಾಗಲಿಕ್ಕಿಲ್ಲ?

ಮುಂದೆ ಕಾಲ ಬದಲಾಯಿತು. ವಿಜಯನಗರದ ಸಾಮ್ರಾಜ್ಯದ ನಾಶದೊಂದಿಗೆ ಕನ್ನಡ ಜನಾಂಗವು ಅಧಃಪತನದ ಹಾದಿಗೆ ಹತ್ತಿತು. ಅಂದಿನಿಂದ ಇಂದಿನವರೆಗೆ ನಾಲ್ಕು ನೂರು ವರ್ಷಗಳಲ್ಲಿ ನಮ್ಮ ಹಿಂದೂಸ್ಥಾನವೇ ಒಂದು ಬಗೆಯಿಂದ ಅಪಕರ್ಷದ ದಾರಿಯನ್ನು ತುಳಿಯುತ್ತಾ ನಡೆದಿದೆ. ಕನ್ನಡ ಜನಾಂಗವಂತೂ ಹೇಳಹೆಸರಿಲ್ಲದ ದಾರುಣಾವಸ್ಥೆಗೆ ಗುರಿಯಾಗಬೇಕಾಗಿದೆ. ಇಂಥ ಅನುಕಂಪನೀಯ, ಅಸಹಾಯ ಸ್ಥಿತಿಯಲ್ಲಿಯೂ ೨೫ ವರ್ಷಗಳಿಂದ ಕನ್ನಡ ನಾಡಿನ ಎಲ್ಲ ಬಗೆಯ ಉನ್ನತಿಗೆ ಆಧಾರವಾದ ಕನ್ನಡ ಸಾಹಿತ್ಯವನ್ನು ಬೆಳಸಲು ಕರ್ನಾಟಕ ಸಾಹಿತ್ಯ ಪರಿಷತ್ತು ಅಖಂಡವಾಗಿ ನಡಸುವ ಮಹತ್ಕಾರ್ಯವು ತಕ್ಕಮಟ್ಟಿಗೆ ನಮ್ಮ ಅವಗಾಹನೆಗೆ ಬಂದಿದೆ. ಮೈಸೂರಿನ ಶ್ರೀಮನ್ಮಹಾರಾಜರವರು ಹಾಗೂ ಶ್ರೀಕಂಠೀರವ ನರಸಿಂಹರಾಜ ಯುವರಾಜರವರ ಕೃಪಾಪೂರ್ಣ ಆಶ್ರಯದಲ್ಲಿ ಪರಿಷತ್ತಿನ ಕಾರ್ಯಗಳು ಶ್ರೇಯಸ್ಕರವಾಗಿ ಮುಂದುವರಿಯುತ್ತಿರುವದು ನಮಗೆ ತಿಳಿದಿದೆ. ಹಾಗೆಯೇ ಎಚ್ಚತ್ತ ಕನ್ನಡನಾಡಿನ ಮಹಾಜನರ ಸಹಾಯದಿಂದ ಕರ್ನಾಟಕದ ಪುನರುದ್ಧಾರಕ್ಕಾಗಿ ನಡೆದಿರುವ ಅನೇಕ ಬಗೆಯ ಚಟುವಟಿಕೆಗಳನ್ನು ನಾವು ಕುತೂಹಲಚಿತ್ತದಿಂದ ನಿರೀಕ್ಷಿಸುತಿದ್ದೇವೆ. ಇಂಥ ಪ್ರಸಂಗದಲ್ಲಿ ಕನ್ನಡ ನಾಡಿನ ಮಾನ್ಯಪ್ರತಿನಿಧಿಗಳಾಗಿ ಇಲ್ಲಿ ಕೂಡಿರುವ ತಮ್ಮ ಕಾರ್ಯಕುತೂಹಲವನ್ನು ಪ್ರತ್ಯಕ್ಷ ನೋಡುವ ಪ್ರಸಂಗವು ದೊರೆತದ್ದು ನಮಗೆ ಬಹಳ ಸಂತೋಷದ ಮಾತಾಗಿದೆ. ಕನ್ನಡ ಜನಾಂಗದ ಒಂದು ಭಾಗವೇ ಆಗಿರುವ ಸಾವಿರಾರು ಕನ್ನಡ ಪ್ರಜಾಬಾಂಧವರ ಸುಖದುಃಖಗಳಲ್ಲಿ ಸಮಭಾಗಿಯಾಗಿ ಅವರನ್ನು ತಕ್ಕಮಟ್ಟಿಗಾದರೂ ಉತ್ಕರ್ಷದ ದಾರಿಯಿಂದ ಮುಂದಕ್ಕೆ ಸಾಗಿಸುವ ಪ್ರಯತ್ನವನ್ನು ಕೈಲಾದಮಟ್ಟಿಗೂ ಮಾಡುವ ಜವಾಬುದಾರಿಯು ನಮ್ಮ ಮೇಲಿರುವದರಿಂದ ತಮ್ಮಂಥವರ ಈ ಪ್ರಯತ್ನಗಳು ನಮಗೆ ಮಾರ್ಗದರ್ಶಕವಾಗುವವೆಂದು ನಮಗೆ ಆತ್ಮಾನಂದವಾಗಿದೆ. ಮತ್ತು ಈ ಶುಭಪ್ರಸಂಗವು ಹಿಂದೆ ಹೇಳಿದಂತೆ ದೈವಿಕ ಅನುಗ್ರಹದಿಂದಲೇ ನಮಗೆ ದೊರೆತಿರುವದೆಂದು ನಾವು ತಿಳಿಯುತ್ತೇವೆ. ಕನ್ನಡ ವಾಙ್ಮಯದಲ್ಲಿ ಹೊಸ ಬಗೆಯ ವಿಚಾರಗಳನ್ನು ಸಮಾವೇಶಗೊಳಿಸಿ ಕನ್ನಡ ಸಾಹಿತ್ಯಕ್ಕೆ ಒಂದು ಪ್ರಕಾರದ ಹೊಸ ತೇಜಸ್ಸನ್ನು ತಂದುಕೊಡುವರಲ್ಲಿ ಶ್ರೀಮಾನ್ ದಿವಾಕರ ರಂಗರಾಯರ ಕೀರ್ತಿಯುಂಟು.



ಶ್ರೀಮಂತ ಯಶವಂತರಾವ ಘೋರ್ಪಡೆಯವರು
ಸೊಂಡೂರು ಮಹಾರಾಜರು

# ಕನ್ನಡ ಸಾಹಿತ್ಯ ಸಮ್ಮೇಳನ
## ೨೪ನೆಯ ಅಧಿವೇಶನ, ಬಳ್ಳಾರಿ
### ಸೊಂಡೂರು ಮಹಾರಾಜರ ಪ್ರಾರಂಭ ಭಾಷಣ

ಮಾನ್ಯರಾದ ಮಹನೀಯರೇ, ಮಹಿಳೆಯರೇ—

ಇಂದಿನ ಈ ಪ್ರಸಂಗವು ನಮ್ಮ ಆಯುಷ್ಯದಲ್ಲಿಯೇ ಅಪೂರ್ವವಾಗಿದೆ. ತಮ್ಮ ಸತ್ಕಾರಸಭೆಯ ಅಧ್ಯಕ್ಷರು ಸೂಚಿಸಿದ ಪ್ರಕಾರ ಅಖಿಲ ಕರ್ನಾಟಕದ ೨೪ನೆಯ ಈ ಸಾಹಿತ್ಯ ಸಮ್ಮೇಲನದ ಉದ್ಘಾಟನವನ್ನು ನಾವು ಮಾಡಬೇಕಾಗಿದೆ. ಸಮ್ಮೇಲನದ ಸತ್ಕಾರಸಮಿತಿಯವರು ಈ ಕಾರ್ಯಕ್ಕೆ ನಮ್ಮನ್ನು ಕರೆದು ನಮ್ಮ ಮೇಲೆ ದೊಡ್ಡ ಉಪಕಾರವನ್ನು ಮಾಡಿದ್ದಾರೆಂದು ನಾವು ತಿಳಿಯುತ್ತೇವೆ. ನಾವು ಹುಟ್ಟಿದ್ದು ಕನ್ನಡ ನಾಡು, ಬೆಳೆದದ್ದು ಕನ್ನಡ ನಾಡು. ಆದರೂ ಕೆಲವೊಂದು ಕಾರಣಗಳ ಮೂಲಕ ನಾವು ಕನ್ನಡ ನಾಡಿನ ಹೊರಗೆ ನಾಲ್ಕು ಅಕ್ಷರಗಳನ್ನು ಕಲಿತು ವಿದ್ಯಾಭ್ಯಾಸ ಮಾಡಬೇಕಾಯಿತು. ಆದುದರಿಂದ ನಾವು ನಮ್ಮ ಜನ್ಮಭೂಮಿಗೆ ಬಹಳ ದಿವಸ ಎರವಾಗಬೇಕಾಯಿತು. ನಮ್ಮ ಜೀವನದೊಳಗಿನ ಜ್ಞಾನಸಂಪಾದನೆಯ ಕಾಲವನ್ನೆಲ್ಲಾ ಕನ್ನಡ ನಾಡಿನ ಹೊರಗೆ ನಾವು ಕಳೆಯಬೇಕಾದುದರಿಂದ ಕನ್ನಡ ಭಾಷೆ, ವಾಙ್ಮಯ, ಇತಿಹಾಸ ಮೊದಲಾದ ಕನ್ನಡ ಸಂಸ್ಕೃತಿಯ ಘನವಿಷಯಗಳ ಪರಿಚಯವು ನಮಗೆ ಆಗುವುದಕ್ಕೆ ಅವಕಾಶ ದೊರೆಯಲಿಲ್ಲ. ಆದುದರಿಂದ ಕನ್ನಡ ನಾಡಿನ ಸರ್ವತೋಮುಖವಾದ ಉನ್ನತಿಗಾಗಿ ಯತ್ನಿಸುವ ತಮ್ಮಂತಹ ಮಹನೀಯರ ಮಹಾ ಸಮ್ಮೇಲನದ ಉದ್ಘಾಟನ ಮಾಡುವ ಜವಾಬುದಾರಿಯನ್ನು ಹೊರುವುದಕ್ಕೆ ನಮಗೆ ಒಂದು ಬಗೆಯ ಅಧೈರ್ಯವುಂಟಾಗಿದೆ. ಆದರೆ ಮನುಷ್ಯಬುದ್ಧಿಗೆ ನಿಲುಕದಾದ ಯಾವದೋ ಅದೃಷ್ಟಶಕ್ತಿಯ ದೈವಿಕಲೀಲೆಯ ಪ್ರಭಾವದಿಂದ ನಾವು ನಮ್ಮ ಮುಂದಿನ ಆಯುಷ್ಯವನ್ನೆಲ್ಲ ನಾವು ಹುಟ್ಟಿದ ಕನ್ನಡ ನಾಡಿನಲ್ಲಿಯೇ ಕಳೆಯತಕ್ಕ ಭಾಗ್ಯವು ನಮಗೆ ದೊರೆತಿದೆ. ಅದೇ ಶಕ್ತಿಯ ದೈವಿಕ ಘಟನೆಯಿಂದ ಇಡಿಯ ಕನ್ನಡ ನಾಡಿನ ತಮ್ಮಂಥ ಸುಸಂಸ್ಕೃತ ಮಹಾಜನರ ಪರಿಚಯವಾಗುವ ಈ ಸುಯೋಗವು ಬಂದಿರುವದೆಂದು ನಾವು ಭಾವಿಸುತ್ತೇವೆ. ಅಂತೇ ಈ ಕಾರ್ಯವನ್ನು ಆನಂದದಿಂದ ಕೈಗೊಂಡಿದ್ದೇವೆ.



ಶ್ರೀಮಂತ ಯಶವಂತರಾವ ಘೋರ್ಪಡೆಯವರು
ಸೊಂಡೂರು ಮಹಾರಾಜರು

ಮಹನೀಯರೇ, ಕನ್ನಡನಾಡಿನ ವಿಶೇಷ ಪರಿಚಯವು ನಮಗಿಲ್ಲವೆಂಬ ಸಂಗತಿಯು ತಮಗೆ ತಿಳಿದೇ ಇದೆ. ಆದರೂ ಸೊಂಡೂರು ಸಂಸ್ಥಾನದಲ್ಲಿ ಬಂದು ನಿಂತಾಗಿನಿಂದ, ಕನ್ನಡ ನಾಡಿನ ಭಾಷೆ ಮೊದಲಾದ ಸಂಸ್ಕೃತಿಯ ವಿಷಯಗಳನ್ನು ತಿಳಿದುಕೊಳ್ಳುವ ಪ್ರಯತ್ನ ನಡಸಿದ್ದೇವೆ. ಆ ಪ್ರಯತ್ನದ ಫಲವಾಗಿ ಕನ್ನಡನಾಡಿನ ಪ್ರಾಚೀನ ಮಹತ್ವವು ನಮಗೆ ಚೆನ್ನಾಗಿಯೇ ನಿದರ್ಶನಕ್ಕೆ ಬರುತ್ತಿದೆ. ಸಾಹಿತ್ಯ, ಲಲಿತಕಲೆ, ವ್ಯಾಪಾರ, ಉದ್ಯೋಗ, ರಾಜಕಾರಣ, ಪರಾಕ್ರಮ ಮೊದಲಾದ ಎಲ್ಲಾ ವಿಷಯಗಳಲ್ಲಿ ಕರ್ನಾಟಕವು ಹಿಂದೂಸ್ಥಾನದ ಯಾವ ಭಾಗಕ್ಕೂ ಹಿಂದಿಲ್ಲವೆಂಬುದು ತಮ್ಮಂತೆಯೇ ನಮಗೂ ಅಭಿಮಾನದ ಮಾತಾಗಿದೆ. ಕೆಲವು ಪ್ರಸಂಗಗಳಲ್ಲಿ ಕರ್ನಾಟಕವೇ ಮಿಕ್ಕ ಭಾರತಕ್ಕೆ ಮಾರ್ಗದರ್ಶಕವಾಗಿರುವದೆಂದು ಕಂಡುಬರುತ್ತದೆ. ಈಗ ಎರಡು ವರ್ಷಗಳ ಹಿಂದೆ ಇಲ್ಲಿಯ ಸಮೀಪದಲ್ಲಿ ಹಂಪಿಯಲ್ಲಿ ನಡೆದ ಶ್ರೀ ವಿಜಯನಗರ ಸಾಮ್ರಾಜ್ಯ ಸ್ಮಾರಕ ಮಹೋತ್ಸವವು ಇದಕ್ಕೆ ಸಾಕ್ಷಿಯಾಗಿದೆ. ಕನ್ನಡ ಜನಾಂಗದ ಈ ಸಾಮ್ರಾಜ್ಯದ ಘನತೆ, ಪರಾಕ್ರಮ, ವೈಭವಗಳನ್ನು ಇಡೀ ಭಾರತವೇ ಕೊಂಡಾಡಿ, ಆದನ್ನು ಸ್ಥಾಪಿಸಿದ ಮಹಾನುಭಾವರ ಹಾಗೂ ಅವರ ತರುವಾಯ ಅದರ ಪ್ರತಾಪವನ್ನು ಬೆಳಗಿಸಿದ ಮಹಾಪುರುಷರ ದಿವ್ಯಸ್ಮರಣಾರ್ಥವಾಗಿ ಭಾರತವು ತನ್ನ ಭಕ್ತಿಪೂರ್ವಕವಾದ ಶ್ರದ್ಧಾಂಜಲಿಗಳನ್ನು ಸಮರ್ಪಿಸಿದೆ. ಭಾರತೀಯ ಇತಿಹಾಸದಲ್ಲಿ ವಿಜಯನಗರದ ಕಾಲವು ಸುವರ್ಣಾಕ್ಷರಗಳಿಂದ ಬರೆದಿಡತಕ್ಕದ್ದೆಂಬ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಅದೇ ಅವಧಿಯಲ್ಲಿ ಕನ್ನಡ ಜನಾಂಗದ ಸಾಂಸ್ಕೃತಿಕ ಸದ್ಗುಣಗಳು ಪರಮಾವಧಿಯ ಉತ್ಕರ್ಷವನ್ನು ಹೊಂದಿದವೆಂಬುದು ಯಾರಿಗೂ ತಿಳಿಯದ ಮಾತಲ್ಲ. ಒಂದು ಜನಾಂಗದಲ್ಲಿ ಸದ್ಗುಣಗಳ ಉತ್ಕರ್ಷವೆಂಬುದು ಪರಮಾವಧಿಸ್ಥಿತಿಗೆ ಮುಟ್ಟಬೇಕಾದರೆ ಅದು ಆಕಸ್ಮಿಕವಾಗಿಯಾಗಲಾರದು. ಅದಕ್ಕೆ ಎಷ್ಟೋ ಶತಮಾನಗಳ ಕ್ರಮಶಃ ಬೆಳವಣಿಗೆಯ ಪರಂಪರೆಯು ಬೇಕಾಗುತ್ತದೆ. ಇದು ಉತ್ಕ್ರಾಂತಿತತ್ವದ ಸಿದ್ಧಾಂತವಾಗಿದೆ. ಇದಕ್ಕನುಸರಿಸಿ ನೋಡಿದರೆ ವಿಜಯನಗರದ ಕಾಲದ ಕನ್ನಡ ಜನಾಂಗದ ಉತ್ಕರ್ಷಕ್ಕೆ ಸಾವಿರಾರು ವರ್ಷಗಳ ಪೂರ್ವಪರಂಪರೆಯು ಆಧಾರವಾಗಿರಬೇಕೆಂದು ಸ್ಪಷ್ಟವಾಗುತ್ತದೆ. ಕನ್ನಡನಾಡಿನ ಬಹು ಪುರಾತನ ಇತಿಹಾಸವು ಇದನ್ನೇ ಸಾರುತ್ತದೆ. ಹೀಗೆ ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿಯಿಂದ ಬೆಳೆದುಬಂದ ಕನ್ನಡನಾಡಿನ ಉಜ್ವಲ ಪರಂಪರೆಯು ಯಾರಿಗೆ ಅಭಿಮಾನಕಾರಕವಾಗಲಿಕ್ಕಿಲ್ಲ?

ಮುಂದೆ ಕಾಲ ಬದಲಾಯಿತು. ವಿಜಯನಗರದ ಸಾಮ್ರಾಜ್ಯದ ನಾಶದೊಂದಿಗೆ ಕನ್ನಡ ಜನಾಂಗವು ಅಧಃಪತನದ ಹಾದಿಗೆ ಹತ್ತಿತು. ಅಂದಿನಿಂದ ಇಂದಿನವರೆಗೆ ನಾಲ್ಕು ನೂರು ವರ್ಷಗಳಲ್ಲಿ ನಮ್ಮ ಹಿಂದೂಸ್ಥಾನವೇ ಒಂದು ಬಗೆಯಿಂದ ಅಪಕರ್ಷದ ದಾರಿಯನ್ನು ತುಳಿಯುತ್ತಾ ನಡೆದಿದೆ. ಕನ್ನಡ ಜನಾಂಗವಂತೂ ಹೇಳಹೆಸರಿಲ್ಲದ ದಾರುಣದುರವಸ್ಥೆಗೆ ಗುರಿಯಾಗಬೇಕಾಗಿದೆ. ಇಂಥ ಅನುಕಂಪನೀಯ, ಅಸಹಾಯ ಸ್ಥಿತಿಯಲ್ಲಿಯೂ ೨೪ ವರ್ಷಗಳಿಂದ ಕನ್ನಡ ನಾಡಿನ ಎಲ್ಲಾ ಬಗೆಯ ಉನ್ನತಿಗೆ ಆಧಾರವಾದ ಕನ್ನಡ ಸಾಹಿತ್ಯವನ್ನು ಬೆಳೆಸಲು ಕರ್ನಾಟಕ ಸಾಹಿತ್ಯ ಪರಿಷತ್ತು ಅಖಂಡವಾಗಿ ನಡಸುವ ಮಹತ್ಕಾರ್ಯವು ತಕ್ಕಮಟ್ಟಿಗೆ ನಮ್ಮ ಅವಗಾಹನೆಗೆ ಬಂದಿವೆ. ಮೈಸೂರಿನ ಶ್ರೀಮನ್ಮಹಾರಾಜರವರು ಹಾಗೂ ಶ್ರೀಕಂಠೀರವ ನರಸಿಂಹರಾಜ ಯುವರಾಜರವರ ಕೃಪಾಪೂರ್ಣ ಆಶ್ರಯದಲ್ಲಿ ಪರಿಷತ್ತಿನ ಕಾರ್ಯಗಳು ಶ್ರೇಯಸ್ಕರವಾಗಿ ಮುಂದುವರಿಯುತ್ತಿರುವದು ನಮಗೆ ತಿಳಿದಿದೆ. ಹಾಗೆಯೇ ಎಚ್ಚತ್ತ ಕನ್ನಡನಾಡಿನ ಮಹಾಜನರ ಸಹಾಯದಿಂದ ಕರ್ನಾಟಕದ ಪುನರುದ್ಧಾರಕ್ಕಾಗಿ ನಡೆದಿರುವ ಅನೇಕ ಬಗೆಯ ಚಟುವಟಿಕೆಗಳನ್ನು ನಾವು ಕುತೂಹಲಚಿತ್ತದಿಂದ ನಿರೀಕ್ಷಿಸುತಿದ್ದೇವೆ. ಇಂಥ ಪ್ರಸಂಗದಲ್ಲಿ ಕನ್ನಡ ನಾಡಿನ ಮಾನ್ಯಪ್ರತಿನಿಧಿಗಳಾಗಿ ಇಲ್ಲಿ ಕೂಡಿರುವ ತಮ್ಮ ಕಾರ್ಯಕುತೂಹಲವನ್ನು ಪ್ರತ್ಯಕ್ಷ ನೋಡುವ ಪ್ರಸಂಗವು ದೊರೆತದ್ದು ನಮಗೆ ಬಹಳ ಸಂತೋಷದ ಮಾತಾಗಿದೆ. ಕನ್ನಡ ಜನಾಂಗದ ಒಂದು ಭಾಗವೇ ಆಗಿರುವ ಸಾವಿರಾರು ಕನ್ನಡ ಪ್ರಜಾಬಾಂಧವರ ಸುಖದುಃಖಗಳಲ್ಲಿ ಸಮಭಾಗಿಯಾಗಿ ಅವರನ್ನು ತಕ್ಕಮಟ್ಟಿಗಾದರೂ ಉತ್ಕರ್ಷದ ದಾರಿಯಿಂದ ಮುಂದಕ್ಕೆ ಸಾಗಿಸುವ ಪ್ರಯತ್ನವನ್ನು ಕೈಲಾದಮಟ್ಟಿಗೂ ಮಾಡುವ ಜವಾಬುದಾರಿಯು ನಮ್ಮ ಮೇಲಿರುವದರಿಂದ ತಮ್ಮಂಥವರ ಈ ಪ್ರಯತ್ನಗಳು ನಮಗೆ ಮಾರ್ಗದರ್ಶಕವಾಗುವವೆಂದು ನಮಗೆ ಆತ್ಮಾನಂದವಾಗಿದೆ. ಮತ್ತು ಈ ಶುಭಪ್ರಸಂಗವು ಹಿಂದೆ ಹೇಳಿದಂತೆ ದೈವಿಕ ಅನುಗ್ರಹದಿಂದಲೇ ನಮಗೆ ದೊರೆತಿರುವದೆಂದು ನಾವು ತಿಳಿಯುತ್ತೇವೆ. ಕನ್ನಡ ವಾಙ್ಮಯದಲ್ಲಿ ಹೊಸ ಬಗೆಯ ವಿಚಾರಗಳನ್ನು ಸಮಾವೇಶಗೊಳಿಸಿ ಕನ್ನಡ ಸಾಹಿತ್ಯಕ್ಕೆ ಒಂದು ಪ್ರಕಾರದ ಹೊಸ ತೇಜಸ್ಸನ್ನು ತಂದುಕೊಡುವದರಲ್ಲಿ ಶ್ರೀಮಾನ್ ದಿವಾಕರ ರಂಗರಾಯರ ಕೀರ್ತಿಯುಂಟು.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

## ಅಧ್ಯಕ್ಷರ ಭಾಷಣ

(೧೦೪ನೆಯ ಪುಟದಿಂದ ಮುಂದುವರಿದುದು.)

ಕನ್ನಡ ನುಡಿಯ ಇತಿಹಾಸವಾದರೂ ಪುರಾತನವಿರುವುದು. ಕ್ರಿಸ್ತ ಶಕಾರಂಭದಮೊದಲು ನಾಲ್ಕಾರುಶತಕಗಳ ಪೂರ್ವದಲ್ಲಿಯೆ ಕನ್ನಡದಲ್ಲಿ ಗ್ರಂಥಗಳಾಗಿರಲಿಕ್ಕೆಬೇಕು. ಐದನೆಯ ಏಳನೆಯ ಶತಾಬ್ದಿಯ ಶಾಸನಗಳನ್ನು ನೋಡಿದರೆ, ಅದರ ಭಾಷಾ ಪ್ರೌಢಿಮೆಯನ್ನು ನೋಡಿದರೆ ಒಳ್ಳೇ ಬೆಳೆದು ನಿಂತ ಭಾಷೆ ಎಂದು ತೋರುತ್ತಿದೆ. ಒಂಬತ್ತನೆಯ ಶತಮಾನದ ಆದಿಯಲ್ಲಿ "ಕವಿರಾಜಮಾರ್ಗ"ವೆಂಬ ಲಕ್ಷಣಗ್ರಂಥವನ್ನು ನೃಪತುಂಗನು ಬರೆದುದನ್ನು ನೋಡಿದರೆ, ಓದದೆ ಅಲ್ಲಿಯ ಜನರು 'ಕಾವ್ಯಪ್ರಯೋಗ ಪರಿಣತ ಮತಿಗಳ್' ಎಂದದ್ದನ್ನು ಲಕ್ಷಿಸಿದರೆ ಹಾಗೂ ಅವನು ಉದಾಹರಿಸಿದ ಕಾವ್ಯಗಳನ್ನು ಪರೀಕ್ಷಿಸಿದರೆ, ಕನ್ನಡವು ಒಳ್ಳೇ ಪ್ರಾಯಕ್ಕೆ ಬಂದ ಕಾಲವದು ಎಂದು ತೋರುವದು. ಸ್ತ್ರೀಯು ಪ್ರಾಯಕ್ಕೆ ಬಂದ ಬಳಿಕವೇ ವರ್ಣನಾಯೋಗ್ಯವೆಂದು ಕವಿಗಳು ತಿಳಿಯುವಂತೆ ಭಾಷೆ ಪ್ರೌಢಾವಸ್ಥೆಗೆ ಬಂದ ಬಳಿಕವೇ ಲಕ್ಷಣಕಾರರು ಲಕ್ಷಣ ಗ್ರಂಥಗಳನ್ನು ಬರೆಯಲನುಕೂಲವಾಗುವದು.

ಕನ್ನಡ ಲಿಪಿ ಬಹಳೇ ಸುಂದರವಾದುದು ಎಂದು ಹಲವು ಪಾಶ್ಚಾತ್ಯಪಂಡಿತರು ಹೇಳಿರುವರೆಂದು ಕೇಳಿದ್ದೇನೆ. ಅದು ನಿಜವೆಂದು ನನಗೆ ತೋರುವದು. ಈ ಲಿಪಿ ಕಲಾತ್ಮಕವಿರುವದು. ಅದರಲ್ಲಿಯ ವರ್ತುಲಾಕಾರಗಳು ಒಳ್ಳೆ ಲಿಪಿವಿಕಾಸವನ್ನು ತೋರುವವು. ಚಿತ್ರ ಬರೆಯುವಾಗ ಕೂಡ ಮನುಷ್ಯನು ಮೊದಮೊದಲು ಗೆರೆಯಿಂದ ಪ್ರಾರಂಭಿಸಿ ಮುಂದೆ ವರ್ತುಲಕ್ಕೆ ಹೋಗುವನು. ಅದೇ ರೀತಿ ಲಿಪಿ ವಿಕಾಸದ ಇತಿಹಾಸದಲ್ಲಿಯೂ ವರ್ತುಲವು ಕೊನೆಗೆಬಂದುದು ಎಂಬಲ್ಲಿ ಸಂಶಯವಿಲ್ಲ. ಕನ್ನಡ ನುಡಿಯಮೇಲೆ ಈವರೆಗೆ ಅನೇಕ ಆಘಾತಗಳು ಆಗುತ್ತಬಂದಿವೆ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ. ಆಮೂಲಕ ಕನ್ನಡವು ಎಷ್ಟೋ ಆಕುಂಚನ ಹೊಂದಿರಲಿಕ್ಕೆ ಸಾಕು. ಆದರೂ ಕನ್ನಡವು ತನ್ನ ಸ್ಥಾನದಿಂದ ಕದಲಲಿಲ್ಲವೆಂಬುದು ಅಭಿನಂದನೀಯವೇ ಸೈ. ಈ ಮಾತು ಅದರ ಭವಿಷ್ಯದ ಬಗ್ಗೆ ಒಳ್ಳೆ ಬಲವಾದ ಆಶೆಯನ್ನುಂಟುಮಾಡುತ್ತಿದೆ.

ಇನ್ನು ಕನ್ನಡಸಾಹಿತ್ಯಸ್ರೋತವಾದರೂ ಬಹಳ ಪುರಾತನ ಕಾಲದಿಂದ ಹರಿಯುತ್ತ ಬಂದಿದೆ. ಪುರಾತನ ಕನ್ನಡ ಕವಿಗಳ ಸಂಖ್ಯೆ, ಅವರು ಬರೆದ ಗ್ರಂಥಗಳ ಪ್ರಮಾಣ, ಅವರು ಬರೆದ ವಿಷಯಗಳ ವಿವಿಧತೆ, ಅವರ ಲೇಖನದ ಪ್ರೌಢಿಮೆ ಇವುಗಳನ್ನೆಲ್ಲ ನೋಡಿದರೆ ಅದು ಹಿಂದೂಸ್ಥಾನದಲ್ಲಿಯ ಯಾವ ಭಾಷೆಗಿಂತಲೂ ಹಿಂದೆಬೀಳದು. ಇಷ್ಟೇ ಅಲ್ಲ. ಮರಾಠಿ, ಬಂಗಾಲಿ, ತೆಲುಗು ಮುಂತಾದ ಈಚೆಗೆ ಮುಂದೆ ಬಂದ ಸಾಹಿತ್ಯಗಳನ್ನು ಅದು ಗತವೈಭವದ ವಿಷಯದಲ್ಲಿ ಹಿಂದೆ ಹಾಕುವದು ಎಂಬಲ್ಲಿ ಸಂಶಯವಿಲ್ಲ. ಆಧುನಿಕ ಕಾಲದಲ್ಲಿ ಮಾತ್ರ ಈ ಮೇಲಿನ ಸಾಹಿತ್ಯಗಳು ನಮ್ಮನ್ನು ಬಹಳ ಹಿಂದೆ ಹಾಕಿವೆ ಎಂಬುದನ್ನು ಒಪ್ಪಬೇಕಾಗಿದೆ. ಈಚೆಗೆ ಕನ್ನಡವು ಸಣ್ಣಕಥೆ, ಹೊಸಕಾವ್ಯ ಮುಂತಾದ ಹಲವು ಮಾತುಗಳಲ್ಲಿ ಚೆನ್ನಾಗಿ ಮುಂದೆಬರುತ್ತಿರುವದು ಸಮಾಧಾನಕರವಾದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯವು ಮೊದಮೊದಲು ಸಂಸ್ಕೃತದೊಡನೆ ತಕ್ಕಮಟ್ಟಿಗೆ ತಿಕ್ಕಾಡಿ, ಸ್ಪರ್ಧೆ ಮಾಡಿ ಮುಂದೆ ಬರಬೇಕಾಯಿತೆನ್ನುವದು ಹಲವು ಮಾತುಗಳಿಂದ ವ್ಯಕ್ತವಾಗುವದು. ಆಂಡಯ್ಯನ ಪ್ರಯತ್ನವೂ ಅಂಥ ಮಾತುಗಳಲ್ಲಿ ಒಂದು. ಅದೇ ರೀತಿ ಕನ್ನಡದಲ್ಲಿ ಹೇಳಿದರೆ ಸಾಲದೆ? ಸಂಸ್ಕೃತದಲಿನ್ನೇನು? ಎಂದು ಮುಂತಾಗಿ ಹಲವು ಕವಿಗಳು ಬರೆದಿರುವದನ್ನು ನೋಡಿದರೆ ಜನರ ಲಕ್ಷ್ಯವು ಸಂಸ್ಕೃತದ ಕಡೆಗೆ ಹೆಚ್ಚು ಇತ್ತು; ಕನ್ನಡದಲ್ಲಿ ಬರೆಯುವದು ಅಥವಾ ಓದುವದು ಗೌಣವೆನಿಸುತ್ತಿತ್ತು ಎಂಬುದು ಒಡೆದು ತೋರುವದು. ಆದರೆ ಕನ್ನಡವು ಆವಿಷಯದಲ್ಲಿ ಗೆದಿಯಿತು ಎಂದು ಹೇಳಬಹುದು. ಧರ್ಮ ಮುಂತಾದ ಪ್ರೌಢ ವಿಷಯಗಳನ್ನು ಸಂಸ್ಕೃತದಲ್ಲಿಯೇ ಬರೆಯಬೇಕು ಎಂಬ ಕಲ್ಪನೆಯನ್ನು ಕನ್ನಡದಲ್ಲಿ ಮೊದಲು ಕಿತ್ತುಹಾಕಿದವರು ಜೈನಕವಿಗಳು ಎಂಬುದು ಸ್ಪಷ್ಟವಿರುವುದು. ಮುಂದೆ ವಚನಕಾರರು, ಹಾಗೂ ದಾಸರು ಈ ಗ್ರಹಗಳನ್ನು ಪೂರಾ ನಿರ್ನಾಮ ಮಾಡಿದರೆಂದು ಹೇಳಲು ಅಡ್ಡಿಯಿಲ್ಲ.

ರೂಢವಿದ್ದ ಸಂಸ್ಕೃತ ಸಾಹಿತ್ಯ ರೂಪಗಳನ್ನು ಕೂಡ ಬಿಟ್ಟು ಅವರು ಹೊಸ ರೂಪಗಳನ್ನು ಕಲ್ಪಿಸಿ ಅತ್ಯಂತ ಕಠಿಣವೆನಿಸಿದ ತತ್ವ ವಿಚಾರಗಳನ್ನು ಕೂಡ ಜನಸಾಮಾನ್ಯರೂ ತಿಳಿಯುವಂತೆಮಾಡಿ ಕನ್ನಡ ನಾಡಿನ ಮೇಲೆ ಮಹದುಪಕಾರ ಮಾಡಿಬಿಟ್ಟರು.

ಮುಸಲ್ಮಾನರು ಇಲ್ಲಿ ಹಲವು ಕಾಲ ಆಳಿದರೂ ಪರ್ಶಿಯನ್ ಅಥವಾ ಅರಬೀಭಾಷೆಗಳ ಪರಿಣಾಮವು ಕನ್ನಡದಮೇಲೆ ಏನೂ ಆಗಿಲ್ಲವೆನ್ನಬಹುದು. ಏನೋ ನಾಲ್ಕು ಶಬ್ದಗಳು ಮಾತ್ರ ಸೇರಿಕೊಂಡಿರಬಹುದು.

ಹಿಂದುಸ್ಥಾನದಲ್ಲಿ ಇಂಗ್ಲೀಷರ ಪ್ರಭುತ್ವ ಪ್ರಾರಂಭವಾದೊಡನೆ ಮೊದಮೊದಲು ಪ್ರಾಂತಿಕ ಭಾಷೆಗಳೆಲ್ಲ ಮೂಲೆಗುಂಪಾದವು. ಪ್ರಗತಿಪರನಾದ ಬುದ್ಧಿವಂತರೂ ನೌಕರಿ, ಅಧಿಕಾರ ಇವುಗಳ ಆಶೆಯಿಂದ ಇಂಗ್ಲೀಷಿನ ಕಡೆಗೇ ಧಾವಿಸಿದರು. ಎಲ್ಲ ಬಗೆಯ ಉಚ್ಚ ಶಿಕ್ಷಣವೂ ಇಂಗ್ಲೀಷಿನಲ್ಲಿ ನಡೆಯಿತು. ಪ್ರಾಂತಿಕ ಭಾಷೆಗಳಿಗೆ ಎಲ್ಲಿಯೂ ಯಾವ ಮನ್ನಣೆಯೂ ಇಲ್ಲದಾಯಿತು. ಹೀಗೆ ಒಂದು ಶತಮಾನದ ಅವಧಿ ಹೋದನಂತರ ಸ್ವದೇಶ, ಸ್ವಭಾಷೆಗಳ ಅಭಿಮಾನವು ತಲೆದೋರಿ ಪ್ರಾಂತಿಕ ಭಾಷೆಗಳಿಗೆ ಮಹತ್ವವು ಬರತೊಡಗಿತು. ಅಲ್ಲಲ್ಲಿ ಅಚ್ಚು ಕೂಟಗಳು ಸ್ಥಾಪನವಾಗಿ ಪ್ರಾಂತಿಕ ಭಾಷೆಗಳ ಮೊಳೆಗಳು ತಯಾರಾಗಿ, ಪ್ರಾಂತಿಕಭಾಷೆಗಳಲ್ಲಿ ಪುಸ್ತಕಗಳು ಹೊರಡಲಾರಂಭಿಸಿದವು. ಹೀಗೆ ಎಚ್ಚತ್ತ ಭಾಷೆಗಳಲ್ಲಿ ಕನ್ನಡವು ಕೊನೆಯದು ಎಂದು ಹೇಳಬಹುದು! ಇರಲಿ. ಎಚ್ಚತ್ತ ಕನ್ನಡ ಸಾಹಿತ್ಯವು ತಪ್ಪುಹೆಜ್ಜೆ ಇಡಲಾರಂಭಿಸಿ ಈಗ ಎಷ್ಟೋ ಪ್ರಗತಿ ಹೊಂದಿದೆ. ಆಧುನಿಕ ಕನ್ನಡ ಕಥೆ, ಕಾದಂಬರಿ, ಕಾವ್ಯ, ವೃತ್ತಪತ್ರ, ಮಾಸಿಕಗಳು ಮುಂತಾದುವುಗಳನ್ನು ನೋಡಿದರೆ, ಸ್ವಲ್ಪಕಾಲದಲ್ಲಿಯೇ ನಮ್ಮ ನೆರೆಹೊರೆಯವರು ನಡೆದಷ್ಟು ದಾರಿಯನ್ನು ನಾವೂ ನಡೆಯಬಹುದು ಎಂಬ ಆಶೆ ಹುಟ್ಟಿದೆ.

### ನಮ್ಮ ವಿಷಮಸ್ಥಿತಿ

ಹೀಗೆ ಭವಿಷ್ಯಕಾಲದ ಬಗ್ಗೆ ಆಶೆಯನ್ನು ವ್ಯಕ್ತಮಾಡುತ್ತಿರುವಾಗಲೇ ಈಗ ಸದ್ಯಕ್ಕಿದ್ದ ನಮ್ಮ ನಾಡು, ನುಡಿ, ಸಾಹಿತ್ಯಗಳ ವಿಷಮ ಪರಿಸ್ಥಿತಿಯನ್ನು ನನ್ನ ಅನುಭವಕ್ಕೆ ಬಂದಂತೆ ಸ್ವಲ್ಪ ಬಣ್ಣಿಸುತ್ತೇನೆ. ಅಂದರೆ ಮುಂದಿನ ಮಾರ್ಗವನ್ನು ಹೇಗೆ ಹುಡುಕಬೇಕು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಗುವದು. ನಾನು ಒಳ್ಳೇ ಆಶಾವಾದಿ ಆದುದರಿಂದ ನಮ್ಮಸ್ಥಿತಿ ಬಹಳ ಕೆಡುಕಿದೆ ಎಂದು ತಿಳಿದುಕೊಂಡು ಹತಾಶನಾಗಲು ನಾನು ಸಿದ್ಧನಿಲ್ಲ. ಅದೇ ರೀತಿ 'ನಿಮಗೇನಾಗಿದೆ, ಇದಕ್ಕೂ ಒಳ್ಳೇಸ್ಥಿತಿ ಹೇಗಿರಬೇಕು?" ಎಂದು ಕೇಳುವವರು ಹಲವು ಮಿತ್ರರಿದ್ದಾರೆ. ಆದುದರಿಂದ ನಮ್ಮ ಸ್ಥಿತಿ ಚೆನ್ನಾಗಿದೆ ಎಂದು ಭಾವಿಸಿಯೇ ಹೊರಡುತ್ತೇನೆ. ಹೀಗೆ ಭಾವಿಸಿದರೂ ಹಲವು ಅಡಚಣೆಗಳು ಧಿಗ್ಗನು ಮುಂದೆನಿಲ್ಲುತ್ತವೆ. ಮುಂದೆ ಸಾಗುವಾಗ ಅವು ಅಡ್ಡ ಕಟ್ಟುತ್ತವೆ. ಅವುಗಳ ಕಡೆಗೆ ಕಣ್ಮುಚ್ಚಿ ನಡೆಯಬಾರದು. ಹಾಗೆ ಅವುಗಳನ್ನು ದುರ್ಲಕ್ಷಿಸಿ ನಡೆಯುವದು ಆಶಾವಾದದ ಲಕ್ಷಣವಲ್ಲ. ಅದು ಮರುಳುತನವು. ಯಥಾರ್ಥಜ್ಞಾನ ಮಾಡಿಕೊಂಡು ಎಂಥ ಅಡಚಣೆಗಳು ಬಂದರೂ ನಿರಾಸೆಯಮುಸುಕು ನಮ್ಮನ್ನು ಆವರಿಸಿದರೂ ಅದರೊಳಗಿಂದ ಪಾರಾಗುವೆವೆಂಬ ಭರವಸೆಯಿಟ್ಟು ಕರ್ತವ್ಯಕರ್ಮವನ್ನು ಮಾಡುತ್ತಿರುವದೇ ನಿಜವಾದ ಆಶಾವಾದಿತ್ವವು. ಆ ರೀತಿ ನೋಡಿದರೆ ಈಗ ನಮ್ಮ ವಿಷಮಪರಿಸ್ಥಿತಿಯ ಯಥಾರ್ಥಕಲ್ಪನೆಯು ನಮಗೆ ಬೇಕೇ ಬೇಕು.

# ೨೪ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಬಳ್ಳಾರಿ.

## ಅಧ್ಯಕ್ಷರ ಭಾಷಣ

(೧೧೪ನೆಯ ಪುಟದಿಂದ ಮುಂದುವರಿದುದು.)

ಕನ್ನಡ ನುಡಿಯ ಇತಿಹಾಸವಾದರೂ ಪುರಾತನವಿರುವುದು. ಕ್ರಿಸ್ತ ಶಕಾರಂಭದಮೊದಲು ನಾಲ್ಕಾರುಶತಕಗಳ ಪೂರ್ವದಲ್ಲಿಯೆ ಕನ್ನಡದಲ್ಲಿ ಗ್ರಂಥಗಳಾಗಿರಲಿಕ್ಕೆಬೇಕು. ಐದನೆಯ ಏಳನೆಯ ಶತಾಬ್ದಿಯ ಶಾಸನಗಳನ್ನು ನೋಡಿದರೆ, ಅದರ ಭಾಷಾ ಪ್ರೌಢಿಮೆಯನ್ನು ನೋಡಿದರೆ ಒಳ್ಳೇ ಬೆಳೆದು ನಿಂತ ಭಾಷೆ ಎಂದು ತೋರುತ್ತಿದೆ. ಒಂಬತ್ತನೆಯ ಶತಮಾನದ ಆದಿಯಲ್ಲಿ "ಕವಿರಾಜಮಾರ್ಗ"ವೆಂಬ ಲಕ್ಷಣಗ್ರಂಥವನ್ನು ನೃಪತುಂಗನು ಬರೆದುದನ್ನು ನೋಡಿದರೆ, ಓದದೆ ಅಲ್ಲಿಯ ಜನರು 'ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂದದ್ದನ್ನು ಲಕ್ಷಿಸಿದರೆ ಹಾಗೂ ಅವನು ಉದಾಹರಿಸಿದ ಕಾವ್ಯಗಳನ್ನು ಪರೀಕ್ಷಿಸಿದರೆ, ಕನ್ನಡವು ಒಳ್ಳೇ ಪ್ರಾಯಕ್ಕೆ ಬಂದ ಕಾಲವದು ಎಂದು ತೋರುವದು. ಸ್ತ್ರೀಯು ಪ್ರಾಯಕ್ಕೆ ಬಂದ ಬಳಿಕವೇ ವರ್ಣನಾಯೋಗ್ಯವೆಂದು ಕವಿಗಳು ತಿಳಿಯುವಂತೆ ಭಾಷೆ ಪ್ರೌಢಾವಸ್ಥೆಗೆ ಬಂದ ಬಳಿಕವೇ ಲಕ್ಷಣಕಾರರು ಲಕ್ಷಣ ಗ್ರಂಥಗಳನ್ನು ಬರೆಯಲನುಕೂಲವಾಗುವದು.

ಕನ್ನಡ ಲಿಪಿ ಬಹಳೇ ಸುಂದರವಾದುದು ಎಂದು ಹಲವು ಪಾಶ್ಚಾತ್ಯಪಂಡಿತರು ಹೇಳಿರುವರೆಂದು ಕೇಳಿದ್ದೇನೆ. ಅದು ನಿಜವೆಂದು ನನಗೆ ತೋರುವದು. ಈ ಲಿಪಿ ಕಲಾತ್ಮಕವಿರುವದು. ಅದರಲ್ಲಿಯ ವರ್ತುಲಾಕಾರಗಳು ಒಳ್ಳೆ ಲಿಪಿವಿಕಾಸವನ್ನು ತೋರುವವು. ಚಿತ್ರ ಬರೆಯುವಾಗ ಕೂಡ ಮನುಷ್ಯನು ಮೊದಮೊದಲು ಗೆರೆಯಿಂದ ಪ್ರಾರಂಭಿಸಿ ಮುಂದೆ ವರ್ತುಲಕ್ಕೆ ಹೋಗುವನು. ಅದೇ ರೀತಿ ಲಿಪಿ ವಿಕಾಸದ ಇತಿಹಾಸದಲ್ಲಿಯೂ ವರ್ತುಲವು ಕೊನೆಗೆಬಂದುದು ಎಂಬಲ್ಲಿ ಸಂಶಯವಿಲ್ಲ. ಕನ್ನಡ ನುಡಿಯಮೇಲೆ ಈವರೆಗೆ ಅನೇಕ ಆಘಾತಗಳು ಆಗುತ್ತಬಂದಿವೆ ಎಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ. ಆಮೂಲಕ ಕನ್ನಡವು ಎಷ್ಟೋ ಆಕುಂಚನ ಹೊಂದಿರಲಿಕ್ಕೆ ಸಾಕು. ಆದರೂ ಕನ್ನಡವು ತನ್ನ ಸ್ಥಾನದಿಂದ ಕದಲಲಿಲ್ಲವೆಂಬುದು ಅಭಿನಂದನೀಯವೇಸೈ. ಈ ಮಾತು ಅದರ ಭವಿಷ್ಯದ ಬಗ್ಗೆ ಒಳ್ಳೆ ಬಲವಾದ ಆಶೆಯನ್ನುಂಟುಮಾಡುತ್ತಿದೆ.

ಇನ್ನು ಕನ್ನಡಸಾಹಿತ್ಯಸ್ರೋತವಾದರೂ ಬಹಳ ಪುರಾತನ ಕಾಲದಿಂದ ಹರಿಯುತ್ತ ಬಂದಿದೆ. ಪುರಾತನ ಕನ್ನಡ ಕವಿಗಳ ಸಂಖ್ಯೆ, ಅವರು ಬರೆದ ಗ್ರಂಥಗಳ ಪ್ರಮಾಣ, ಅವರು ಬರೆದ ವಿಷಯಗಳ ವಿವಿಧತೆ, ಅವರ ಲೇಖನದ ಪ್ರೌಢಿಮೆ ಇವುಗಳನ್ನೆಲ್ಲ ನೋಡಿದರೆ ಅದು ಹಿಂದೂಸ್ಥಾನದಲ್ಲಿಯ ಯಾವ ಭಾಷೆಗಿಂತಲೂ ಹಿಂದೆಬೀಳದು. ಇಷ್ಟೇ ಅಲ್ಲ. ಮರಾಠಿ, ಬಂಗಾಲಿ, ತೆಲುಗು ಮುಂತಾದ ಈಚೆಗೆ ಮುಂದೆ ಬಂದ ಸಾಹಿತ್ಯಗಳನ್ನು ಅದು ಗತವೈಭವದ ವಿಷಯದಲ್ಲಿ ಹಿಂದೆ ಹಾಕುವದು ಎಂಬಲ್ಲಿ ಸಂಶಯವಿಲ್ಲ. ಆಧುನಿಕ ಕಾಲದಲ್ಲಿ ಮಾತ್ರ ಈ ಮೇಲಿನ ಸಾಹಿತ್ಯಗಳು ನಮ್ಮನ್ನು ಬಹಳ ಹಿಂದೆ ಹಾಕಿವೆ ಎಂಬುದನ್ನು ಒಪ್ಪಬೇಕಾಗಿದೆ. ಈಚೆಗೆ ಕನ್ನಡವು ಸಣ್ಣಕಥೆ, ಹೊಸಕಾವ್ಯ ಮುಂತಾದ ಹಲವು ಮಾತುಗಳಲ್ಲಿ ಚೆನ್ನಾಗಿ ಮುಂದೆಬರುತ್ತಿರುವದು ಸಮಾಧಾನಕರವಾದ ಸಂಗತಿಯಾಗಿದೆ.

ಕನ್ನಡ ಸಾಹಿತ್ಯವು ಮೊದಮೊದಲು ಸಂಸ್ಕೃತದೊಡನೆ ತಕ್ಕ ಮಟ್ಟಿಗೆ ತಿಕ್ಕಾಡಿ, ಸ್ಪರ್ಧೆ ಮಾಡಿ ಮುಂದೆ ಬರಬೇಕಾಯಿತೆನ್ನುವದು ಹಲವು ಮಾತುಗಳಿಂದ ವ್ಯಕ್ತವಾಗುವದು. ಆಂಡಯ್ಯನ ಪ್ರಯತ್ನವೂ ಅಂಥ ಮಾತುಗಳಲ್ಲಿ ಒಂದು. ಅದೇ ರೀತಿ ಕನ್ನಡದಲ್ಲಿ ಹೇಳಿದರೆ ಸಾಲದೆ? ಸಂಸ್ಕೃತದಲಿನ್ನೇನು? ಎಂದು ಮುಂತಾಗಿ ಹಲವು ಕವಿಗಳು ಬರೆದಿರುವದನ್ನು ನೋಡಿದರೆ ಜನರ ಲಕ್ಷ್ಯವು ಸಂಸ್ಕೃತದ ಕಡೆಗೆ ಹೆಚ್ಚು ಇತ್ತು; ಕನ್ನಡದಲ್ಲಿ ಬರೆಯುವದು ಅಥವಾ ಓದುವದು ಗೌಣವೆನಿಸುತ್ತಿತ್ತು ಎಂಬುದು ಒಡೆದು ತೋರುವದು. ಆದರೆ ಕನ್ನಡವು ಆವಿಷಯದಲ್ಲಿ ಗೆದಿಯಿತು ಎಂದು ಹೇಳಬಹುದು. ಧರ್ಮ ಮುಂತಾದ ಪ್ರೌಢ ವಿಷಯಗಳನ್ನು ಸಂಸ್ಕೃತದಲ್ಲಿಯೇ ಬರೆಯಬೇಕು ಎಂಬ ಕಲ್ಪನೆಯನ್ನು ಕನ್ನಡದಲ್ಲಿ ಮೊದಲು ಕಿತ್ತುಹಾಕಿದವರು ಜೈನಕವಿಗಳು ಎಂಬುದು ಸ್ಪಷ್ಟವಿರುವುದು. ಮುಂದೆ ವಚನಕಾರರು, ಹಾಗೂ ದಾಸರು ಈ ಗ್ರಹಗಳನ್ನು ಪೂರಾ ನಿರ್ನಾಮ ಮಾಡಿದರೆಂದು ಹೇಳಲು ಅಡ್ಡಿಯಿಲ್ಲ.

ರೂಢಸಿದ್ಧ ಸಂಸ್ಕೃತ ಸಾಹಿತ್ಯ ರೂಪಗಳನ್ನು ಕೂಡ ಬಿಟ್ಟು ಅವರು ಹೊಸ ರೂಪಗಳನ್ನು ಕಲ್ಪಿಸಿ ಅತ್ಯಂತ ಕಠಿಣವೆನಿಸಿದ ತತ್ತ್ವವಿಚಾರಗಳನ್ನು ಕೂಡ ಜನಸಾಮಾನ್ಯರೂ ತಿಳಿಯುವಂತೆಮಾಡಿ ಕನ್ನಡ ನಾಡಿನ ಮೇಲೆ ಮಹದುಪಕಾರ ಮಾಡಿಬಿಟ್ಟರು.

ಮುಸಲ್ಮಾನರು ಇಲ್ಲಿ ಹಲವು ಕಾಲ ಆಳಿದರೂ ಪರ್ಶಿಯನ್ ಅಥವಾ ಅರಬೀಭಾಷೆಗಳ ಪರಿಣಾಮವು ಕನ್ನಡದಮೇಲೆ ಏನೂ ಆಗಿಲ್ಲವೆನ್ನಬಹುದು. ಏನೋ ನಾಲ್ಕು ಶಬ್ದಗಳು ಮಾತ್ರ ಸೇರಿಕೊಂಡಿರಬಹುದು.

ಹಿಂದುಸ್ಥಾನದಲ್ಲಿ ಇಂಗ್ಲೀಷರ ಪ್ರಭುತ್ವ ಪ್ರಾರಂಭವಾದೊಡನೆ ಮೊದಮೊದಲು ಪ್ರಾಂತಿಕ ಭಾಷೆಗಳೆಲ್ಲ ಮೂಲೆಗುಂಪಾದವು. ಪ್ರಗತಿಪರನಾದ ಬುದ್ಧಿವಂತರೂ ನೌಕರಿ, ಅಧಿಕಾರ ಇವುಗಳ ಆಶೆಯಿಂದ ಇಂಗ್ಲೀಷಿನ ಕಡೆಗೇ ಧಾವಿಸಿದರು. ಎಲ್ಲ ಬಗೆಯ ಉಚ್ಚ ಶಿಕ್ಷಣವೂ ಇಂಗ್ಲೀಷಿನಲ್ಲಿ ನಡೆಯಿತು. ಪ್ರಾಂತಿಕ ಭಾಷೆಗಳಿಗೆ ಎಲ್ಲಿಯೂ ಯಾವ ಮನ್ನಣೆಯೂ ಇಲ್ಲದಾಯಿತು. ಹೀಗೆ ಒಂದು ಶತಮಾನದ ಅವಧಿ ಹೋದನಂತರ ಸ್ವದೇಶ, ಸ್ವಭಾಷೆಗಳ ಅಭಿಮಾನವು ತಲೆದೋರಿ ಪ್ರಾಂತಿಕ ಭಾಷೆಗಳಿಗೆ ಮಹತ್ವವು ಬರತೊಡಗಿತು. ಅಲ್ಲಲ್ಲಿ ಅಚ್ಚುಕೂಟಗಳು ಸ್ಥಾಪನವಾಗಿ ಪ್ರಾಂತಿಕ ಭಾಷೆಗಳ ಮೊಳೆಗಳು ತಯಾರಾಗಿ, ಪ್ರಾಂತಿಕಭಾಷೆಗಳಲ್ಲಿ ಪುಸ್ತಕಗಳು ಹೊರಡಲಾರಂಭಿಸಿದವು. ಹೀಗೆ ಎಚ್ಚತ್ತ ಭಾಷೆಗಳಲ್ಲಿ ಕನ್ನಡವು ಕೊನೆಯದು ಎಂದು ಹೇಳಬಹುದು! ಇರಲಿ. ಎಚ್ಚತ್ತ ಕನ್ನಡ ಸಾಹಿತ್ಯವು ತಪ್ಪುಹೆಜ್ಜೆ ಇಡಲಾರಂಭಿಸಿ ಈಗ ಎಷ್ಟೋ ಪ್ರಗತಿ ಹೊಂದಿದೆ. ಆಧುನಿಕ ಕನ್ನಡ ಕಥೆ, ಕಾದಂಬರಿ, ಕಾವ್ಯ, ವೃತ್ತಪತ್ರ, ಮಾಸಿಕಗಳು ಮುಂತಾದುವುಗಳನ್ನು ನೋಡಿದರೆ, ಸ್ವಲ್ಪಕಾಲದಲ್ಲಿಯೇ ನಮ್ಮ ನೆರೆಹೊರೆಯವರು ನಡೆದಷ್ಟು ದಾರಿಯನ್ನು ನಾವೂ ನಡೆಯಬಹುದು ಎಂಬ ಆಶೆ ಹುಟ್ಟಿದೆ.

### ನಮ್ಮ ವಿಷಮಸ್ಥಿತಿ

ಹೀಗೆ ಭವಿಷ್ಯಕಾಲದ ಬಗ್ಗೆ ಆಶೆಯನ್ನು ವ್ಯಕ್ತಮಾಡುತ್ತಿರುವಾಗಲೇ ಈಗ ಸದ್ಯಕ್ಕಿದ್ದ ನಮ್ಮ ನಾಡು, ನುಡಿ, ಸಾಹಿತ್ಯಗಳ ವಿಷಮ ಪರಿಸ್ಥಿತಿಯನ್ನು ನನ್ನ ಅನುಭವಕ್ಕೆ ಬಂದಂತೆ ಸ್ವಲ್ಪ ಬಣ್ಣಿಸುತ್ತೇನೆ. ಅಂದರೆ ಮುಂದಿನ ಮಾರ್ಗವನ್ನು ಹೇಗೆ ಹುಡುಕಬೇಕು ಎಂಬುದನ್ನು ತಿಳಿದುಕೊಳ್ಳಲು ಅನುಕೂಲವಾಗುವದು. ನಾನು ಒಳ್ಳೇ ಆಶಾವಾದಿ ಆದುದರಿಂದ ನಮ್ಮ ಸ್ಥಿತಿ ಬಹಳ ಕೆಡುಕಿದೆ ಎಂದು ತಿಳಿದುಕೊಂಡು ಹತಾಶನಾಗಲು ನಾನು ಸಿದ್ಧನಿಲ್ಲ. ಅದೇ ರೀತಿ 'ನಿಮಗೇನಾಗಿದೆ, ಇದಕ್ಕೂ ಒಳ್ಳೇಸ್ಥಿತಿ ಹೇಗಿರಬೇಕು?" ಎಂದು ಕೇಳುವವರು ಹಲವು ಮಿತ್ರರಿದ್ದಾರೆ. ಆದುದರಿಂದ ನಮ್ಮ ಸ್ಥಿತಿ ಚೆನ್ನಾಗಿದೆ ಎಂದು ಭಾವಿಸಿಯೇ ಹೊರಡುತ್ತೇನೆ. ಹೀಗೆ ಭಾವಿಸಿದರೂ ಹಲವು ಅಡಚಣೆಗಳು ಧಗ್ಗೆಂದು ಮುಂದೆನಿಲ್ಲುತ್ತವೆ. ಮುಂದೆ ಸಾಗುವಾಗ ಅವು ಅಡ್ಡ ಕಟ್ಟುತ್ತವೆ. ಅವುಗಳ ಕಡೆಗೆ ಕಣ್ಮುಚ್ಚಿ ನಡೆಯಬಾರದು. ಹಾಗೆ ಅವುಗಳನ್ನು ದುರ್ಲಕ್ಷಿಸಿ ನಡೆಯುವದು ಆಶಾವಾದದ ಲಕ್ಷಣವಲ್ಲ. ಅದು ಮರುಳುತನವು. ಯಥಾರ್ಥಜ್ಞಾನ ಮಾಡಿಕೊಂಡು ಎಂಥ ಅಡಚಣೆಗಳು ಬಂದರೂ ನಿರಾಶೆಯಮುಸುಕು ನಮ್ಮನ್ನು ಆವರಿಸಿದರೂ ಅದರೊಳಗಿಂದ ಪಾರಾಗುವೆನೆಂಬ ಭರವಸೆಯಿಟ್ಟು, ಕರ್ತವ್ಯಕರ್ಮವನ್ನು ಮಾಡುತ್ತಿರುವದೇ ನಿಜವಾದ ಆಶಾವಾದಿತ್ವವು. ಆ ರೀತಿ ನೋಡಿದರೆ ಈಗ ನಮ್ಮ ವಿಷಮಪರಿಸ್ಥಿತಿಯ ಯಥಾರ್ಥಕಲ್ಪನೆಯು ನಮಗೆ ಬೇಕೇ ಬೇಕು.

ಪರಿಸ್ಥಿತಿಯನ್ನು ಪರಿಶೀಲಿಸುವಾಗ ನಾವು ಕೇವಲ ಕನ್ನಡನುಡಿ ಹಾಗೂ ಸಾಹಿತ್ಯದ ಪರಿಸ್ಥಿತಿಯನ್ನಷ್ಟೇ ನೋಡಿ ನಡೆಯುವಂತಿಲ್ಲ. ನಮ್ಮ ಜೀವನದಲ್ಲಿ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಇತ್ಯಾದಿ ಬೇರೆ ಬೇರೆ ವಿಭಾಗಗಳು ಕಂಡುಬಂದರೂ ಅವು ಅತ್ಯಂತ ನಿಕಟವಾಗಿ ಸಂಬಂಧವಿರುವವು. ವಿಚಾರದ ಅನುಕೂಲತೆಗಾಗಿ ನಾವು ಅವುಗಳನ್ನು ಬೇರ್ಪಡಿಸುತ್ತೇವೆಯೇ ಹೊರತು ಅವೆಲ್ಲ ಸಕಲ ಜೀವನ ವ್ಯಾಪಿ ಇರುವುವು; ಹಾಗೂ ಹಾಸುಹೊಕ್ಕಿನಂತೆ ಪರಸ್ಪರಾವಲಂಬಿಗಳಿರುವವು, ಪರಸ್ಪರ ಪರಿಣಾಮಿಗಳಿರುವವು. ಆದುದರಿಂದ ಅವೆಲ್ಲವುಗಳ ವಿಚಾರವನ್ನು ನಾವು ಮಾಡಲಿಕ್ಕೇ ಬೇಕು, ಬೇಡವೆಂದರೆ ಆಗದು. ಇಲ್ಲಿ ಸಾಹಿತ್ಯವು ನಮ್ಮ ವಿಷಯ. ಉಳಿದವುಗಳನ್ನೆಲ್ಲ ನಾವು ಕೊಂಡು ಮಾಡುವುದೇನು ಎಂದು ಹಲವರು ಅನ್ನಬಹುದು. ಆದರೆ ಸಾಹಿತ್ಯದ ಪ್ರಗತಿಯಾಗದಿರಲಿಕ್ಕೆ ಇತರ ವಿಷಯಗಳಲ್ಲಿಯ ವಿಷಮಪರಿಸ್ಥಿತಿಯೇ ಕಾರಣವಿದೆಯೆಂದು ಕಂಡುಬಂದರೆ ಅದನ್ನು ದುರ್ಲಕ್ಷಿಸುವ ಬಗೆಹೇಗೆ? ರೋಗನಿಧಾನವನ್ನು ಚೆನ್ನಾಗಿ ಮಾಡದೆ ಬರೀ ಮೇಲ್ಮೇಲೇ ಔಷಧ ಕೊಡುತ್ತ ಹೋದರೆ ಎಂದೂ ಗುಣವಾಗಲರಿಯದು. ಅದೇ ರೀತಿ ಇತರ ಪರಿಸ್ಥಿತಿಯನ್ನು ಪರ್ಯಾಲೋಚಿಸಿ ಅದನ್ನು ಉತ್ತಮಗೊಳಿಸದೆ (ಆ ಕಾರ್ಯವನ್ನು ನಾವು ಸ್ವತಃ ಮಾಡದಿದ್ದರೆ, ಅದನ್ನು ಮಾಡುವವರಿಗೆ ಸಹಾಯ ಮಾಡಬಹುದು.) ನಮ್ಮ ಸಾಹಿತ್ಯವು ಎಂದೂ ಸುಧಾರಿಸದು. ಸಾಹಿತ್ಯ ಪ್ರಗತಿಯು ನಮ್ಮ ಜೀವನದ ಪ್ರಗತಿಯು. ನಮ್ಮ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯನ್ನು ಅವಲಂಬಿಸಿವೆ. ಆದ್ದರಿಂದ ಅವುಗಳನ್ನಾದರೂ ಇಲ್ಲಿ ಸಂಕ್ಷೇಪದಿಂದ ನೋಡುವೆನು.

ಮೊದಲನೆಯ ಮಾತೆಂದರೆ, ನಾವು ದಾಸ್ಯರಾಷ್ಟ್ರದವರು. ಈಗೇನೋ ಸ್ವಾತಂತ್ರ್ಯೋನ್ಮುಖರಾಗಿರುವೆವು. ಆದರೆ ನಮ್ಮ ಹಣೆಯ ಮೇಲಿದ್ದ ಈ ಕರೆಪಟ್ಟೆಯು ಅಳಿಸಿಹೋಗುವವರೆಗೆ ನಮ್ಮ ಸಾಹಿತ್ಯವು ಸ್ವತಂತ್ರ ವಿಹಂಗಮದಂತೆ ವಿಹರಿಸಲಾರದು. ಅದು ಪಂಜರದೊಳಗಿನ ಗಿಳಿಯಂತೆ ಕಲಿಸಿದಷ್ಟೇ ಹಾಡುತ್ತ ಕೂಡುವುದು. ಇನ್ನು ನಮ್ಮ ಕನ್ನಡನಾಡಿನ ಪರಿಸ್ಥಿತಿಯನ್ನು ನೋಡಿದರೆ ಅದಂತೂ ಬಹಳ ವಿಷಮವಾಗಿದೆ. ೧೧೦ ಲಕ್ಷ ಕನ್ನಡಿಗರು, ೧೫೦ ಲಕ್ಷ ಕರ್ನಾಟಕಸ್ಥರು (ಕನ್ನಡನಾಡಿನಲ್ಲಿರುವವರೆಲ್ಲರೂ ಕೂಡಿ) ಈಹೊತ್ತು ಹದಿನೆಂಟು ಆಡಳಿತಗಳಲ್ಲಿ ಹರಿದು ಹಂಚಿ ಬಿದ್ದಿದ್ದಾರೆ. ಕನ್ನಡನುಡಿ, ನಾಡು, ಸಾಹಿತ್ಯ ಇವುಗಳ ಬಗ್ಗೆ ನಾವು ಏನೇ ಮಾಡಬೇಕಾದರೂ ಈ ವಿವಿಧ ಆಡಳಿತಗಳೊಡನೆ ತಿಕ್ಕೆ ಹಾಯಬೇಕು. ಅವರೆಲ್ಲರೂ ಒಪ್ಪಿದಾಗ ನಾವು ಕರ್ನಾಟಕಸ್ಥರೆಲ್ಲರೂ ಏಕಮುಖದಿಂದ ಬಂದು ಕೆಲಸ ಮಾಡಬೇಕು ! ಈಚೆಗಿನವರೆಗೆ ಮೈಸೂರೊಂದು ಬಿಟ್ಟರೆ, ಉಳಿದ ಸಂಸ್ಥಾನಿಕರು ಕನ್ನಡದ ಮಾತನ್ನೇ ಎತ್ತಗೊಡುತ್ತಿರಲಿಲ್ಲ. ಈಗೇನೋ ಸೊಸೆಯ ಕಾಲ ಬಂದಿದೆಯೆಂದು ತೋರುತ್ತದೆ! ಇರಲಿ, ಈ ವಿಚ್ಛಿನ್ನಸ್ಥಿತಿಯು ಕರ್ನಾಟಕದ ಸೊಲ್ಲು ಸಾಹಿತ್ಯಗಳಿಗೆ ಬಹಳ ಅಡಚಣೆಗಳನ್ನುಂಟುಮಾಡುತ್ತಿದೆ. ಮೇಲಾಗಿ ಇದೇನು ನಿಸರ್ಗ ಸಿದ್ಧವಾದ ಅಡಚಣೆಯಲ್ಲ. ನಾವು ಕನ್ನಡಿಗರು, ಕರ್ನಾಟಕಸ್ಥರು. ನಮಗೆ ಇಷ್ಟವೆಂದು ಮಾಡಿಕೊಂಡ ವ್ಯವಸ್ಥೆ ಇದಲ್ಲ. ಇದು ಕೃತಕವಾದುದು. ರಾಜಕೀಯ ಮಹತ್ವಾಕಾಂಕ್ಷಿಗಳು, ಇಲ್ಲವೆ, ದೇಶದ್ರೋಹಿಗಳು ತಮಗೆ ಇಷ್ಟವಿದ್ದಂತೆ ಈ ನಮ್ಮ ತಾಯ್ನುಡಿಯನ್ನು ಆಯಾ ಕಾಲಕ್ಕೆ ನಮಗೆ ಹೇಳದೆ ಕೇಳದೆ ಹಂಚಿಕೊಂಡು ಬಿಟ್ಟಿದ್ದಾರೆ. “ಈ ಭಾಗ ನನ್ನದು! ಈ ಭಾಗ ನನ್ನದು!” ಎಂದು ಈಗ ಹೇಳುತ್ತಿದ್ದಾರೆ. ಕುರುಬರು ಕುರಿಗಳನ್ನು ಪ್ರಾಯಶಃ ಇದೇ ರೀತಿ ಹಂಚಿಕೊಳ್ಳುತ್ತಿರಲಿಕ್ಕೆ ಸಾಕು. ಆದರೆ ನಾವು ಕುರಿಗಳಲ್ಲ. ಒಳ್ಳೆ ಕಣ್ಣು ಕಾಲುಗಳಿದ್ದು, ಬಾಯಿ ಬುದ್ಧಿಗಳಿದ್ದ ಮನುಷ್ಯರು. ನಮಗೆ ಈಗ ಎಚ್ಚರ ಹುಟ್ಟಿದೆ. ಆದುದರಿಂದ ಈಗ ನಾವು ಒಂದಾಗಬೇಕೆನ್ನುತ್ತೇವೆ. ನಮ್ಮ ನುಡಿ ಒಂದು, ನಮ್ಮ ನಾಡು ಒಂದು, ನಮ್ಮ ಇತಿಹಾಸ ಒಂದು. ಎಲ್ಲಕ್ಕೂ ಹೆಚ್ಚಿನದೇನೆಂದರೆ, ಈಗ್ಗೆ ನಾವು ಒಂದಾಗಿ ಮುಂದಡಿ ಇಡಬೇಕೆನ್ನುತ್ತೇವೆ. ನಮ್ಮನ್ನು ತಡೆಯಬೇಡಿರಿ, ತಡವ ಬೇಡಿರಿ. ಕರ್ನಾಟಕದಲ್ಲಿಯ ಪ್ರಸ್ತುತ ಪ್ರಜಾಶಕ್ತಿಯು ಜಾಗ್ರತವಾಗಿ ಮನವನ್ನಾಕ್ರಮಿಸಿ ಕೃತಕಭೇದಗಳನ್ನು ವಿಸರ್ಜಿಸಿ ಏಕವಾಗಬೇಕೆಂದು ಮುಂದೆ ಸಾಗುತ್ತಿದೆ. ತನಗೆ ಸಹಾಯ ಕೊಟ್ಟರೆ ಸ್ವೀಕರಿಸಿ ಕೃತಜ್ಞತೆಯಿಂದ ಆ ಶಕ್ತಿ ಮುಂದೆ ಸಾಗುವದು, ತನ್ನನ್ನು ವಿರೋಧಿಸಿದರೆ ಕಠೋರತೆಯಿಂದ ಮೆಟ್ಟಿ ಅದು ಮುಂದಡಿಯಿಡುವುದು.

‘ಇದೇನೋ ಯಾವ ಮಾತೋ! ಮಗು ಚಂದಪ್ಪನನ್ನು ಬೇಡಿದಂತೆ ಇದು’ ಎಂದು ಹಲವರು ಹೇಳಬಹುದು. ‘ಇದೇನೋ ಸವಿಗನಸು’ ಎಂದು ಇನ್ನೊಬ್ಬರು ಹೇಳಬಹುದು. ಇರಲಿ, ಎಷ್ಟೋ ಕನಸುಗಳು ನಿಜವಾಗುವವು ಎಂಬುದನ್ನು ಸಂಶಯಾತ್ಮರು ಲಕ್ಷಿಸಬೇಕು. ಅಲ್ಲಿಯವರೆಗೆ ಕನಸಿನ ಸವಿಯನ್ನಾದರೂ ಉಣ್ಣುವ ಭಾಗ್ಯವು ನಮಗಿದೆ. ಸಂಶಯಾತ್ಮರಿಗೆ ಅದೂ ಇಲ್ಲ.

ಕರ್ನಾಟಕದ ದೃಷ್ಟಿಯಿಂದ ನೋಡಿದರೆ, ನಮ್ಮಲ್ಲಿ, ಹಿಂದೂ, ಮುಸಲ್ಮಾನ, ಕ್ರಿಶ್ಚನ್, ಜೈನ-ಈ ಮುಂತಾದ ಧರ್ಮದವರು ಸಾಕಷ್ಟು ಇರುವರು. ಈಗ್ಯೂ ಅನೇಕ ಧಾರ್ಮಿಕಗ್ರಂಥಗಳು ಬರೆಯಲ್ಪಡುತ್ತಿವೆ ಎಂಬುದು ಪ್ರಕಾಶಿತ ಪುಸ್ತಕಗಳ ಪಟ್ಟಿಯಿಂದ ವ್ಯಕ್ತವಾಗುವದು. ಈ ಪುಸ್ತಕಗಳಲ್ಲಿ ಬಹುತರವಾಗಿ ತಮ್ಮ ಧರ್ಮದ ಅಂಧಾಭಿಮಾನವು ಹೆಚ್ಚು ಕಂಡುಬರುವದು. ಹಾಗೂ ಸಾಂಪ್ರದಾಯಿಕ ಹಟವು ಅಲ್ಲಲ್ಲಿ ವ್ಯಕ್ತವಾಗುವದು. ಆದರೆ ನಾವು ನವಯುಗದಲ್ಲಿ ಕಾಲಿಟ್ಟದ್ದೇವೆ ಎಂಬುದನ್ನು ಲೇಖಕರು ಇನ್ನು ಅನುಲಕ್ಷಿಸಬೇಕು. ಧರ್ಮವೆಂಬುದೊಂದೇ–ಮಾನವಧರ್ಮ, ವಿಶ್ವಧರ್ಮ. ಅದಕ್ಕೆಯೇ ಸ್ಥಲಭೇದದಿಂದ ಬೇರೆ ರೂಪಗಳು ಬಂದಿವೆ. ಆ ರೂಪಭೇದಗಳ ಮಾಹಾತ್ಮ್ಯವನ್ನು ಕಡಮೆಮಾಡಿ ಸಾಂಪ್ರದಾಯಿಕ ಸಂಗತಿಗಳ ವರ್ಚಸ್ಸನ್ನು ಬೀಳುಗೊಳಿಸಿ ಸರ್ವ ಧರ್ಮಗಳಲ್ಲಿಯ ಸಾಮಾನ್ಯ ತತ್ವಗಳ ವಿವೇಚನೆ ಮಾಡುವದರಲ್ಲಿಯೇ ನಾವು ಇನ್ನು ಹೆಚ್ಚುತೊಡಗಬೇಕು. ನಿರ್ಹೇತುಕ, ತುಲನಾತ್ಮಕ ಅಭ್ಯಾಸವೇ ಈ ವೃತ್ತಿಯ ತಳಹದಿಯು. ಅದಕ್ಕೆ ನಾವು ಪ್ರೋತ್ಸಾಹ ಕೊಡಲಿಕ್ಕೆ ಬೇಕು. ಅನ್ಯಧರ್ಮಗಳಲ್ಲಿ ಮತ್ತು ನಮ್ಮ ಧರ್ಮದಲ್ಲಿ ಸಾಮ್ಯವಿಲ್ಲ ಎಂಬುದರ ಕಡೆಗೆ ನಾವು ಹೆಚ್ಚು ಲಕ್ಷ್ಯಗೊಟ್ಟು ನಡೆದರೆ ಅನೇಕ ಪೂರ್ವಗ್ರಹಗಳೆಲ್ಲ ನಷ್ಟವಾಗಿ ಹೋಗುವವು. ಯಾವ ಕಾಲಕ್ಕೂ ಭೇದಗಳಿದ್ದೇ ತೀರುವವು. ಆದರೆ ಭಿನ್ನಧರ್ಮಗಳಲ್ಲಿಯ ದ್ವೇಷಾಸೂಯೆ, ದೂಷಿತಗ್ರಹ ಇವು ಹೋಗುವದು ಅವಶ್ಯ. ಇಲ್ಲದೆ ಹೋದರೆ ಇವರು ಬರೆದುದನ್ನು ಅವರು ಓದುವಂತಿಲ್ಲ. ಅವರು ಬರೆದುದನ್ನು ಇವರು ಓದುವಂತಿಲ್ಲ. ಹೀಗೆ ಆಗಿ ಸಾಹಿತ್ಯದ ಬೆಳವಣಿಗೆಗೆ ಆತಂಕವುಂಟಾಗುವದು. ಧಾರ್ಮಿಕವಲ್ಲದ ಬೇರೆ ವಿಷಯಗಳನ್ನು ಕುರಿತು ಪುಸ್ತಕಗಳನ್ನು ಬರೆದರೂ ಈ ಧಾರ್ಮಿಕ ಪೂರ್ವಗ್ರಹಗಳು ಎಷ್ಟೋಸಾರಿ ಪ್ರಸಾರಕಾರ್ಯದಲ್ಲಿ ಅಡ್ಡಬರುವವು. ಅಂಥ ಪೂರ್ವಗ್ರಹಗಳು ಹೋಗಲಿಕ್ಕೆಯೇ ಬೇಕು.

ಈ ಮೇಲಿನ ಅಡಚಣೆಗಳಿಗಿಂತ ನಮ್ಮ ಸಮಾಜರಚನೆಯ ಮೂಲಕ ಅನೇಕ ಅಡಚಣೆಗಳುಂಟಾಗುತ್ತವೆ. ಜಾತಿವೈಮನಸ್ಸು ಸಾಹಿತ್ಯ ಪ್ರವಾಹಕ್ಕೆ ಎಷ್ಟೋ ಅಡ್ಡ ಬರುತ್ತಿದೆ. ಈ ಬಗ್ಗೆಯೂ ಅನೇಕರಿಗೆ ಅನುಭವವು ಬಂದಿರಲಿಕ್ಕೇ ಸಾಕು. ಈ ಸ್ಥಿತಿಯನ್ನು ನೀವು ಹೋಗಲಾಡಿಸಲಿಕ್ಕೆ ಬೇಕು. ಇದ್ದಂತೆಯೇ ಈ ಎಲ್ಲ ದೋಷಗಳಿರಲಿ, ನಮ್ಮ ಸಾಹಿತ್ಯ ಬೆಳೆಯಲಿ ಎಂದರೆ ಅದು ಆಗದು. ಒಳಗೆ ಹೆಗ್ಗಣ ಇಟ್ಟು ಗುದ್ದು ಬಡಿದರೆ ಅದು ಸಲ್ಲದು.

### ನುಡಿ ಮತ್ತು ಸಾಹಿತ್ಯಗಳ ಸದ್ಯಸ್ಥಿತಿ

ಇನ್ನು ನಮ್ಮ ನುಡಿ ಹಾಗೂ ಸಾಹಿತ್ಯ ಇವುಗಳ ವಿಲಕ್ಷಣ ಪರಿಸ್ಥಿತಿಯನ್ನು ಸ್ವಲ್ಪ ವಿವರಿಸುವೆನು. ಇಲ್ಲಿ ನಾವು ಹಲವು ವೈಲಕ್ಷಣ್ಯಗಳನ್ನು ಹೇಳಿದಾಕ್ಷಣಕ್ಕೆ, ಕನ್ನಡದ ವಿಷಯವೆಲ್ಲ ವಿಲಕ್ಷಣವಿದೆ ಎಂದು ಯಾರೂ ತಿಳಿಯಬಾರದು. ಇತ್ತ ಉತ್ತರ ಕರ್ನಾಟಕದ ಅನುಭವವೇ ನನಗೆ ಹೆಚ್ಚು ಇರುವದರಿಂದ ಇಲ್ಲಿಯ ಪರಿಸ್ಥಿತಿಯನ್ನೇ ನಾನು ಬಣ್ಣಿಸುವುದೊಳಿತು. ಇಲ್ಲಿ ಕನ್ನಡವು ಒಮ್ಮೆ ಒದಗಿದ ಮರಣಸಂಕಟದೊಳಗಿಂದ ಪಾರಾಗಿ ಈಗ ಗಂಡು ಮಾರಿ ನಿಂತಿದೆ ಎಂದು ಹೇಳಬಹುದು. ಯಾಕೆಂದರೆ ಅನೇಕ ಕಡೆಗೆ ಮೊದಲು ಇಲ್ಲಿ ಕನ್ನಡ ಶಾಲೆಗಳೇ ಇರಲಿಲ್ಲ. ಬೆಳಗಾವಿಯು ಕನ್ನಡ ಜಿಲ್ಲೆಯೆಂದು ಗೊತ್ತಾಗಬೇಕಾದರೆ ಐತಿಹಾಸಿಕ ಸಂಶೋಧನೆ ನಡಸಿದಂತೆ ರಸ್ಸೆಲ್ ಸಾಹೇಬರು ಸಂಶೋಧನೆ ನಡಸಬೇಕಾಯಿತು. ಧಾರವಾಡದ ಸಭೆಗಳಲ್ಲಿ ಕನ್ನಡ

ಪರಿಸ್ಥಿತಿಯನ್ನು ಪರಿಶೀಲಿಸುವಾಗ ನಾವು ಕೇವಲ ಕನ್ನಡನುಡಿ ಹಾಗೂ ಸಾಹಿತ್ಯದ ಪರಿಸ್ಥಿತಿಯನ್ನಷ್ಟೇ ನೋಡಿ ನಡೆಯುವಂತಿಲ್ಲ. ನಮ್ಮ ಜೀವನದಲ್ಲಿ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ಇತ್ಯಾದಿ ಬೇರೆ ಬೇರೆ ವಿಭಾಗಗಳು ಕಂಡುಬಂದರೂ ಅವು ಅತ್ಯಂತ ನಿಕಟವಾಗಿ ಸಂಬಂಧವಿರುವವು. ವಿಚಾರದ ಅನುಕೂಲತೆಗಾಗಿ ನಾವು ಅವುಗಳನ್ನು ಬೇರ್ಪಡಿಸುತ್ತೇವೆಯೇ ಹೊರತು ಅವೆಲ್ಲ ಸಕಲ ಜೀವನ ವ್ಯಾಪಿ ಇರುವುವು; ಹಾಗೂ ಹಾಸುಹೊಕ್ಕಿನಂತೆ ಪರಸ್ಪರಾವಲಂಬಿಗಳಿರುವವು, ಪರಸ್ಪರ ಪರಿಣಾಮಿಗಳಿರುವವು. ಆದುದರಿಂದ ಅವೆಲ್ಲವುಗಳ ವಿಚಾರವನ್ನು ನಾವು ಮಾಡಲಿಕ್ಕೇ ಬೇಕು, ಬೇಡವೆಂದರೆ ಆಗದು. ಇಲ್ಲಿ ಸಾಹಿತ್ಯವು ನಮ್ಮ ವಿಷಯ. ಉಳಿದವುಗಳನ್ನೆಲ್ಲ ನಾವು ಕೊಂಡು ಮಾಡುವುದೇನು ಎಂದು ಹಲವರು ಅನ್ನಬಹುದು. ಆದರೆ ಸಾಹಿತ್ಯದ ಪ್ರಗತಿಯಾಗದಿರಲಿಕ್ಕೆ ಇತರ ವಿಷಯಗಳಲ್ಲಿಯ ವಿಷಮಪರಿಸ್ಥಿತಿಯೇ ಕಾರಣವಿದೆಯೆಂದು ಕಂಡುಬಂದರೆ ಅದನ್ನು ದುರ್ಲಕ್ಷಿಸುವ ಬಗೆಹೇಗೆ? ರೋಗನಿಧಾನವನ್ನು ಚೆನ್ನಾಗಿ ಮಾಡದೆ ಬರೀ ಮೇಲ್ಮೇಲೇ ಔಷಧ ಕೊಡುತ್ತ ಹೋದರೆ ಎಂದೂ ಗುಣವಾಗಲರಿಯದು. ಅದೇ ರೀತಿ ಇತರ ಪರಿಸ್ಥಿತಿಯನ್ನು ಪರ್ಯಾಲೋಚಿಸಿ ಅದನ್ನು ಉತ್ತಮಗೊಳಿಸದೆ (ಆ ಕಾರ್ಯವನ್ನು ನಾವು ಸ್ವತಃ ಮಾಡದಿದ್ದರೆ, ಅದನ್ನು ಮಾಡುವವರಿಗೆ ಸಹಾಯ ಮಾಡಬಹುದು.) ನಮ್ಮ ಸಾಹಿತ್ಯವು ಎಂದೂ ಸುಧಾರಿಸದು. ಸಾಹಿತ್ಯ ಪ್ರಗತಿಯು ನಮ್ಮ ಜೀವನದ ಪ್ರಗತಿಯು. ನಮ್ಮ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯನ್ನು ಅವಲಂಬಿಸಿವೆ. ಆದ್ದರಿಂದ ಅವುಗಳನ್ನಾದರೂ ಇಲ್ಲಿ ಸಂಕ್ಷೇಪದಿಂದ ನೋಡುವೆನು.

ಮೊದಲನೆಯ ಮಾತೆಂದರೆ, ನಾವು ದಾಸ್ಯರಾಷ್ಟ್ರದವರು. ಈಗೇನೋ ಸ್ವಾತಂತ್ರ್ಯೋನ್ಮುಖರಾಗಿರುವೆವು. ಆದರೆ ನಮ್ಮ ಹಣೆಯ ಮೇಲಿದ್ದ ಈ ಕರೆಪಟ್ಟೆಯು ಅಳಿಸಿಹೋಗುವವರೆಗೆ ನಮ್ಮ ಸಾಹಿತ್ಯವು ಸ್ವತಂತ್ರ ವಿಹಂಗಮದಂತೆ ವಿಹರಿಸಲಾರದು. ಅದು ಪಂಜರದೊಳಗಿನ ಗಿಳಿಯಂತೆ ಕಲಿಸಿದಷ್ಟೇ ಹಾಡುತ್ತ ಕೂಡುವುದು. ಇನ್ನು ನಮ್ಮ ಕನ್ನಡನಾಡಿನ ಪರಿಸ್ಥಿತಿಯನ್ನು ನೋಡಿದರೆ ಅದಂತೂ ಬಹಳ ವಿಷಮವಾಗಿದೆ. ೧೧೦ ಲಕ್ಷ ಕನ್ನಡಿಗರು, ೧೫೦ ಲಕ್ಷ ಕರ್ನಾಟಕಸ್ಥರು (ಕನ್ನಡನಾಡಿನಲ್ಲಿರುವವರೆಲ್ಲರೂ ಕೂಡಿ) ಈಹೊತ್ತು ಹದಿನೆಂಟು ಆಡಳಿತಗಳಲ್ಲಿ ಹರಿದು ಹಂಚಿ ಬಿದ್ದಿದ್ದಾರೆ. ಕನ್ನಡನುಡಿ, ನಾಡು, ಸಾಹಿತ್ಯ ಇವುಗಳ ಬಗ್ಗೆ ನಾವು ಏನೇ ಮಾಡಬೇಕಾದರೂ ಈ ವಿವಿಧ ಆಡಳಿತಗಳೊಡನೆ ತಿಕ್ಕೆ ಹಾಯಬೇಕು. ಅವರೆಲ್ಲರೂ ಒಪ್ಪಿದಾಗ ನಾವು ಕರ್ನಾಟಕಸ್ಥರೆಲ್ಲರೂ ಏಕಮುಖದಿಂದ ಬಂದು ಕೆಲಸ ಮಾಡಬೇಕು! ಈಚೆಗಿನವರೆಗೆ ಮೈಸೂರೊಂದು ಬಿಟ್ಟರೆ, ಉಳಿದ ಸಂಸ್ಥಾನಿಕರು ಕನ್ನಡದ ಮಾತನ್ನೇ ಎತ್ತಗೊಡುತ್ತಿರಲಿಲ್ಲ. ಈಗೇನೋ ಸೊಸೆಯ ಕಾಲ ಬಂದಿದೆಯೆಂದು ತೋರುತ್ತದೆ! ಇರಲಿ, ಈ ವಿಚ್ಛಿನ್ನಸ್ಥಿತಿಯು ಕರ್ನಾಟಕದ ಸೊಲ್ಲು ಸಾಹಿತ್ಯಗಳಿಗೆ ಬಹಳ ಅಡಚಣೆಗಳನ್ನುಂಟುಮಾಡುತ್ತಿದೆ. ಮೇಲಾಗಿ ಇದೇನು ನಿಸರ್ಗ ಸಿದ್ಧವಾದ ಅಡಚಣೆಯಲ್ಲ. ನಾವು ಕನ್ನಡಿಗರು, ಕರ್ನಾಟಸ್ಥರು. ನಮಗೆ ಇಷ್ಟವೆಂದು ಮಾಡಿಕೊಂಡ ವ್ಯವಸ್ಥೆ ಇದಲ್ಲ. ಇದು ಕೃತಕವಾದುದು. ರಾಜಕೀಯ ಮಹತ್ವಾಕಾಂಕ್ಷಿಗಳು, ಇಲ್ಲವೆ, ದೇಶದ್ರೋಹಿಗಳು ತಮಗೆ ಇಷ್ಟವಿದ್ದಂತೆ ಈ ನಮ್ಮ ತಾಯ್ನುಡಿಯನ್ನು ಆಯಾ ಕಾಲಕ್ಕೆ ನಮಗೆ ಹೇಳದೆ ಕೇಳದೆ ಹಂಚಿಕೊಂಡು ಬಿಟ್ಟಿದ್ದಾರೆ. "ಈ ಭಾಗ ನನ್ನದು! ಈ ಭಾಗ ನನ್ನದು!" ಎಂದು ಈಗ ಹೇಳುತ್ತಿದ್ದಾರೆ. ಕುರುಬರು ಕುರಿಗಳನ್ನು ಪ್ರಾಯಶಃ ಇದೇ ರೀತಿ ಹಂಚಿಕೊಳ್ಳುತ್ತಿರಲಿಕ್ಕೆ ಸಾಕು. ಆದರೆ ನಾವು ಕುರಿಗಳಲ್ಲ. ಒಳ್ಳೆ ಕಣ್ಣು ಕಾಲುಗಳಿದ್ದು, ಬಾಯಿ ಬುದ್ಧಿಗಳಿದ್ದ ಮನುಷ್ಯರು. ನಮಗೆ ಈಗ ಎಚ್ಚರ ಹುಟ್ಟಿದೆ. ಆದುದರಿಂದ ಈಗ ನಾವು ಒಂದಾಗಬೇಕೆನ್ನುತ್ತೇವೆ. ನಮ್ಮ ನುಡಿ ಒಂದು, ನಮ್ಮ ನಾಡು ಒಂದು, ನಮ್ಮ ಇತಿಹಾಸ ಒಂದು. ಎಲ್ಲಕ್ಕೂ ಹೆಚ್ಚಿನದೇನೆಂದರೆ, ಈಗ್ಗೆ ನಾವು ಒಂದಾಗಿ ಮುಂದಡಿ ಇಡಬೇಕೆನ್ನುತ್ತೇವೆ. ನಮ್ಮನ್ನು ತಡೆಯಬೇಡಿರಿ, ತಡವ ಬೇಡಿರಿ. ಕರ್ನಾಟಕದಲ್ಲಿಯ ಪ್ರಸ್ತುತ ಪ್ರಜಾಶಕ್ತಿಯು ಜಾಗ್ರತವಾಗಿ ಮನವನ್ನಾಕ್ರಮಿಸಿ ಕೃತಕಭೇದಗಳನ್ನು ವಿಸರ್ಜಿಸಿ ಏಕವಾಗಬೇಕೆಂದು ಮುಂದೆ ಸಾಗುತ್ತಿದೆ. ತನಗೆ ಸಹಾಯ ಕೊಟ್ಟರೆ ಸ್ವೀಕರಿಸಿ ಕೃತಜ್ಞತೆಯಿಂದ ಆ ಶಕ್ತಿ ಮುಂದೆ ಸಾಗುವದು, ತನ್ನನ್ನು ವಿರೋಧಿಸಿದರೆ ಕಠೋರತೆಯಿಂದ ಮೆಟ್ಟಿ ಅದು ಮುಂದಡಿಯಿಡುವುದು.

'ಇದೇನೋ ಯಾವ ಮಾತೋ! ಮಗು ಚಂದಪ್ಪನನ್ನು ಬೇಡಿದಂತೆ ಇದು' ಎಂದು ಹಲವರು ಹೇಳಬಹುದು. 'ಇದೇನೋ ಸವಿಗನಸು' ಎಂದು ಇನ್ನೊಬ್ಬರು ಹೇಳಬಹುದು. ಇರಲಿ, ಎಷ್ಟೋ ಕನಸುಗಳು ನಿಜವಾಗುವವು ಎಂಬುದನ್ನು ಸಂಶಯಾತ್ಮರು ಲಕ್ಷಿಸಬೇಕು. ಅಲ್ಲಿಯವರೆಗೆ ಕನಸಿನ ಸವಿಯನ್ನಾದರೂ ಉಣ್ಣುವ ಭಾಗ್ಯವು ನಮಗಿದೆ. ಸಂಶಯಾತ್ಮರಿಗೆ ಅದೂ ಇಲ್ಲ.

ಕರ್ನಾಟಕದ ದೃಷ್ಟಿಯಿಂದ ನೋಡಿದರೆ, ನಮ್ಮಲ್ಲಿ, ಹಿಂದೂ, ಮುಸಲ್ಮಾನ, ಕ್ರಿಶ್ಚನ್, ಜೈನ-ಈ ಮುಂತಾದ ಧರ್ಮದವರು ಸಾಕಷ್ಟು ಇರುವರು. ಈಗ್ಯೂ ಅನೇಕ ಧಾರ್ಮಿಕಗ್ರಂಥಗಳು ಬರೆಯಲ್ಪಡುತ್ತಿವೆ ಎಂಬುದು ಪ್ರಕಾಶಿತ ಪುಸ್ತಕಗಳ ಪಟ್ಟಿಯಿಂದ ವ್ಯಕ್ತವಾಗುವದು. ಈ ಪುಸ್ತಕಗಳಲ್ಲಿ ಬಹುತರವಾಗಿ ತಮ್ಮ ಧರ್ಮದ ಅಂಧಾಭಿಮಾನವು ಹೆಚ್ಚು ಕಂಡುಬರುವದು. ಹಾಗೂ ಸಾಂಪ್ರದಾಯಿಕ ಹಟವು ಅಲ್ಲಲ್ಲಿ ವ್ಯಕ್ತವಾಗುವದು. ಆದರೆ ನಾವು ನವಯುಗದಲ್ಲಿ ಕಾಲಿಟ್ಟಿದ್ದೇವೆ ಎಂಬುದನ್ನು ಲೇಖಕರು ಇನ್ನು ಅನುಲಕ್ಷಿಸಬೇಕು. ಧರ್ಮವೆಂಬುದೊಂದೇ–ಮಾನವಧರ್ಮ, ವಿಶ್ವಧರ್ಮ. ಅದಕ್ಕೆಯೇ ಸ್ಥಲಭೇದದಿಂದ ಬೇರೆ ರೂಪಗಳು ಬಂದಿವೆ. ಆ ರೂಪಭೇದಗಳ ಮಾಹಾತ್ಮ್ಯವನ್ನು ಕಡಮೆಮಾಡಿ ಸಾಂಪ್ರದಾಯಿಕ ಸಂಗತಿಗಳ ವರ್ಚಸ್ಸನ್ನು ಬೀಳುಗೊಳಿಸಿ ಸರ್ವ ಧರ್ಮಗಳಲ್ಲಿಯ ಸಾಮಾನ್ಯ ತತ್ವಗಳ ವಿವೇಚನೆ ಮಾಡುವದರಲ್ಲಿಯೇ ನಾವು ಇನ್ನು ಹೆಚ್ಚು ತೊಡಗಬೇಕು. ನಿರ್ಹೇತುಕ, ತುಲನಾತ್ಮಕ ಅಭ್ಯಾಸವೇ ಈ ವೃತ್ತಿಯ ತಳಹದಿಯು. ಅದಕ್ಕೆ ನಾವು ಪ್ರೋತ್ಸಾಹ ಕೊಡಲಿಕ್ಕೆ ಬೇಕು. ಅನ್ಯಧರ್ಮಗಳಲ್ಲಿ ಮತ್ತು ನಮ್ಮ ಧರ್ಮದಲ್ಲಿ ಸಾಮ್ಯವಿಲ್ಲ ಎಂಬುವರ ಕಡೆಗೆ ನಾವು ಹೆಚ್ಚು ಲಕ್ಷ್ಯಗೊಟ್ಟು ನಡೆದರೆ ಅನೇಕ ಪೂರ್ವಗ್ರಹಗಳೆಲ್ಲ ನಷ್ಟವಾಗಿ ಹೋಗುವವು. ಯಾವ ಕಾಲಕ್ಕೂ ಭೇದಗಳಿದ್ದೇ ತೀರುವವು. ಆದರೆ ಭಿನ್ನಧರ್ಮಗಳಲ್ಲಿಯ ದ್ವೇಷಾಸೂಯೆ, ದೂಷಿತಗ್ರಹ ಇವು ಹೋಗುವದು ಅವಶ್ಯ. ಇಲ್ಲದೆ ಹೋದರೆ ಇವರು ಬರೆದುದನ್ನು ಅವರು ಓದುವಂತಿಲ್ಲ. ಅವರು ಬರೆದುದನ್ನು ಇವರು ಓದುವಂತಿಲ್ಲ. ಹೀಗೆ ಆಗಿ ಸಾಹಿತ್ಯದ ಬೆಳವಣಿಗೆಗೆ ಆತಂಕವುಂಟಾಗುವದು. ಧಾರ್ಮಿಕವಲ್ಲದ ಬೇರೆ ವಿಷಯಗಳನ್ನು ಕುರಿತು ಪುಸ್ತಕಗಳನ್ನು ಬರೆದರೂ ಈ ಧಾರ್ಮಿಕ ಪೂರ್ವಗ್ರಹಗಳು ಎಷ್ಟೋಸಾರಿ ಪ್ರಸಾರಕಾರ್ಯದಲ್ಲಿ ಅಡ್ಡಬರುವವು. ಅಂಥ ಪೂರ್ವಗ್ರಹಗಳು ಹೋಗಲಿಕ್ಕೆಯೇ ಬೇಕು.

ಈ ಮೇಲಿನ ಅಡಚಣೆಗಳಿಗಿಂತ ನಮ್ಮ ಸಮಾಜರಚನೆಯ ಮೂಲಕ ಅನೇಕ ಅಡಚಣೆಗಳುಂಟಾಗುತ್ತವೆ. ಜಾತಿವೈಮನಸ್ಸು ಸಾಹಿತ್ಯ ಪ್ರವಾಹಕ್ಕೆ ಎಷ್ಟೋ ಅಡ್ಡ ಬರುತ್ತಿದೆ. ಈ ಬಗ್ಗೆಯೂ ಅನೇಕರಿಗೆ ಅನುಭವವು ಬಂದಿರಲಿಕ್ಕೇ ಸಾಕು. ಈ ಸ್ಥಿತಿಯನ್ನು ನೀವು ಹೋಗಲಾಡಿಸಲಿಕ್ಕೆ ಬೇಕು. ಇದ್ದಂತೆಯೇ ಈ ಎಲ್ಲ ದೋಷಗಳಿರಲಿ, ನಮ್ಮ ಸಾಹಿತ್ಯ ಬೆಳೆಯಲಿ ಎಂದರೆ ಅದು ಆಗದು. ಒಳಗೆ ಹೆಗ್ಗಣ ಇಟ್ಟು ಗುದ್ದು ಬಡಿದರೆ ಅದು ಸಲ್ಲದು.

### ನುಡಿ ಮತ್ತು ಸಾಹಿತ್ಯಗಳ ಸದ್ಯಸ್ಥಿತಿ

ಇನ್ನು ನಮ್ಮ ನುಡಿ ಹಾಗೂ ಸಾಹಿತ್ಯ ಇವುಗಳ ವಿಲಕ್ಷಣ ಪರಿಸ್ಥಿತಿಯನ್ನು ಸ್ವಲ್ಪ ವಿವರಿಸುವೆನು. ಇಲ್ಲಿ ನಾವು ಹಲವು ವೈಲಕ್ಷಣ್ಯಗಳನ್ನು ಹೇಳಿದಾಕ್ಷಣಕ್ಕೆ, ಕನ್ನಡದ ವಿಷಯವೆಲ್ಲ ವಿಲಕ್ಷಣವಿದೆ ಎಂದು ಯಾರೂ ತಿಳಿಯಬಾರದು. ಇತ್ತ ಉತ್ತರ ಕರ್ನಾಟಕದ ಅನುಭವವೇ ನನಗೆ ಹೆಚ್ಚು ಇರುವದರಿಂದ ಇಲ್ಲಿಯ ಪರಿಸ್ಥಿತಿಯನ್ನೇ ನಾನು ಬಣ್ಣಿಸುವುದೊಳಿತು. ಇಲ್ಲಿ ಕನ್ನಡವು ಒಮ್ಮೆ ಒದಗಿದ ಮರಣಸಂಕಟದೊಳಗಿಂದ ಪಾರಾಗಿ ಈಗ ಗಂಡು ಮೀರಿ ನಿಂತಿದೆ. ಎಂದು ಹೇಳಬಹುದು. ಯಾಕೆಂದರೆ ಅನೇಕ ಕಡೆಗೆ ಮೊದಲು ಇಲ್ಲಿ ಕನ್ನಡ ಶಾಲೆಗಳೇ ಇರಲಿಲ್ಲ. ಬೆಳಗಾವಿಯು ಕನ್ನಡ ಜಿಲ್ಲೆಯೆಂದು ಗೊತ್ತಾಗಬೇಕಾದರೆ ಐತಿಹಾಸಿಕ ಸಂಶೋಧನೆ ನಡಸಿದಂತೆ ರಸ್ಸೆಲ್ ಸಾಹೇಬರು ಸಂಶೋಧನೆ ನಡಸಬೇಕಾಯಿತು. ಧಾರವಾಡದ ಸಭೆಗಳಲ್ಲಿ ಕನ್ನಡ

ಮಾತಾಡಬೇಕು ಎಂಬುದನ್ನು ಸಿದ್ಧಪಡಿಸುವದು ಒಂದು ದೊಡ್ಡ ಶತಕೃತ್ಯವೆನಿಸಿತು. ಕನ್ನಡಕ್ಕೇನು ಭಾಷೆಯೇ, ಸಾಹಿತ್ಯವೇ, ಸಂಗೀತವೇ, ಎಂದು ಕೇಳುವ-ಮರಾಟಿಗರಲ್ಲ-ಕನ್ನಡ ಮಹನೀಯರು-ಇನ್ನೂ ಇಲ್ಲಿ ದೊರಕಬಹುದು. ನಮ್ಮ ಮನೆ ಮಾತು ಕನ್ನಡ ಎಂದು ಹೇಳಲು ನಾಚುವವರು ಈಗ್ಯೂ ಇದ್ದಾರೆ. ನಾನು ಮೊನ್ನೆ ಪುಣೆಯ ನ್ಯೂಸ್ಕೂಲಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘಕ್ಕೆ ಹೋಗಿದ್ದೆನು. ಅಲ್ಲಿ ಕನ್ನಡ ವಿದ್ಯಾರ್ಥಿಗಳೆಷ್ಟು ಎಂದು ಕೇಳಲು "ಮೂವತ್ತು" ಎಂದು ಕಾರ್ಯದರ್ಶಿಯು ಹೇಳಿದನು. ಇಷ್ಟೆಯೇ? ಎಂದು ನಾನು ಕೇಳಲಾಗಿ, 'ಇನ್ನೂ ಇದ್ದಾರೆ, ಕನ್ನಡವೆಂದು ಹೇಳಲು ನಾಚುತ್ತಾರೆ' ಎಂದನು! ಹುಡುಗರು ನಾಚುವದು ವಿಶೇಷವಲ್ಲ, ದೊಡ್ಡ-ದೊಡ್ಡವರು ಸಹ ನಾಚುವರು. ಕರ್ನಾಟಕದಲ್ಲಿ ಆರ್ಥಿಕಪ್ರಗತಿ ಸಾಕಷ್ಟು ಇಲ್ಲದ್ದರಿಂದ ಕರ್ನಾಟಕದಿಂದ ಅನೇಕರು ವಿಶೇಷವಾಗಿ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಯವರು ಮುಂಬೈ ಮದ್ರಾಸುಗಳಿಗೆ ಮತ್ತು ನೆರೆಪ್ರಾಂತಗಳಿಗೆ ಹೋಗುವರು. ಅವರು ಬಹುಶಃ ಕನ್ನಡಕ್ಕೆ ತಿಲಾಂಜಲಿಯನ್ನು ಕೊಟ್ಟೇ ಹೊರಬೀಳುವರು. ಆಮಟ್ಟಿಗೆ ಕನ್ನಡಕ್ಕೆ ಹಾನಿಯೇ ಆಗುವದು. ತದ್ವಿರುದ್ಧವಾಗಿ ಕರ್ನಾಟಕದಲ್ಲಿ ಬಂದು ನೆಲಸಿದ ನೆರೆಪ್ರಾಂತದವರು ಅಂದರೆ ಮರಾಟಿಗರು, ತೆಲುಗರು, ಗುಜರಾಥಿಗಳು, ಮಾರವಾಡಿಗಳು ತಮ್ಮ ಭಾಷೆಯನ್ನು ಬಿಡದೆ ತಮ್ಮ ಹಕ್ಕನ್ನು ಇಲ್ಲಿ ಹೇಳುವರು. ಮರಾಠಿ ಬಾಂಧವರು ಈ ವಿಷಯದಲ್ಲಿ ಒಳ್ಳೇ ಗಟ್ಟಿಗರು. ಅವರು ಮನೆ ಮಾತನ್ನು ಎಂದಿಗೂ ಬಿಡುವದಿಲ್ಲ. ಬಿಟ್ಟದ್ದನ್ನು ನಾವು ಕಂಡಿಲ್ಲ.

ಈ ಎಲ್ಲ ಚಿಲ್ಲರೆ ಮಾತುಗಳಿಗೆ ಈ ಸಾಹಿತ್ಯ ಪರಿಷತ್ತಿನಲ್ಲಿ ಏಕೆ ಮಹತ್ವ ಎಂದು ನನ್ನ ಮಿತ್ರರು ಕೇಳಬಹುದು. ಈ ವಿವರವನ್ನು ಹೇಳದೆ ನಾನೂ ನಾಲ್ಕು ದುಂಡು ದುಂಡು ಮಾತುಗಳನ್ನಾಡಿ ನಿಮ್ಮ ಕಡೆಯಿಂದ ಭಲೆಯೆನಿಸಿಕೊಳ್ಳಬಹುದಾಗಿತ್ತು. ಆದರೆ ಈ ಸಣ್ಣ ಮಾತುಗಳಲ್ಲಿಯೇ ದೊಡ್ಡ ಸಂಗತಿಗಳ ಉಗಮವಿದೆ. ಇಂಥ ಮಾತುಗಳಿಂದಲೇ ಮುಂದೆ ದೊಡ್ಡ ಸಮಸ್ಯೆಗಳುಂಟಾಗುತ್ತವೆ. ಮುಂದೆ ಅಂಥ ಸಮಸ್ಯೆ ಉಂಟಾಗದಂತೆ ನಮ್ಮ ಪ್ರಯತ್ನ ವಿರಬೇಕು. ಆದುದರಿಂದ ನಾವು ಯಾವ ಮಾತೂ ಸಣ್ಣದು ಎಂದು ಎನ್ನಲಿಕ್ಕಾಗುವದಿಲ್ಲ. ಅದರ ಪರಿಣಾಮವೇನಾಗುವದೆಂಬುದನ್ನು ನೋಡಿ ಬಳಿಕ ಅದಕ್ಕೆ ಸಣ್ಣದು ದೊಡ್ಡದು ಎನ್ನಬಹುದು.

ಒಂದು ವೇಳೆ ಕನ್ನಡಿಗರು ನೆರೆಪ್ರಾಂತದಲ್ಲಿ—ಪರಪ್ರಾಂತವೆನ್ನುವದನ್ನು ನಾವು ಬಿಟ್ಟುಬಿಡಬೇಕು–ನೆಲಸುವದಾದರೆ ಅವರು ಬೇಕಾದ ಹಾಗೆ ಕನ್ನಡವನ್ನು ಮರೆಯಲಿ. ಅದರಿಂದ ದೊಡ್ಡ ಹಾನಿಯಿಲ್ಲ. ಆದರೆ ಮುಂದೆ ಅವರಾಗಲಿ ಅವರ ಮಕ್ಕಳಾಗಲಿ ಇಲ್ಲಿ ಬರುವದಾದರೆ, ಇಲ್ಲಿಗೆ ಬರುವ ಇಚ್ಛೆಯಿಂದ ಹೋಗಿದ್ದರೆ, ಹೊಲಮನೆಗಳನ್ನು ಇಲ್ಲಿ ಇಟ್ಟುಕೊಂಡಿದ್ದರೆ ತಮ್ಮ ಕನ್ನಡವನ್ನು ಳಿಸಿಕೊಳ್ಳುವ ಭಾರವು ಅವರ ಮೇಲಿದೆ ಎಂದು ಹೇಳಬಲ್ಲೆ. ಅದೇ ರೀತಿ ಮರಾಟಿಗರಾಗಲಿ, ತೆಲುಗರಾಗಲಿ, ಕರ್ನಾಟಕದಲ್ಲಿ ನೆಲಸಿದವರು ಇಲ್ಲಿಯ ನುಡಿಯನ್ನು ಕಲಿತು ಇಲ್ಲಿ ಸಮರಸರಾಗಲು ಯತ್ನಿಸಲಿಕ್ಕೆ ಬೇಕು. ಇದು ನೆರೆ ಪ್ರಾಂತದ ಪರಸ್ಪರ ಧರ್ಮ. ಹಾಗೆ ಮಾಡದೆ ಆಯಾ ಪ್ರಾಂತಗಳಲ್ಲಿ ಭಾಷಾಸಮಸ್ಯೆಗಳುಂಟಾಗುವಂತೆ ವರ್ತಿಸುವದು ಬಹಳ ದೊಡ್ಡ ತಪ್ಪಾಗುವದು. ಇದಲ್ಲದೆ ನಮ್ಮ ನೆರೆಪ್ರಾಂತದವರು ನಮಗಿಂತ ಮೊದಲು ಜಾಗೃತರಾಗಿ ತಮ್ಮ ನುಡಿಗಳನ್ನು ಎಷ್ಟೋ ಸುಧಾರಿಸಿಕೊಂಡಿದ್ದಾರೆ. ಇಷ್ಟೇ ಅಲ್ಲ. ಅವರು ಹೆಚ್ಚು ಪ್ರಚಾರಶೀಲರು ಇರುವರು. ಆದುದರಿಂದ ನಮ್ಮ ಪ್ರಾಂತದಲ್ಲಿ ನಮ್ಮ ನುಡಿಯ ವರ್ಚಸ್ಸೇ ನಡೆಯುವಂತೆ ನಾವು ನಿರ್ದಾಕ್ಷಿಣ್ಯದಿಂದ ಎಚ್ಚರಗೊಳ್ಳಲಿಕ್ಕೆ ಬೇಕು. ಇದಲ್ಲದೆ ಈಗಿನ ಕಾಲದಲ್ಲಿ ಫೋನೋ, ರೇಡಿಯೋ, ಸಿನಿಮಾ, ವೃತ್ತಪತ್ರಗಳು ಇವಾದರೂ ನುಡಿಯ ಪ್ರಚಾರದಲ್ಲಿ ಸಹಾಯಕವಾಗುವವು. ಕನ್ನಡವು ಈ ವ್ಯವಸಾಯಗಳಲ್ಲಿ ಕೂಡ ಬಹಳ ಹಿಂದೆ ಇದೆ ಎಂದು ಹೇಳಬೇಕಾಗುವದು. ಮುಂಬಯಿ ರೇಡಿಯೋ ಸ್ಟೇಷನ್ನಿನಿಂದ ಈಗ ಶೈಕ್ಷಣಿಕ ವಿಷಯಗಳು ಬೀರಲ್ಪಡುತ್ತಿರುವವು. ಆದರೆ ಅಲ್ಲಿ ಕನ್ನಡಕ್ಕೆ ಸ್ಥಾನವು ದೊರೆತಿಲ್ಲ! ಸಿನಿಮಾ ಸೃಷ್ಟಿಯಲ್ಲಿ ಕನ್ನಡ ವಾಕ್ಪಟಗಳನ್ನು ತಯಾರಿಸುವ ಕಂಪನಿಗಳೆಷ್ಟು? ಎಂದು ವಿಚಾರಿಸಿದರೆ ಅತ್ಯಂತ ನಿರಾಶೆಯಾಗುವಂತಿದೆ. ಇವುಗಳನ್ನು ಈ ದಿನಗಳಲ್ಲಿ ದುರ್ಲಕ್ಷಿಸಿ ನಡೆಯುವಂತಿಲ್ಲ.

ಇದು ನುಡಿಯ ವಿಷಯವಾಯಿತು. ಇನ್ನು ಸಾಹಿತ್ಯದ ದೃಷ್ಟಿಯಿಂದ ನೋಡುವಾ. ಇಲ್ಲಿಯೂ ವಿಲಕ್ಷಣಸ್ಥಿತಿಯೇ ಇದೆ. ಕನ್ನಡಿಗರ ಸಂಖ್ಯೆಯೇನೋ ಹೇಳಲು ೧೧೦ ಲಕ್ಷ. ಆದರೆ ಭಿನ್ನ ಆಡಳಿತಗಳ ಮೂಲಕ, ವರ್ಷಾನುವರ್ಷ ಭಿನ್ನ ಆಡಳಿತಕ್ಕೆ ಒಳಗಾಗಿರುವದರಿಂದ ಭಿನ್ನ ಹಿತ ಸಂಬಂಧಗಳು ಉಂಟಾದ ಮೂಲಕ, ನಮ್ಮಲ್ಲಿ ಭಾಷಾ ಭೇದಗಳುಂಟಾಗಿವೆ. ಒಂದು ಭಾಗದಲ್ಲಿ ರಚಿಸುವ ಪುಸ್ತಕವು ಇನ್ನೊಂದೆಡೆ ಸರಿಹೋಗುವದಿಲ್ಲ. ಮಾಧ್ಯಮಿಕ ಅಥವಾ ಉಚ್ಚ ಶಿಕ್ಷಣ ಕ್ರಮದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಯೋಗ್ಯಸ್ಥಾನವಿಲ್ಲದ್ದರಿಂದ ಕನ್ನಡವಲ್ಲಿ ಶ್ರೇಷ್ಠ ತರಗತಿಯ ಪುಸ್ತಕಗಳು ಹೊರಡುವದು ಕಠಿಣವಾಗಿದೆ. ಯಾವದೇ ಲೇಖಕನು ಪುಸ್ತಕ ಬರೆದನೆಂದರೆ, ಅವನು ತನ್ನ ಪುಸ್ತಕವು ಇಲ್ಲವೆ ಪಠ್ಯಪುಸ್ತಕವಾಗುವಂತೆ ಯತ್ನಿಸಬೇಕು: ಅಂದರೆ ದೈನ್ಯಹೇಳಿಕೊಳ್ಳುತ್ತ ಹೋಗಬೇಕು—ಇಲ್ಲವೆ ಇದ್ದ ಬಿದ್ದ ಎರಡು ಮೂರು ಸಂಸ್ಥೆಗಳ ಕಡೆಗೆ ಧಾವಿಸಿ ಏನಾದರೂ ಪಾರಿತೋಷಿಕ ದೊರೆಯುವದೇನೋ ನೋಡಬೇಕು! ಯಾವದೇ ಪುಸ್ತಕವನ್ನು ನೋಡಿದರೂ ತೀರ ಲೋಕಪ್ರಿಯವಾಗುವ ಕಾದಂಬರಿಗಳನ್ನು ನೋಡಿದರೂ ಅವುಗಳ ಆರಂಭದಲ್ಲಿ, ಪ್ರಥಮ ಸಂಸ್ಕರಣ ೧,೦೦೦ ಪ್ರತಿ ಎಂದು ಇರುತ್ತದೆ. ಪಠ್ಯಪುಸ್ತಕಗಳನ್ನು ಬಿಟ್ಟರೆ ಎರಡನೆಯ ಸಂಸ್ಕರಣವಾದ ಪುಸ್ತಕಗಳೆಷ್ಟು? ಇದರ ಲೆಕ್ಕಮಾಡುವದು ಬಹಳ ಮನೋರಂಜಕವಾಗಬಹುದು. ಇದಲ್ಲದೆ ಸಾಹಿತ್ಯವನ್ನವಲಂಬಿಸಿ ಜೀವನ ಮಾಡುವವರು ಎಷ್ಟುಜನರಿರುವರು? ಎಂಬುದನ್ನು ನೋಡುವದೂ ಬಹಳ ಬೋಧಕರವಾಗುವದು. ಇಷ್ಟೇ ಏಕೆ? ಕನ್ನಡದಲ್ಲಿ ಪುಸ್ತಕಗಳು ವರ್ಷವರ್ಷಕ್ಕೆ ಹುಟ್ಟದವೆಷ್ಟು? ಇತ್ಯಾದಿ ವಿಷಯವನ್ನು ಕಲೆಹಾಕಬೇಕೆಂದು ಯತ್ನಿಸಿದರೆ ಅದಕ್ಕಾಗಿ ತಕ್ಕ ಸಾಧನಗಳು ಕೂಡ ದೊರೆಯುವದಿಲ್ಲ. ಇಡೀ ಕನ್ನಡ ಸಾಹಿತ್ಯಕ್ಕೆ-ಭೂತ, ವರ್ತಮಾನ ಮತ್ತು ಭವಿಷ್ಯ—ಒಂದು ಮಧ್ಯವರ್ತಿ ಪುಸ್ತಕಾಲಯವು ಅವಶ್ಯವಿದೆ. ಅಲ್ಲಿ ಈ ಬಗೆಯ ವಾರ್ಷಿಕ ಪರಿಶೀಲನಾದಿಗಳನ್ನು ಮಾಡುವದು ಅನುಕೂಲವಾಗುವದು.

ಪುಸ್ತಕಗಳ ಸಂಖ್ಯೆ ಒತ್ತಟ್ಟಗಿರಲಿ. ವರ್ಷವರ್ಷಕ್ಕೆ ಹೊರಡುವ ಪುಸ್ತಕಗಳ ವಿಷಯಗಳಾವವು? ಅವುಗಳ ಯೋಗ್ಯತೆಯೇನು? ಇದು ಹೆಚ್ಚು ಮಹತ್ವದ ಸಂಗತಿಯು. ಕಥೆ-ಕಾದಂಬರಿಗಳೆಷ್ಟು? ಐತಿಹಾಸಿಕ, ಚರಿತ್ರಾತ್ಮಕ ಪುಸ್ತಕಗಳೆಷ್ಟು? ತತ್ವ ವಿಷಯಕವೆಷ್ಟು? ವೈಜ್ಞಾನಿಕವೆಷ್ಟು? ಇತ್ಯಾದಿ ನೋಡಿದರೆ ಅದರಲ್ಲಿಯೂ ನಾವು ಬಹಳ ಹಿಂದೆ ಇರುವೆವೆಂದೇ ಹೇಳಬೇಕಾಗುವದು. ಇನ್ನು ಬರೆದ ಪುಸ್ತಕಗಳಲ್ಲಿ ಮೌಲಿಕವಾದವೆಷ್ಟು, ಭಾಷಾಂತರಗಳೆಷ್ಟು, ಪ್ರತಿಬಿಂಬಗಳೆಷ್ಟು, ವಾಙ್ಮಯ ಚೌರ್ಯ ಮಾಡಿದವೆಷ್ಟು, ನೆರೆ ಭಾಷೆಗಳಲ್ಲಿ ಭಾಷಾಂತರ ಹೊಂದಿದವೆಷ್ಟು? ಇತ್ಯಾದಿ ಮಾತುಗಳನ್ನು ಪರಿಶೀಲಿಸಿದರೆ ನಮ್ಮ ಸಾಹಿತ್ಯದ ಯೋಗ್ಯತೆ ತಿಳಿಯುವದು. ಅಂಥ ಇಂಥ ಸಾವಿರಾರು ಪುಸ್ತಕಗಳಿಗಿಂತ ಒಂದೇ ವಿಚಾರ ಪ್ರಚೋದಕವಾದ ಪುಸ್ತಕವು ಪ್ರಪಂಚವನ್ನೇ ತಲೆದೂಗಿಸಬಹುದು. ಹಾಗೂ ನಮ್ಮ ಸಾಹಿತ್ಯಕ್ಕೆ ಎಲ್ಲೆಲ್ಲಿಯೂ ಮನ್ನಣೆ ದೊರೆಯುವಂತೆ ಮಾಡಬಹುದು! ರವೀಂದ್ರನಾಥರ ಒಂದೇ 'ಗೀತಾಂಜಲಿ'ಯು ಬಂಗಾಲಿಯನ್ನು ಅತ್ಯುಚ್ಚಶಿಖರಕ್ಕೆ ಮುಟ್ಟಿಸಿಬಿಟ್ಟಿತು. ನಮ್ಮಲ್ಲಿ ಅಂಥ ಪುಸ್ತಕಗಳೇನಾದರೂ ಇವೆಯೋ ಎಂಬುದನ್ನು ವರ್ಷವರ್ಷಕ್ಕೆ ನಿರೀಕ್ಷಿಸುವದು ಅವಶ್ಯವಿರುವದು.

ಇನ್ನು ವೃತ್ತಪತ್ರಗಳು ವಿಶೇಷವಾಗಿ ದೈನಿಕಗಳು, ಭಾಷಾ ಪ್ರಚಾರ ದೃಷ್ಟಿಯಿಂದ ಹೆಚ್ಚು ಕೆಲಸ ಮಾಡುವವು. ಆದರೆ ಕನ್ನಡದಲ್ಲಿ ಅವುಗಳ ಪ್ರಸಾರವು ಕೂಡ ಬಹಳ ಕಡಮೆ. ಅವುಗಳ ಪ್ರಸಾರಕ್ಕೂ ಅನೇಕ ಅಡಚಣೆಗಳಿವೆ. ಒಂದು ದೈನಿಕವು ಕೂಡ ತನ್ನ ಕಾಲ ಮೇಲೆ ತಾನು ನಿಂತು ಒಳ್ಳೆ ಹೊಸ ಉಪಕ್ರಮಗಳನ್ನು ಮಾಡಿ ಜನರಲ್ಲಿ ನವವಿಚಾರಗಳನ್ನು ಬೀರುವ ಸಾಮರ್ಥ್ಯವುಳ್ಳದ್ದಿಲ್ಲ. ನಿತ್ಯ ಸುದ್ದಿ ಮುಂತಾದವುಗಳನ್ನು ಕೊಡುವ ಕಾರ್ಯವನ್ನಿಷ್ಟು ಅವು ಹೇಗಾದರೂ ಮಾಡುತ್ತಲಿವೆ ಇಷ್ಟೆ! ಸಾಹಿತ್ಯದ ದೃಷ್ಟಿಯಿಂದ ವೃತ್ತಪತ್ರಿಕೆಗಳು ಮಾಡಬಹುದಾದ ಕೆಲಸಗಳಲ್ಲಿ ಹೊಸ ಶಬ್ದಗಳ ಪ್ರಚಾರವೊಂದು ಬಹಳ ದೊಡ್ಡದಾಗಿದೆ. ಅವರು ನಿತ್ಯವೂ ಹೊಸವಿಚಾರಗಳನ್ನು ಪ್ರಕಟ

ಮಾತಾಡಬೇಕು ಎಂಬುದನ್ನು ಸಿದ್ಧಪಡಿಸುವದು ಒಂದು ದೊಡ್ಡ ಶತಕೃತ್ಯವೆನಿಸಿತು. ಕನ್ನಡಕ್ಕೇನು ಭಾಷೆಯೇ, ಸಾಹಿತ್ಯವೇ, ಸಂಗೀತವೇ, ಎಂದು ಕೇಳುವ-ಮರಾಟಗರಲ್ಲ-ಕನ್ನಡ ಮಹನೀಯರು-ಇನ್ನೂ ಇಲ್ಲಿ ದೊರಕಬಹುದು. ನಮ್ಮ ಮನೆ ಮಾತು ಕನ್ನಡ ಎಂದು ಹೇಳಲು ನಾಚುವವರು ಈಗ್ಯೂ ಇದ್ದಾರೆ. ನಾನು ಮೊನ್ನೆ ಪುಣೆಯ ನ್ಯೂಸ್ಕೂಲಿನಲ್ಲಿ ಸ್ಥಾಪಿತವಾದ ಕರ್ನಾಟಕ ಸಂಘಕ್ಕೆ ಹೋಗಿದ್ದನು. ಅಲ್ಲಿ ಕನ್ನಡ ವಿದ್ಯಾರ್ಥಿಗಳೆಷ್ಟು ಎಂದು ಕೇಳಲು "ಮೂವತ್ತು" ಎಂದು ಕಾರ್ಯದರ್ಶಿಯು ಹೇಳಿದನು. ಇಷ್ಟೆಯೇ? ಎಂದು ನಾನು ಕೇಳಲಾಗಿ, 'ಇನ್ನೂ ಇದ್ದಾರೆ, ಕನ್ನಡವೆಂದು ಹೇಳಲು ನಾಚುತ್ತಾರೆ' ಎಂದನು! ಹುಡುಗರು ನಾಚುವದು ವಿಶೇಷವಲ್ಲ, ದೊಡ್ಡ–ದೊಡ್ಡವರು ಸಹ ನಾಚುವರು. ಕರ್ನಾಟಕದಲ್ಲಿ ಆರ್ಥಿಕಪ್ರಗತಿ ಸಾಕಷ್ಟು ಇಲ್ಲದ್ದರಿಂದ ಕರ್ನಾಟಕದಿಂದ ಅನೇಕರು ವಿಶೇಷವಾಗಿ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಯವರು ಮುಂಬೈ ಮದ್ರಾಸುಗಳಿಗೆ ಮತ್ತು ನೆರೆಪ್ರಾಂತಗಳಿಗೆ ಹೋಗುವರು. ಅವರು ಬಹುಶಃ ಕನ್ನಡಕ್ಕೆ ತಿಲಾಂಜಲಿಯನ್ನು ಕೊಟ್ಟೇ ಹೊರಬೀಳುವರು. ಆಮಟ್ಟಿಗೆ ಕನ್ನಡಕ್ಕೆ ಹಾನಿಯೇ ಆಗುವದು. ತದ್ವಿರುದ್ಧವಾಗಿ ಕರ್ನಾಟಕದಲ್ಲಿ ಬಂದು ನೆಲಸಿದ ನೆರೆಪ್ರಾಂತದವರು ಅಂದರೆ ಮರಾಟಿಗರು, ತೆಲುಗರು, ಗುಜರಾಥಿಗಳು, ಮಾರವಾಡಿಗಳು ತಮ್ಮ ಭಾಷೆಯನ್ನು ಬಿಡದೆ ತಮ್ಮ ಹಕ್ಕನ್ನು ಇಲ್ಲಿ ಹೇಳುವರು. ಮರಾಠಿ ಬಾಂಧವರು ಈ ವಿಷಯದಲ್ಲಿ ಒಳ್ಳೇ ಗಟ್ಟಿಗರು. ಅವರು ಮನೆ ಮಾತನ್ನು ಎಂದಿಗೂ ಬಿಡುವದಿಲ್ಲ. ಬಿಟ್ಟದ್ದನ್ನು ನಾವು ಕಂಡಿಲ್ಲ.

ಈ ಎಲ್ಲ ಚಿಲ್ಲರೆ ಮಾತುಗಳಿಗೆ ಈ ಸಾಹಿತ್ಯ ಪರಿಷತ್ತಿನಲ್ಲಿ ಏಕೆ ಮಹತ್ವ ಎಂದು ನನ್ನ ಮಿತ್ರರು ಕೇಳಬಹುದು. ಈ ವಿವರವನ್ನು ಹೇಳದೆ ನಾನೂ ನಾಲ್ಕು ದುಂಡು ದುಂಡು ಮಾತುಗಳನ್ನಾಡಿ ನಿಮ್ಮ ಕಡೆಯಿಂದ ಭಲೆಯೆನಿಸಿಕೊಳ್ಳಬಹುದಾಗಿತ್ತು. ಆದರೆ ಈ ಸಣ್ಣ ಮಾತುಗಳಲ್ಲಿಯೇ ದೊಡ್ಡ ಸಂಗತಿಗಳ ಉಗಮವಿದೆ. ಇಂಥ ಮಾತುಗಳಿಂದಲೇ ಮುಂದೆ ದೊಡ್ಡ ಸಮಸ್ಯೆಗಳುಂಟಾಗುತ್ತವೆ. ಮುಂದೆ ಅಂಥ ಸಮಸ್ಯೆ ಉಂಟಾಗದಂತೆ ನಮ್ಮ ಪ್ರಯತ್ನ ವಿರಬೇಕು. ಆದುದರಿಂದ ನಾವು ಯಾವ ಮಾತೂ ಸಣ್ಣದು ಎಂದು ಎನ್ನಲಿಕ್ಕಾಗುವದಿಲ್ಲ. ಅದರ ಪರಿಣಾಮವೇನಾಗುವದೆಂಬುದನ್ನು ನೋಡಿ ಬಳಿಕ ಅದಕ್ಕೆ ಸಣ್ಣದು ದೊಡ್ಡದು ಎನ್ನಬಹುದು.

ಒಂದು ವೇಳೆ ಕನ್ನಡಿಗರು ನೆರೆಪ್ರಾಂತದಲ್ಲಿ—ಪರಪ್ರಾಂತವೆನ್ನುವದನ್ನು ನಾವು ಬಿಟ್ಟುಬಿಡಬೇಕು—ನೆಲಸುವದಾದರೆ ಅವರು ಬೇಕಾದ ಹಾಗೆ ಕನ್ನಡವನ್ನು ಮರೆಯಲಿ. ಅದರಿಂದ ದೊಡ್ಡ ಹಾನಿಯಿಲ್ಲ. ಆದರೆ ಮುಂದೆ ಅವರಾಗಲಿ ಅವರ ಮಕ್ಕಳಾಗಲಿ ಇಲ್ಲಿ ಬರುವದಾದರೆ, ಇಲ್ಲಿಗೆ ಬರುವ ಇಚ್ಛೆಯಿಂದ ಹೋಗಿದ್ದರೆ, ಹೊಲಮನೆಗಳನ್ನು ಇಲ್ಲಿ ಇಟ್ಟುಕೊಂಡಿದ್ದರೆ ತಮ್ಮ ಕನ್ನಡವನ್ನುಳಿಸಿಕೊಳ್ಳುವ ಭಾರವು ಅವರ ಮೇಲಿದೆ ಎಂದು ಹೇಳಬಲ್ಲೆ. ಅದೇ ರೀತಿ ಮರಾಟಿಗರಾಗಲಿ, ತೆಲುಗರಾಗಲಿ, ಕರ್ನಾಟಕದಲ್ಲಿ ನೆಲಸಿದವರು ಇಲ್ಲಿಯ ನುಡಿಯನ್ನು ಕಲಿತು ಇಲ್ಲಿ ಸಮರಸರಾಗಲು ಯತ್ನಿಸಲಿಕ್ಕೆ ಬೇಕು. ಇದು ನೆರೆಪ್ರಾಂತದ ಪರಸ್ಪರ ಧರ್ಮ. ಹಾಗೆ ಮಾಡದೆ ಆಯಾ ಪ್ರಾಂತಗಳಲ್ಲಿ ಭಾಷಾಸಮಸ್ಯೆಗಳುಂಟಾಗುವಂತೆ ವರ್ತಿಸುವದು ಬಹಳ ದೊಡ್ಡ ತಪ್ಪಾಗುವದು. ಇದಲ್ಲದೆ ನಮ್ಮ ನೆರೆಪ್ರಾಂತದವರು ನಮಗಿಂತ ಮೊದಲು ಜಾಗೃತರಾಗಿ ತಮ್ಮ ನುಡಿಗಳನ್ನು ಎಷ್ಟೋ ಸುಧಾರಿಸಿಕೊಂಡಿದ್ದಾರೆ. ಇಷ್ಟೇ ಅಲ್ಲ. ಅವರು ಹೆಚ್ಚು ಪ್ರಚಾರಶೀಲರು ಇರುವರು. ಆದುದರಿಂದ ನಮ್ಮ ಪ್ರಾಂತದಲ್ಲಿ ನಮ್ಮ ನುಡಿಯ ವರ್ಚಸ್ಸೇ ನಡೆಯುವಂತೆ ನಾವು ನಿರ್ದಾಕ್ಷಿಣ್ಯದಿಂದ ಎಚ್ಚರಗೊಳ್ಳಲಿಕ್ಕೆ ಬೇಕು. ಇದಲ್ಲದೆ ಈಗಿನ ಕಾಲದಲ್ಲಿ ಫೋನೋ, ರೇಡಿಯೋ, ಸಿನಿಮಾ, ವೃತ್ತಪತ್ರಗಳು ಇವಾದರೂ ನುಡಿಯ ಪ್ರಚಾರದಲ್ಲಿ ಸಹಾಯಕವಾಗುವವು. ಕನ್ನಡವು ಈ ವ್ಯವಸಾಯಗಳಲ್ಲಿ ಕೂಡ ಬಹಳ ಹಿಂದೆ ಇದೆ ಎಂದು ಹೇಳಬೇಕಾಗುವದು. ಮುಂಬಯಿ ರೇಡಿಯೋ ಸ್ಟೇಷನ್ನಿನಿಂದ ಈಗ ಶೈಕ್ಷಣಿಕ ವಿಷಯಗಳು ಬೀರಲ್ಪಡುತ್ತಿರುವವು. ಆದರೆ ಅಲ್ಲಿ ಕನ್ನಡಕ್ಕೆ ಸ್ಥಾನವು ದೊರೆತಿಲ್ಲ! ಸಿನಿಮಾ ಸೃಷ್ಟಿಯಲ್ಲಿ ಕನ್ನಡ ವಾಕ್ಪಟಗಳನ್ನು ತಯಾರಿಸುವ ಕಂಪನಿಗಳೆಷ್ಟು? ಎಂದು ವಿಚಾರಿಸಿದರೆ ಅತ್ಯಂತ ನಿರಾಶೆಯಾಗುವಂತಿದೆ. ಇವುಗಳನ್ನು ಈ ದಿನಗಳಲ್ಲಿ ದುರ್ಲಕ್ಷಿಸಿ ನಡೆಯುವಂತಿಲ್ಲ.

ಇದು ನುಡಿಯ ವಿಷಯವಾಯಿತು. ಇನ್ನು ಸಾಹಿತ್ಯದ ದೃಷ್ಟಿಯಿಂದ ನೋಡುವಾ. ಇಲ್ಲಿಯೂ ವಿಲಕ್ಷಣಸ್ಥಿತಿಯೇ ಇದೆ. ಕನ್ನಡಿಗರ ಸಂಖ್ಯೆಯೇನೋ ಹೇಳಲು ೧೧೦ ಲಕ್ಷ. ಆದರೆ ಭಿನ್ನ ಆಡಳಿತಗಳ ಮೂಲಕ, ವರ್ಷಾನುವರ್ಷ ಭಿನ್ನ ಆಡಳಿತಕ್ಕೆ ಒಳಗಾಗಿರುವದರಿಂದ ಭಿನ್ನ ಹಿತ ಸಂಬಂಧಗಳು ಉಂಟಾದ ಮೂಲಕ, ನಮ್ಮಲ್ಲಿ ಭಾಷಾಭೇದಗಳುಂಟಾಗಿವೆ. ಒಂದು ಭಾಗದಲ್ಲಿ ರಚಿಸುವ ಪುಸ್ತಕವು ಇನ್ನೊಂದೆಡೆ ಸರಿಹೋಗುವದಿಲ್ಲ. ಮಾಧ್ಯಮಿಕ ಅಥವಾ ಉಚ್ಚ ಶಿಕ್ಷಣ ಕ್ರಮದಲ್ಲಿ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ಯೋಗ್ಯಸ್ಥಾನವಿಲ್ಲದ್ದರಿಂದ ಕನ್ನಡದಲ್ಲಿ ಶ್ರೇಷ್ಠ ತರಗತಿಯ ಪುಸ್ತಕಗಳು ಹೊರಡುವದು ಕಠಿಣವಾಗಿದೆ. ಯಾವದೇ ಲೇಖಕನು ಪುಸ್ತಕ ಬರೆದನೆಂದರೆ, ಅವನು ತನ್ನ ಪುಸ್ತಕವು ಇಲ್ಲವೆ ಪಠ್ಯಪುಸ್ತಕವಾಗುವಂತೆ ಯತ್ನಿಸಬೇಕು: ಅಂದರೆ ದೈನ್ಯಹೇಳಿಕೊಳ್ಳುತ್ತ ಹೋಗಬೇಕು—ಇಲ್ಲವೆ ಇದ್ದ ಬಿದ್ದ ಎರಡು ಮೂರು ಸಂಸ್ಥೆಗಳ ಕಡೆಗೆ ಧಾವಿಸಿ ಏನಾದರೂ ಪಾರಿತೋಷಿಕ ದೊರೆಯುವದೇನೋ ನೋಡಬೇಕು! ಯಾವದೇ ಪುಸ್ತಕವನ್ನು ನೋಡಿದರೂ ತೀರ ಲೋಕಪ್ರಿಯವಾಗುವ ಕಾದಂಬರಿಗಳನ್ನು ನೋಡಿದರೂ ಅವುಗಳ ಆರಂಭದಲ್ಲಿ, ಪ್ರಥಮ ಸಂಸ್ಕರಣ ೧,೦೦೦ ಪ್ರತಿ ಎಂದು ಇರುತ್ತದೆ. ಪಠ್ಯಪುಸ್ತಕಗಳನ್ನು ಬಿಟ್ಟರೆ ಎರಡನೆಯ ಸಂಸ್ಕರಣವಾದ ಪುಸ್ತಕಗಳೆಷ್ಟು? ಇದರ ಲೆಕ್ಕಮಾಡುವದು ಬಹಳ ಮನೋರಂಜಕವಾಗಬಹುದು. ಇದಲ್ಲದೆ ಸಾಹಿತ್ಯವನ್ನವಲಂಬಿಸಿ ಜೀವನ ಮಾಡುವವರು ಎಷ್ಟು ಜನರಿರುವರು? ಎಂಬುದನ್ನು ನೋಡುವದೂ ಬಹಳ ಬೋಧಕರವಾಗುವದು. ಇಷ್ಟೇ ಏಕೆ? ಕನ್ನಡದಲ್ಲಿ ಪುಸ್ತಕಗಳು ವರ್ಷವರ್ಷಕ್ಕೆ ಹುಟ್ಟಿದವೆಷ್ಟು? ಇತ್ಯಾದಿ ವಿಷಯವನ್ನು ಕಲೆಹಾಕಬೇಕೆಂದು ಯತ್ನಿಸಿದರೆ ಅದಕ್ಕಾಗಿ ತಕ್ಕ ಸಾಧನಗಳು ಕೂಡ ದೊರೆಯುವದಿಲ್ಲ. ಇಡೀ ಕನ್ನಡ ಸಾಹಿತ್ಯಕ್ಕೆ ಭೂತ, ವರ್ತಮಾನ ಮತ್ತು ಭವಿಷ್ಯ—ಒಂದು ಮಧ್ಯವರ್ತಿ ಪುಸ್ತಕಾಲಯವು ಅವಶ್ಯವಿದೆ. ಅಲ್ಲಿ ಈ ಬಗೆಯ ವಾರ್ಷಿಕ ಪರಿಶೀಲನಾದಿಗಳನ್ನು ಮಾಡುವದು ಅನುಕೂಲವಾಗುವದು.

ಪುಸ್ತಕಗಳ ಸಂಖ್ಯೆ ಒತ್ತಟ್ಟಿಗಿರಲಿ. ವರ್ಷವರ್ಷಕ್ಕೆ ಹೊರಡುವ ಪುಸ್ತಕಗಳ ವಿಷಯಗಳಾವವು? ಅವುಗಳ ಯೋಗ್ಯತೆಯೇನು? ಇದು ಹೆಚ್ಚು ಮಹತ್ವದ ಸಂಗತಿಯು. ಕಥೆ-ಕಾದಂಬರಿಗಳೆಷ್ಟು? ಐತಿಹಾಸಿಕ, ಚರಿತ್ರಾತ್ಮಕ ಪುಸ್ತಕಗಳೆಷ್ಟು? ತತ್ವ ವಿಷಯಕವೆಷ್ಟು? ವೈಜ್ಞಾನಿಕವೆಷ್ಟು? ಇತ್ಯಾದಿ ನೋಡಿದರೆ ಅದರಲ್ಲಿಯೂ ನಾವು ಬಹಳ ಹಿಂದೆ ಇರುವೆವೆಂದೇ ಹೇಳಬೇಕಾಗುವದು. ಇನ್ನು ಬರೆದ ಪುಸ್ತಕಗಳಲ್ಲಿ ಮೌಲಿಕವಾದವೆಷ್ಟು, ಭಾಷಾಂತರಗಳೆಷ್ಟು, ಪ್ರತಿಬಿಂಬಗಳೆಷ್ಟು, ವಾಙ್ಮಯ ಚೌರ್ಯ ಮಾಡಿದವೆಷ್ಟು, ನೆರೆ ಭಾಷೆಗಳಲ್ಲಿ ಭಾಷಾಂತರ ಹೊಂದಿದವೆಷ್ಟು? ಇತ್ಯಾದಿ ಮಾತುಗಳನ್ನು ಪರಿಶೀಲಿಸಿದರೆ ನಮ್ಮ ಸಾಹಿತ್ಯದ ಯೋಗ್ಯತೆ ತಿಳಿಯುವದು. ಅಂಥ ಇಂಥ ಸಾವಿರಾರು ಪುಸ್ತಕಗಳಿಗಿಂತ ಒಂದೇ ವಿಚಾರ ಪ್ರಚೋದಕವಾದ ಪುಸ್ತಕವು ಪ್ರಪಂಚವನ್ನೇ ತಲೆದೂಗಿಸಬಹುದು. ಹಾಗೂ ನಮ್ಮ ಸಾಹಿತ್ಯಕ್ಕೆ ಎಲ್ಲೆಲ್ಲಿಯೂ ಮನ್ನಣೆ ದೊರೆಯುವಂತೆ ಮಾಡಬಹುದು! ರವೀಂದ್ರನಾಥರ ಒಂದೇ 'ಗೀತಾಂಜಲಿ'ಯು ಬಂಗಾಲಿಯನ್ನು ಅತ್ಯುಚ್ಚಶಿಖರಕ್ಕೆ ಮುಟ್ಟಿಸಿಬಿಟ್ಟಿತು. ನಮ್ಮಲ್ಲಿ ಅಂಥ ಪುಸ್ತಕಗಳೇನಾದರೂ ಇವೆಯೋ ಎಂಬುದನ್ನು ವರ್ಷವರ್ಷಕ್ಕೆ ನಿರೀಕ್ಷಿಸುವದು ಅವಶ್ಯವಿರುವದು.

ಇನ್ನು ವೃತ್ತಪತ್ರಗಳು ವಿಶೇಷವಾಗಿ ದೈನಿಕಗಳು, ಭಾಷಾಪ್ರಚಾರ ದೃಷ್ಟಿಯಿಂದ ಹೆಚ್ಚು ಕೆಲಸ ಮಾಡುವವು. ಆದರೆ ಕನ್ನಡದಲ್ಲಿ ಅವುಗಳ ಪ್ರಸಾರವು ಕೂಡ ಬಹಳ ಕಡಮೆ. ಅವುಗಳ ಪ್ರಸಾರಕ್ಕೂ ಅನೇಕ ಅಡಚಣೆಗಳಿವೆ. ಒಂದು ದೈನಿಕವು ಕೂಡ ತನ್ನ ಕಾಲ ಮೇಲೆ ತಾನು ನಿಂತು ಒಳ್ಳೆ ಹೊಸ ಉಪಕ್ರಮಗಳನ್ನು ಮಾಡಿ ಜನರಲ್ಲಿ ನವವಿಚಾರಗಳನ್ನು ಬೀರುವ ಸಾಮರ್ಥ್ಯವುಳ್ಳದ್ದಿಲ್ಲ. ನಿತ್ಯ ಸುದ್ದಿ ಮುಂತಾದವುಗಳನ್ನು ಕೊಡುವ ಕಾರ್ಯವನ್ನಿಷ್ಟು ಅವು ಹೇಗಾದರೂ ಮಾಡುತ್ತಲಿವೆ ಇಷ್ಟೆ! ಸಾಹಿತ್ಯದ ದೃಷ್ಟಿಯಿಂದ ವೃತ್ತಪತ್ರಿಕೆಗಳು ಮಾಡಬಹುದಾದ ಕೆಲಸಗಳಲ್ಲಿ ಹೊಸ ಶಬ್ದಗಳ ಪ್ರಚಾರವೊಂದು ಬಹಳ ದೊಡ್ಡದಾಗಿದೆ. ಅವರು ನಿತ್ಯವೂ ಹೊಸವಿಚಾರಗಳನ್ನು ಪ್ರಕಟ

ಮಾಡಲೇಬೇಕಾಗುವದು. ಆಗ ಹೊಸ ಹೊಸ ಶಬ್ದಗಳನ್ನು ಉಪಯೋಗಿಸದೆ ಇದ್ದರೆ ವಿಧಿಯಿಲ್ಲ. ಇನ್ನೊಂದು ಕೆಲಸವೆಂದರೆ ಸಾಹಿತ್ಯ ಸಮಾಲೋಚನೆ. ಅದನ್ನು ವಾರ ಪತ್ರಿಕೆಗಳೂ, ಮಾಸಿಕ ಪತ್ರಿಕೆಗಳೂ ಚನ್ನಾಗಿ ಮಾಡಬಲ್ಲವು. ಅವು ಸದ್ಯಕ್ಕೆ ಸಾಕಷ್ಟು ನಿರಪೇಕ್ಷತೆಯಿಂದ, ಬುದ್ಧಿವಂತಿಕೆಯಿಂದ ಮಾಡುತ್ತಿಲ್ಲ ಎಂದು ಹೇಳಬಹುದು.

## ನೆಳಲು ಬೆಳಕು

ನಾನು ಈವರೆಗೆ ಆಡಿದುದನ್ನೆಲ್ಲ ಕೇಳಿ "ಇದೇನು ನಾವು ಮಾಡಿದ ಒಳ್ಳೆಯದನ್ನು ಹೇಳಲೇ ಇಲ್ಲ. ಮಾಡದೆ ಇದ್ದುದನ್ನೇ ಹೇಳಿದಿರಿ, ನಿರಾಶಾವಾದಕ್ಕೆ ಸಾಕಷ್ಟು ಅನುವುಗೊಟ್ಟಿರಿ" ಎಂದು ನೀವು ಎನ್ನಬಹುದು. ಅಹುದು; ನಾನು ಇಲ್ಲಿ ಕನ್ನಡವನ್ನು ಕುರಿತು ಕನ್ನಡಿಗರಲ್ಲಿ ಆಪ್ತಾಲೋಚನೆಮಾಡಲು ಬಂದಿದ್ದೇನೆ. ಯಾವ ಭಟ್ಟಂಗಿಯಾಗಿ ಬಂದಿಲ್ಲ. ಅಥವಾ ನಮ್ಮ ಬೆನ್ನು ನಾವೇ ಚಪ್ಪರಿಸಿಕೊಂಡು ಸಮಾಧಾನಹೊಂದಲು ಬಂದಿಲ್ಲ. 'ಆಲ್‌ಬೇಲ್' ಕೊಟ್ಟು ಹೋಗಲು ನೀವು ನನ್ನನ್ನು ಆರಿಸಿಲ್ಲ. ನಾವೂ ಇನ್ನೂ ಎಷ್ಟೋ ಪ್ರಯತ್ನಶೀಲರಾಗಬೇಕಾಗಿದೆ. ಇದನ್ನು ತಿಳಿದುಕೊಳ್ಳುವದೇ ನಮ್ಮ ಮುಖ್ಯ ಗುರಿ. ನಾವು ಮಾಡಿದುದು ಕಡ್ಡಿಯಷ್ಟು, ಮಾಡತಕ್ಕದ್ದು ಗುಡ್ಡದಷ್ಟು. ಹೀಗಿರುವಾಗ ಪ್ರಶಂಸೆಯಿಂದ ಫಲವಿಲ್ಲ.

ನಾನು ನೆಳಲನ್ನು ಬಣ್ಣಿಸಿದಂತೆ ಬೆಳಕನ್ನು ಯಥಾರ್ಥವಾಗಿ ಬಣ್ಣಿಸಬಲ್ಲೆ. ನಿಜವಾಗಿ ಇಷ್ಟೆಲ್ಲ ಘೋರವಾದ ಅಡಚಣೆಗಳಿದ್ದರೂ ನಿತ್ಯ ಅವರಮೇಲೆ ಆಘಾತಗಳಾಗುತ್ತಿದ್ದರೂ ಕನ್ನಡವು ಉಳಿದು ಬದುಕಿಬಾಳಿ ಬೆಳೆಯುತ್ತಲಿದೆ. ಇದೇನು ಸಣ್ಣಮಾತಲ್ಲ. ೧೯೨೧ರಲ್ಲಿಯ ಕನ್ನಡಿಗರ ಸಂಖ್ಯೆಗಿಂತ ೧೯೩೧ರಲ್ಲಿಯ ಕನ್ನಡಿಗರ ಸಂಖ್ಯೆ ೬ಲಕ್ಷದಿಂದ ಬೆಳೆದಿದೆ. ದೈನಿಕ ಪತ್ರಗಳು ಈಗ ಹೆಚ್ಚು ಪ್ರಸಾರಹೊಂದಿವೆ. ಇಷ್ಟೇ ಅಲ್ಲದೆ ಅವು ಎಷ್ಟೋ ಉತ್ತಮಗೊಂಡು ನೆರೆಪ್ರಾಂತದಲ್ಲಿಯ, ತೆಲುಗು, ತಮಿಳು ಪತ್ರಗಳನ್ನು ಸಂಖ್ಯೆಯಲ್ಲಲ್ಲದಿದ್ದರೂ ಗುಣದಲ್ಲಿ ಸರಿಗಟ್ಟುತ್ತಿವೆ. ಸಾಪ್ತಾಹಿಕಗಳು ಚಿತ್ರಗಳಿಂದ ಹಾಗೂ ವಿಷಯ ವೈವಿಧ್ಯದಿಂದ ಹೆಚ್ಚುಲೋಕಪ್ರಿಯವಾಗಿವೆ. ಅಲ್ಲಲ್ಲಿ ಕರ್ನಾಟಕಸಂಘಗಳು ಹೊರಟು ಅವು ಆಸ್ಥೆಯಿಂದ, ಪ್ರೇಮದಿಂದ ಕನ್ನಡ ನುಡಿಯ ಬಾವುಟಗಳನ್ನು ಎತ್ತಿ ಹಿಡಿಯುತ್ತಿವೆ. ಕಥೆ-ಕಾದಂಬರಿಗಳು ದೊಡ್ಡವಿಲ್ಲದಿದ್ದರೂ ಸಣ್ಣವು ಹೆಚ್ಚಾಗಿ ಮತ್ತು ಮುದ್ದಾಗಿ ಹೊರಡುತ್ತಲಿವೆ. ಅಷ್ಟರಲ್ಲಿ ಕವಿಗಳೂ ಹಿಂದೆ ಬಿದ್ದಿಲ್ಲ. ಹೊಸ ವಿಚಾರಗಳನ್ನು ಹೊಸ ಶೈಲಿಯಲ್ಲಿ ಮುಂದಿಟ್ಟು ಜನರ ಮೆಚ್ಚುಗೆಯನ್ನು ಅವರು ಪಡೆಯುತ್ತಲಿದ್ದಾರೆ. ಅಲ್ಲಲ್ಲಿ ಅಭಿಮಾನಶಾಲಿಗಳಾದ ಹಲವು ಕನ್ನಡಿಗರು ಕನ್ನಡದ ಹಕ್ಕುಗಳಿಗಾಗಿ ಹೊಡೆದಾಡಿ ಮುಂದಡಿ ಇಡುತ್ತಿದ್ದಾರೆ.

## ಅಸಂತೋಷವು ಬೇಕು

ಆದರೆ ಇದೆಲ್ಲ ಸಾಕಷ್ಟಿಲ್ಲ. ಅಲ್ಪಸಂತೋಷಿಗಳಾಗುವದು ಬೇಡ. 'ಅಸಂತೋಷಃ ಶ್ರಿಯೋಮೂಲಂ' ಎಂಬುದನ್ನು ಲಕ್ಷಿಸುವಾ. ನೆರೆಪ್ರಾಂತದವರ ಪ್ರಗತಿಯನ್ನು ನೋಡುವಾ. ಅದಕ್ಕೂ ಆಚೆಗೆಂದರೆ ಬಂಗಾಲಿ ಇಂಗ್ಲೀಷ ಮುಂತಾದ ಭಾಷೆಗಳ ಪ್ರಗತಿಯನ್ನು ನಮ್ಮ ಕಣ್ಣೆದುರು ಇಟ್ಟುಕೊಳ್ಳುವಾ. ಅಂದರೆ ನಮ್ಮಿಂದ ಏನಾದರೂ ಆಗಬಹುದು. ಎಲ್ಲವೂ ನೆಟ್ಟಗೆ ನಡೆದಿದೆ ಎಂದು ತಿಳಿಯುವ ದಿನಗಳು ಕನ್ನಡದ ಮಟ್ಟಿಗೆ ಇನ್ನೂ ಬಂದಿಲ್ಲ.

## ಲೇಖಕರ ವಾಚಕರ ವೃತ್ತಿ

ವಿಶಾಲ ಅರ್ಥದಲ್ಲಿ ಸಾಹಿತ್ಯವೆಂಬುದು ಒಂದು ದೃಷ್ಟಿಯಿಂದ ಲೇಖಕರ ಹಾಗೂ ವಾಚಕರ ನಡುವಿನ ಕೊಡಕೊಳ್ಳುವ ವಸ್ತು, ಲೇಖಕರು ವಿವಿಧ ರೂಪಗಳಲ್ಲಿ ಸಾಹಿತ್ಯವನ್ನು ವಾಚಕರಿಗೆ ಕೊಡುವರು. ವಾಚಕರು ಅದರಿಂದ ಆನಂದಪಡುವರು. ಅವರಿಗೆ ಹಣವನ್ನು ಪ್ರಸಂಗವಶಾತ್ ಪ್ರಶಂಸೆಯನ್ನು ಕೊಟ್ಟು ಋಣಮುಕ್ತರಾಗುವರು. ವ್ಯವಹಾರದಲ್ಲಿ ಇವರಿಬ್ಬರ ವೃತ್ತಿಯೇನಿರಬೇಕೆಂಬುದು ಮಹತ್ವದ್ದಾಗಿದೆ. ಸದ್ಯಕ್ಕೆ ಅನೇಕ ಲೇಖಕರ ವಾಚಕರ ವೃತ್ತಿಯು ಅಷ್ಟೊಂದು ಸಮಾಧಾನಕರವಿಲ್ಲ. ಹಲವರದು ವಿಷಾದಾಸ್ಪದವಿದೆ ಎಂದು ಹೇಳಬಹುದು. ಈಹೊತ್ತು ರಾತ್ರಿ ಕುಳಿತು ಅಲ್ಲಿಂದಿಲ್ಲಿಂದ ವಿಚಾರಗಳನ್ನೋ ಶೈಲಿಯನ್ನೋ ಕಳವುಮಾಡಿ, ತಿದ್ದಿತೀಡಿ ಬರೆದು, ಮರುದಿವಸ ವೃತ್ತಪತ್ರದಲ್ಲಿ ಬರದೆಹೋದರೆ ಸಂಪಾದಕ ಕುಲಕೋಟಿ ಉದ್ಧಾರಮಾಡುವ ಅನೇಕ ಲೇಖಕರನ್ನು ನಾನು ಕಂಡಿದ್ದೇನೆ; ನಾನು ಸಂಪಾದಕನ ಕೆಲಸ ಮಾಡುತ್ತಿರುವದರಿಂದ ಹಾಗೆ ಉದ್ಧಾರಾದವರಲ್ಲಿ ಆಗುವವರಲ್ಲಿ ನಾನೂ ಒಬ್ಬನು! ಇದೇ ಬಗೆಯ ಕವಿಗಳು, ಪುಸ್ತಕ ಲೇಖಕರು ಇದ್ದಾರೆ. ಸಾಹಿತ್ಯದ ಸೇನೆಯೆಂದು ಹೊರಟು ಒಂದು ಪತ್ರವನ್ನೋ ಒಂದು ಪುಸ್ತಕ ಮಾಲೆಯನ್ನೋ ಕಟ್ಟಿಕೊಂಡು ಕನ್ನಡದ ಅಭಿಮಾನವಿದ್ದರೆ ನೀವು ಕೊಳ್ಳಲಿಕ್ಕೆ ಬೇಕು ಎಂದು ಹೇಳುವವರೂ ಹಲವರಿದ್ದಾರೆ. ಆದರೆ ನಾವು ಇವರಿಗೆ ಪ್ರಾರ್ಥಿಸುವುದೇನೆಂದರೆ—'ಜೀಯಾ ಪೇಟೆಗೆ ಹೋಗುವ ಮೊದಲು ಪೇಟೆಯಲ್ಲಿ ಮಾರತಕ್ಕಹದೇನಾದರೂ ನನ್ನಲ್ಲಿದೆಯೋ?' ಎಂಬ ಆತ್ಮನಿರೀಕ್ಷಣೆಮಾಡಿಕೊಂಡು ಮುಂದೆ ಹೆಜ್ಜೆ ಇಡು, ಕೇವಲ ಅಭಿಮಾನದಿಂದ ಕೊಳ್ಳುವ ದಿನಗಳು ಈಗ ಉಳಿದಿಲ್ಲ'. ನಮ್ಮ ಲೇಖದ ಹಾದಿಯನ್ನು ಆ ಸಂಪಾದಕನು ಕಾಯುತ್ತಿದ್ದರೆ ನಮ್ಮದನ್ನೇ ಹಾಕುತ್ತಿದ್ದನು. ಆದರೆ ಬೇರೆ ಲೇಖಗಳಿವೆ, ಬೇರೆ ಲೇಖಕರಿದ್ದಾರೆ. ಅದನ್ನು ತಿಳಿದು ನಾವು ಸಿಟ್ಟಾಗದೆ ಹೆಚ್ಚುಯೋಗ್ಯರಾಗಬೇಕು. ಪೂರ್ವಸಾಹಿತಿಗಳು ತಮ್ಮ ಹೆಸರು ವೃತ್ತಪತ್ರಗಳಲ್ಲಿ ಬರಲಿ ಎಂದು ಹವಣಿಸಲಿಲ್ಲ! ಎಷ್ಟೋ ಸಾಹಿತಿಗಳ ಪೂರ್ಣ ಹೆಸರು ನಮಗೆ ಇನ್ನೂ ಗೊತ್ತಿಲ್ಲ. ಆದರೆ ಅವರ ಕಲಾಕೃತಿಗಳು ಅಜರಾಮರವಾಗಿವೆ. ಹಾಗೆ ಆಗುವ ಧ್ಯೇಯವಿರಬೇಕೋ ಅಥವಾ ದೈನಿಕ ಪತ್ರದಲ್ಲಿ ಹೆಸರು ಬಂದು ಮುಂದೆ ಆ ದೈನಿಕ ಪತ್ರದ ಗತಿಯನ್ನು ಸೇರುವದೇ ಧ್ಯೇಯವಿರಬೇಕೋ ಇದನ್ನು ನಾವು ಯೋಚಿಸಲಿಕ್ಕೆ ಬೇಕು. ಬರೆಯುವ ಪುರಸತಿಗೆ ಇಲ್ಲದೆ, ಈಷ್ಯೆಯಾದ ಬೆಕ್ಕು ಮೂಲೆಮೂಲೆ ಸುತ್ತುವಂತೆ, ಲೇಖಕರು ವೃತ್ತ ಪತ್ರಗಳ ಕಚೇರಿಗೆ ಎಡತಾಕಿದರೆ ಅದರಲ್ಲಿ ಯಾರಿಗೆ ಗೌರವ? ಅದರಿಂದ ಯಾವ ಉದ್ದೇಶ ಸಾಧನ? ಈವರೆಗೆ ಆದ ಉತ್ತಮೋತ್ತಮ ಲೇಖಕರನೇಕರು, ಈಗ್ಯೂ ಒಂದೇನಾದರೂ ಬರೆಯಬೇಕಾದರೆ ನಾಲ್ಕುಸಾರೆ ತಿದ್ದುತ್ತಾರೆ. ಎಷ್ಟೋಬಾರಿ ಹರಿದೊಗೆದು ಮತ್ತೆ ಬರೆಯುತ್ತಾರೆ. ಇದನ್ನೆಲ್ಲ ನಾವು ಲಕ್ಷಿಸಲಿಕ್ಕೆ ಬೇಕು.

ಹಲವು ಲೇಖಕರು ಲೋಕಪ್ರಿಯರಾಗಬಯಸಿ ಬೇಕಾದ್ದನ್ನು ಬರೆಯುವರು. ಕೇವಲ ರಂಜನೆಯೇ ಇವರ ಉದ್ದೇಶವಿರಬಹುದು. ಲೇಖಕರ ಈ ವೃತ್ತಿಯು ನಮ್ಮನ್ನು ಹಾಳುಮಾಡದೆ ಇರದು. ಲೋಕಪ್ರಿಯವಾಗುವದೇ ಲೇಖಕನ ಧ್ಯೇಯವಲ್ಲ. ಲೇಖಕನ ಧ್ಯೇಯವು ಇವಕ್ಕೂ ಉಚ್ಚತರವಾದುದು, ಒಟ್ಟಿಗೆ ಜನಮನಗಳ ಮಟ್ಟವನ್ನು ಎಲ್ಲ ರೀತಿಯಿಂದ ಮೇಲಕ್ಕೇರಿಸುವದೇ ಅವನ ಧ್ಯೇಯವೆಂದು ಹೇಳಬಹುದು. ಅನೇಕ ಉತ್ತಮ ಲೇಖಕರು ಲೋಕಪ್ರಿಯರಿರಲಿಲ್ಲ. ಈಗ ಲೋಕಪ್ರಿಯರಾದ ಅನೇಕ ಲೇಖಕರು ಲೋಕಪ್ರಿಯರಿರಲಿಲ್ಲ. ಇದನ್ನು ನಾವು ಲಕ್ಷಿಸಲಿಕ್ಕೆಬೇಕು. ಸತ್ಯದೃಷ್ಟಿ, ಜನರ ಭಾವಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ, ಸಾಹಿತ್ಯಕಲೆ, ಇವು ಲೇಖಕರಲ್ಲಿ ಮುಖ್ಯವಾಗಿ ಅವಶ್ಯ. ಲೇಖಕರಿಗೆ ಅನ್ವಯಿಸುವವು. ಅದರ ಬಗ್ಗೆ ಬೇರೆ ಬರೆಯ ಬೇಕಾಗಿಲ್ಲ.

ಇನ್ನು ನಮ್ಮ ವಾಚಕರನ್ನು ನಿರೀಕ್ಷಿಸಿದರೆ ಅಲ್ಲಿಯೂ ಇಷ್ಟವಾದ ವೃತ್ತಿ ಕಂಡು ಬರುವದಿಲ್ಲ. ಪುಸ್ತಕ, ವೃತ್ತಪತ್ರ ಇವುಗಳ ಬಗ್ಗೆ ನಮ್ಮ ನೀತಿಯು ಬಹಳ ನಿಂದಾಸ್ಪದವಿದೆ. ಪುಸ್ತಕ ಕೊಳ್ಳಬಾರದು, ಕೊಂಡರೆ ಓದಬಾರದು, ಓದಿದರೆ ನೆನಪಿಡಬಾರದು. ಕಡತಂದ ಪುಸ್ತಕ ತಿರುಗಿ ಕೊಡಬಾರದು, ತಂದ ಪುಸ್ತಕ ವ್ಯವಸ್ಥೆಯಿಂದ ಇಡಬಾರದು, ಈನೀತಿಯನ್ನು ಅನುಸರಿಸುವವರೇ ಬಹಳ! ಈಗ ಮನೆ ಮನೆ ಮಾರಾಟಕ್ಕೆ ಪುಸ್ತಕಗಳು ಬರುವದನ್ನು ಕಂಡು ವಾಚಕರು ಕಾಯಿಪಲ್ಲೆಯಂತೆ ಅದರ ಧಾರಣಿಕೇಳಲು ಪ್ರಾರಂಭಿಸಿದ್ದಾರೆ. ವೃತ್ತಪತ್ರ ವಾಚಕರ ಗತಿಯೂ ಇದೇ. 'ನಿಮ್ಮಲ್ಲಿ ವೃತ್ತಪತ್ರ ಬರುತ್ತಿದೆಯೇ' ಎಂದು ಕೇಳಿದರೆ, ನಮ್ಮ ಓಣಿಯಲ್ಲಿ ಬರುತ್ತಿದೆ ಎಂದು ಹೇಳುವವರು ಅನೇಕರು ಸಿಗುವರು. ವೃತ್ತಪತ್ರವೆಂಬುದೊಂದು ತಾವು ಸ್ವತಃ ಕೊಂಡು ಓದತಕ್ಕ ವಿಷಯ ಎಂಬುದನ್ನು ನಮ್ಮವರು ಇನ್ನೂ ಅರಿತುಕೊಂಡಿಲ್ಲ. ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಲ್ಲಿ ನಾವು ನೋಡಿದರೆ ಕೂಲಿಕಾರರ ವೃತ್ತಿಯ ಗಂಡಹೆಂಡರು ಕೂಡ ಪ್ರತ್ಯೇಕ ಪತ್ರಗಳನ್ನು ಕೊಂಡು ಓದುವ ಪರಿಪಾಠವಿದೆ. ಕೊಳ್ಳದೆ ಇದ್ದ ಬಗ್ಗೆ

ಮಾಡಲೇಬೇಕಾಗುವದು. ಆಗ ಹೊಸ ಹೊಸ ಶಬ್ದಗಳನ್ನು ಉಪಯೋಗಿಸದೆ ಇದ್ದರೆ ವಿಧಿಯಿಲ್ಲ. ಇನ್ನೊಂದು ಕೆಲಸವೆಂದರೆ ಸಾಹಿತ್ಯ ಸಮಾಲೋಚನೆ. ಅದನ್ನು ವಾರ ಪತ್ರಿಕೆಗಳೂ, ಮಾಸಿಕ ಪತ್ರಿಕೆಗಳೂ ಚನ್ನಾಗಿ ಮಾಡಬಲ್ಲವು. ಅವು ಸದ್ಯಕ್ಕೆ ಸಾಕಷ್ಟು ನಿರಪೇಕ್ಷತೆಯಿಂದ, ಬುದ್ಧಿವಂತಿಕೆಯಿಂದ ಮಾಡುತ್ತಿಲ್ಲ ಎಂದು ಹೇಳಬಹುದು.

## ನೆಳಲು ಬೆಳಕು

ನಾನು ಈವರೆಗೆ ಆಡಿದುದನ್ನೆಲ್ಲ ಕೇಳಿ "ಇದೇನು ನಾವು ಮಾಡಿದ ಒಳ್ಳೆಯದನ್ನು ಹೇಳಲೇ ಇಲ್ಲ. ಮಾಡದೆ ಇದ್ದುದನ್ನೇ ಹೇಳಿದಿರಿ, ನಿರಾಶಾವಾದಕ್ಕೆ ಸಾಕಷ್ಟು ಅನುವುಗೊಟ್ಟಿರಿ" ಎಂದು ನೀವು ಎನ್ನಬಹುದು. ಅಹುದು; ನಾನು ಇಲ್ಲಿ ಕನ್ನಡವನ್ನು ಕುರಿತು ಕನ್ನಡಿಗರಲ್ಲಿ ಆಪ್ತಾಲೋಚನೆಮಾಡಲು ಬಂದಿದ್ದೇನೆ. ಯಾರ ಭಟ್ಟಂಗಿಯಾಗಿ ಬಂದಿಲ್ಲ. ಅಥವಾ ನಮ್ಮ ಬೆನ್ನು ನಾವೇ ಚಪ್ಪರಿಸಿಕೊಂಡು ಸಮಾಧಾನಹೊಂದಲು ಬಂದಿಲ್ಲ. 'ಆಲ್ ಬೇಲ್' ಕೊಟ್ಟು ಹೋಗಲು ನೀವು ನನ್ನನ್ನು ಆರಿಸಿಲ್ಲ. ನಾವೂ ಇನ್ನೂ ಎಷ್ಟೋ ಪ್ರಯತ್ನಶೀಲರಾಗಬೇಕಾಗಿದೆ. ಇದನ್ನು ತಿಳಿದುಕೊಳ್ಳುವದೇ ನಮ್ಮ ಮುಖ್ಯ ಗುರಿ. ನಾವು ಮಾಡಿದುದು ಕಡ್ಡಿಯಷ್ಟು, ಮಾಡತಕ್ಕದ್ದು ಗುಡ್ಡದಷ್ಟು. ಹೀಗಿರುವಾಗ ಪ್ರಶಂಸೆಯಿಂದ ಫಲವಿಲ್ಲ.

ನಾನು ನೆಳಲನ್ನು ಬಣ್ಣಿಸಿದಂತೆ ಬೆಳಕನ್ನು ಯಥಾರ್ಥವಾಗಿ ಬಣ್ಣಿಸಬಲ್ಲೆ. ನಿಜವಾಗಿ ಇಷ್ಟೆಲ್ಲ ಘೋರವಾದ ಅಡಚಣಿಗಳಿದ್ದರೂ ನಿತ್ಯ ಅದರಮೇಲೆ ಆಘಾತಗಳಾಗುತ್ತಿದ್ದರೂ ಕನ್ನಡವು ಉಳಿದು ಬದುಕಿಬಾಳಿ ಬೆಳೆಯುತ್ತಲಿದೆ. ಇದೇನು ಸಣ್ಣ ಮಾತಲ್ಲ. ೧೯೨೧ರಲ್ಲಿಯ ಕನ್ನಡಿಗರ ಸಂಖ್ಯೆಗಿಂತ ೧೯೩೧ರಲ್ಲಿಯ ಕನ್ನಡಿಗರ ಸಂಖ್ಯೆ ೬ ಲಕ್ಷದಿಂದ ಬೆಳೆದಿದೆ. ದೈನಿಕ ಪತ್ರಗಳು ಈಗ ಹೆಚ್ಚು ಪ್ರಸಾರಹೊಂದಿವೆ. ಇಷ್ಟೇ ಅಲ್ಲದೆ ಅವು ಎಷ್ಟೋ ಉತ್ತಮಗೊಂಡು ನೆರೆ ಪ್ರಾಂತದಲ್ಲಿಯ, ತೆಲುಗು, ತಮಿಳು ಪತ್ರಗಳನ್ನು ಸಂಖ್ಯೆಯಲ್ಲಲ್ಲದಿದ್ದರೂ ಗುಣದಲ್ಲಿ ಸರಿಗಟ್ಟುತ್ತಿವೆ. ಸಾಪ್ತಾಹಿಕಗಳು ಚಿತ್ರಗಳಿಂದ ಹಾಗೂ ವಿಷಯ ವೈವಿಧ್ಯದಿಂದ ಹೆಚ್ಚು ಲೋಕಪ್ರಿಯವಾಗಿವೆ. ಅಲ್ಲಲ್ಲಿ ಕರ್ನಾಟಕಸಂಘಗಳು ಹೊರಟು ಅವು ಆಸ್ಥೆಯಿಂದ, ಪ್ರೇಮದಿಂದ ಕನ್ನಡ ನುಡಿಯ ಬಾವುಟಗಳನ್ನು ಎತ್ತಿ ಹಿಡಿಯುತ್ತಿವೆ. ಕಥೆ-ಕಾದಂಬರಿಗಳು ದೊಡ್ಡವಿಲ್ಲದಿದ್ದರೂ ಸಣ್ಣವು ಹೆಚ್ಚಾಗಿ ಮತ್ತು ಮುದ್ದಾಗಿ ಹೊರಡುತ್ತಲಿವೆ. ಅಷ್ಟರಲ್ಲಿ ಕವಿಗಳೂ ಹಿಂದೆ ಬಿದ್ದಿಲ್ಲ. ಹೊಸ ವಿಚಾರಗಳನ್ನು ಹೊಸ ಶೈಲಿಯಲ್ಲಿ ಮುಂದಿಟ್ಟು ಜನರ ಮೆಚ್ಚುಗೆಯನ್ನು ಅವರು ಪಡೆಯುತ್ತಲಿದ್ದಾರೆ. ಅಲ್ಲಲ್ಲಿ ಅಭಿಮಾನಶಾಲಿಗಳಾದ ಹಲವು ಕನ್ನಡಿಗರು ಕನ್ನಡದ ಹಕ್ಕುಗಳಿಗಾಗಿ ಹೊಡೆದಾಡಿ ಮುಂದಡಿ ಇಡುತ್ತಿದ್ದಾರೆ.

## ಅಸಂತೋಷವು ಬೇಕು

ಆದರೆ ಇದೆಲ್ಲ ಸಾಕಷ್ಟಿಲ್ಲ. ಅಲ್ಪಸಂತೋಷಿಗಳಾಗುವದು ಬೇಡ. 'ಅಸಂತೋಷಃ ಶ್ರಿಯೋಮೂಲಂ' ಎಂಬುದನ್ನು ಲಕ್ಷಿಸುವಾ. ನೆರೆ ಪ್ರಾಂತದವರ ಪ್ರಗತಿಯನ್ನು ನೋಡುವಾ. ಅದಕ್ಕೂ ಆಚೆಗೆಂದರೆ ಬಂಗಾಲಿ ಇಂಗ್ಲೀಷ ಮುಂತಾದ ಭಾಷೆಗಳ ಪ್ರಗತಿಯನ್ನು ನಮ್ಮ ಕಣ್ಣೆದುರು ಇಟ್ಟುಕೊಳ್ಳುವಾ. ಅಂದರೆ ನಮ್ಮಿಂದ ಏನಾದರೂ ಆಗಬಹುದು. ಎಲ್ಲವೂ ನೆಟ್ಟಗೆ ನಡೆದಿದೆ ಎಂದು ತಿಳಿಯುವ ದಿನಗಳು ಕನ್ನಡದ ಮಟ್ಟಿಗೆ ಇನ್ನೂ ಬಂದಿಲ್ಲ.

## ಲೇಖಕರ ವಾಚಕರ ವೃತ್ತಿ

ವಿಶಾಲ ಅರ್ಥದಲ್ಲಿ ಸಾಹಿತ್ಯವೆಂಬುದು ಒಂದು ದೃಷ್ಟಿಯಿಂದ ಲೇಖಕರ ಹಾಗೂ ವಾಚಕರ ನಡುವಿನ ಕೊಡಕೊಳ್ಳುವ ವಸ್ತು, ಲೇಖಕರು ವಿವಿಧ ರೂಪಗಳಲ್ಲಿ ಸಾಹಿತ್ಯವನ್ನು ವಾಚಕರಿಗೆ ಕೊಡುವರು. ವಾಚಕರು ಅದರಿಂದ ಆನಂದಪಡುವರು. ಅವರಿಗೆ ಹಣವನ್ನು ಪ್ರಸಂಗವಶಾತ್ ಪ್ರಶಂಸೆಯನ್ನು 'ಕೊಟ್ಟು' ಋಣಮುಕ್ತರಾಗುವರು. ವ್ಯವಹಾರದಲ್ಲಿ ಇವರಿಬ್ಬರ ವೃತ್ತಿಯೇನಿರಬೇಕೆಂಬುದು ಮಹತ್ವದ್ದಾಗಿದೆ. ಸದ್ಯಕ್ಕೆ ಅನೇಕ ಲೇಖಕರ ವಾಚಕರ ವೃತ್ತಿಯು ಅಷ್ಟೊಂದು ಸಮಾಧಾನಕರವಿಲ್ಲ. ಹಲವರದು ವಿಷಾದಾಸ್ಪದವಿದೆ ಎಂದು ಹೇಳಬಹುದು. ಈಹೊತ್ತು ರಾತ್ರಿ ಕುಳಿತು ಅಲ್ಲಿಂದಿಲ್ಲಿಂದ ವಿಚಾರಗಳನ್ನೋ ಶೈಲಿಯನ್ನೋ ಕಳವುಮಾಡಿ, ತಿದ್ದಿತೀಡಿ ಬರೆದು, ಮರುದಿವಸ ವೃತ್ತಪತ್ರದಲ್ಲಿ ಬರದೆಹೋದರೆ ಸಂಪಾದಕ ಕುಲಕೋಟಿ ಉದ್ಧಾರಮಾಡುವ ಅನೇಕ ಲೇಖಕರನ್ನು ನಾನು ಕಂಡಿದ್ದೇನೆ; ನಾನು ಸಂಪಾದಕನ ಕೆಲಸ ಮಾಡುತ್ತಿರುವದರಿಂದ ಹಾಗೆ ಉದ್ಧಾರಾದವರಲ್ಲಿ ಆಗುವವರಲ್ಲಿ ನಾನೂ ಒಬ್ಬನು! ಇದೇ ಬಗೆಯು ಕವಿಗಳು, ಪುಸ್ತಕ ಲೇಖಕರು ಇದ್ದಾರೆ. ಸಾಹಿತ್ಯದ ಸೇನೆಯೆಂದು ಹೊರಟು ಒಂದು ಪತ್ರವನ್ನೋ ಒಂದು ಪುಸ್ತಕ ಮಾಲೆಯನ್ನೋ ಕಟ್ಟಿಕೊಂಡು ಕನ್ನಡದ ಅಭಿಮಾನವಿದ್ದರೆ ನೀವು ಕೊಳ್ಳಲಿಕ್ಕೆ ಬೇಕು ಎಂದು ಹೇಳುವವರೂ ಹಲವರಿದ್ದಾರೆ. ಆದರೆ ನಾವು ಇವರಿಗೆ ಪ್ರಾರ್ಥಿಸುವುದೇನೆಂದರೆ—'ಜೀಯಾ ಪೇಟೆಗೆ ಹೋಗುವ ಮೊದಲು ಪೇಟೆಯಲ್ಲಿ ಮಾರತಕ್ಕಹದೇನಾದರೂ ನನ್ನಲ್ಲಿದೆಯೋ?' ಎಂಬ ಆತ್ಮನಿರೀಕ್ಷಣೆಮಾಡಿಕೊಂಡು ಮುಂದೆ ಹೆಜ್ಜೆ ಇಡು, ಕೇವಲ ಅಭಿಮಾನದಿಂದ ಕೊಳ್ಳುವ ದಿನಗಳು ಈಗ ಉಳಿದಿಲ್ಲ'. ನಮ್ಮ ಲೇಖದ ಹಾದಿಯನ್ನು ಆ ಸಂಪಾದಕನು ಕಾಯುತ್ತಿದ್ದರೆ ನಮ್ಮದನ್ನೇ ಹಾಕುತ್ತಿದ್ದನು. ಆದರೆ ಬೇರೆ ಲೇಖಗಳಿವೆ, ಬೇರೆ ಲೇಖಕರಿದ್ದಾರೆ. ಅದನ್ನು ತಿಳಿದು ನಾವು ಸಿಟ್ಟಾಗದೆ ಹೆಚ್ಚು ಯೋಗ್ಯರಾಗಬೇಕು. ಪೂರ್ವಸಾಹಿತಿಗಳು ತಮ್ಮ ಹೆಸರು ವೃತ್ತಪತ್ರಗಳಲ್ಲಿ ಬರಲಿ ಎಂದು ಹವಣಿಸಲಿಲ್ಲ! ಎಷ್ಟೋ ಸಾಹಿತಿಗಳ ಪೂರ್ಣ ಹೆಸರು ನಮಗೆ ಇನ್ನೂ ಗೊತ್ತಿಲ್ಲ. ಆದರೆ ಅವರ ಕಲಾಕೃತಿಗಳು ಅಜರಾಮರವಾಗಿವೆ. ಹಾಗೆ ಆಗುವ ಧ್ಯೇಯವಿರಬೇಕೋ ಅಥವಾ ದೈನಿಕ ಪತ್ರದಲ್ಲಿ ಹೆಸರು ಬಂದು ಮುಂದೆ ಆ ದೈನಿಕ ಪತ್ರದ ಗತಿಯನ್ನು ಸೇರುವದೇ ಧ್ಯೇಯವಿರಬೇಕೋ ಇದನ್ನು ನಾವು ಯೋಚಿಸಲಿಕ್ಕೆ ಬೇಕು. ಬರೆಯುವ ಪುರಸತಿಗೆ ಇಲ್ಲದೆ, ಈರ್ಷ್ಯೆಯಾದ ಬೆಕ್ಕು ಮೂಲೆಮೂಲೆ ಸುತ್ತುವಂತೆ, ಲೇಖಕರು ವೃತ್ತ ಪತ್ರಗಳ ಕಚೇರಿಗೆ ಎಡತಾಕಿದರೆ ಅದರಲ್ಲಿ ಯಾರಿಗೆ ಗೌರವ? ಅದರಿಂದ ಯಾವ ಉದ್ದೇಶ ಸಾಧನ? ಈವರೆಗೆ ಆದ ಉತ್ತಮೋತ್ತಮ ಲೇಖಕರನೇಕರು, ಈಗ್ಯೂ ಒಂದೇನಾದರೂ ಬರೆಯಬೇಕಾದರೆ ನಾಲ್ಕುಸಾರೆ ತಿದ್ದುತ್ತಾರೆ. ಎಷ್ಟೋಬಾರಿ ಹರಿದೊಗೆದು ಮತ್ತೆ ಬರೆಯುತ್ತಾರೆ. ಇದನ್ನೆಲ್ಲ ನಾವು ಲಕ್ಷಿಸಲಿಕ್ಕೆ ಬೇಕು.

ಹಲವು ಲೇಖಕರು ಲೋಕಪ್ರಿಯರಾಗಬಯಸಿ ಬೇಕಾದ್ದನ್ನು ಬರೆಯುವರು. ಕೇವಲ ರಂಜನೆಯೇ ಇವರ ಉದ್ದೇಶವಿರಬಹುದು. ಲೇಖಕರ ಈ ವೃತ್ತಿಯು ನಮ್ಮನ್ನು ಹಾಳುಮಾಡದೆ ಇರದು. ಲೋಕಪ್ರಿಯವಾಗುವದೇ ಲೇಖಕನ ಧ್ಯೇಯವಲ್ಲ. ಲೇಖಕನ ಧ್ಯೇಯವು ಇದಕ್ಕೂ ಉಚ್ಚತರವಾದುದು, ಒಟ್ಟಿಗೆ ಜನಮನಗಳ ಮಟ್ಟವನ್ನು ಎಲ್ಲ ರೀತಿಯಿಂದ ಮೇಲಕ್ಕೇರಿಸುವದೇ ಅವನ ಧ್ಯೇಯವೆಂದು ಹೇಳಬಹುದು. ಅನೇಕ ಉತ್ತಮ ಲೇಖಕರು ಲೋಕಪ್ರಿಯರಿರಲಿಲ್ಲ. ಈಗ ಲೋಕಪ್ರಿಯರಾದ ಅನೇಕ ಲೇಖಕರು ಲೋಕಪ್ರಿಯರಿರಲಿಲ್ಲ. ಇದನ್ನು ನಾವು ಲಕ್ಷಿಸಲಿಕ್ಕೆಬೇಕು. ಸತ್ಯದೃಷ್ಟಿ, ಜನರ ಭಾವಬಯಕೆಗಳ ಬಗ್ಗೆ ಆಳವಾದ ಸಹಾನುಭೂತಿ, ಸಾಹಿತ್ಯಕಲೆ, ಇವು ಲೇಖಕರಲ್ಲಿ ಮುಖ್ಯವಾಗಿ ಅವಶ್ಯ. ಲೇಖಕರಿಗೆ ಅನ್ವಯಿಸುವವು. ಆದರ ಬಗ್ಗೆ ಬೇರೆ ಬರೆಯ ಬೇಕಾಗಿಲ್ಲ.

ಇನ್ನು ನಮ್ಮ ವಾಚಕರನ್ನು ನಿರೀಕ್ಷಿಸಿದರೆ ಅಲ್ಲಿಯೂ ಇಷ್ಟವಾದ ವೃತ್ತಿ ಕಂಡು ಬರುವದಿಲ್ಲ. ಪುಸ್ತಕ, ವೃತ್ತಪತ್ರ ಇವುಗಳ ಬಗ್ಗೆ ನಮ್ಮ ನೀತಿಯು ಬಹಳ ನಿಂದಾಸ್ಪದವಿದೆ. ಪುಸ್ತಕ ಕೊಳ್ಳಬಾರದು, ಕೊಂಡರೆ ಓದಬಾರದು, ಓದಿದರೆ ನೆನಪಿಡಬಾರದು. ಕಡತಂದ ಪುಸ್ತಕ ತಿರುಗಿ ಕೊಡಬಾರದು, ತಂದ ಪುಸ್ತಕ ವ್ಯವಸ್ಥೆಯಿಂದ ಇಡಬಾರದು, ಈನೀತಿಯನ್ನು ಅನುಸರಿಸುವವರೇ ಬಹಳ! ಈಗ ಮನೆ ಮನೆ ಮಾರಾಟಕ್ಕೆ ಪುಸ್ತಕಗಳು ಬರುವದನ್ನು ಕಂಡು ವಾಚಕರು ಕಾಯಿಪಲ್ಲೆಯಂತೆ ಅದರ ಧಾರಣಿಕೇಳಲು ಪ್ರಾರಂಭಿಸಿದ್ದಾರೆ. ವೃತ್ತಪತ್ರ ವಾಚಕರ ಗತಿಯೂ ಇದೇ. 'ನಿಮ್ಮಲ್ಲಿ ವೃತ್ತಪತ್ರ ಬರುತ್ತಿದೆಯೋ' ಎಂದು ಕೇಳಿದರೆ, ನಮ್ಮ ಓಣಿಯಲ್ಲಿ ಬರುತ್ತಿದೆ ಎಂದು ಹೇಳುವವರು ಅನೇಕರು ಸಿಗುವರು. ವೃತ್ತಪತ್ರವೆಂಬುದೊಂದು ತಾವು ಸ್ವತಃ ಕೊಂಡು ಓದತಕ್ಕ ವಿಷಯ ಎಂಬುದನ್ನು ನಮ್ಮವರು ಇನ್ನೂ ಅರಿತುಕೊಂಡಿಲ್ಲ. ಇಂಗ್ಲಂಡ, ಅಮೇರಿಕಾ ಮುಂತಾದ ದೇಶಗಳಲ್ಲಿ ನಾವು ನೋಡಿದರೆ ಕೂಲಿಕಾರರ ವೃತ್ತಿಯು ಗಂಡಹೆಂಡರು ಕೂಡ ಪ್ರತ್ಯೇಕ ಪತ್ರಗಳನ್ನು ಕೊಂಡು ಓದುವ ಪರಿಪಾಠವಿದೆ. ಕೊಳ್ಳದೆ ಇದ್ದ ಬಗ್ಗೆ

ಈಗ ನಮ್ಮಲ್ಲಿ ಸ್ವಲ್ಪ ನಾಚಲಾರಂಭಿಸಿದ್ದಾರೆ. ಇದೇ ಒಳ್ಳೇ ಲಕ್ಷಣ ವೆಂದು ಹೇಳಬೇಕು.

### ವಿಮರ್ಶಕರು

ಲೇಖಕರು, ವಾಚಕರು ಇವರ ನಡುವೆ ವಿಮರ್ಶಕರದೊಂದು ವರ್ಗವಿದೆ. ಸಾಹಿತ್ಯದಲ್ಲಿಯ ಒಳಿತು ಕೆಡಕುಗಳನ್ನು ಹುಡುಕಿ, ನಿರ್ದಾಕ್ಷಿಣ್ಯವಾಗಿ ಮುಂದಿಡುವವರಿವರು. ನಮ್ಮಲ್ಲಿ ಈ ವಿಮರ್ಶಕ ಕಲೆಯು ಇನ್ನೂ ಅಷ್ಟೊಂದು ವಿಕಸಿತವಾಗಿಲ್ಲ. ಇನ್ನೂ 'ಅಹೋರೂಪ ಮಹೋಧ್ವನಿ' ಯಂಥ ವಿಮರ್ಶೆಯೇ ನಮ್ಮಲ್ಲಿ ಬಹಳವಿದೆ. ಇಲ್ಲದ ಗುಣಗಳ ಆರೋಪ, ಇದ್ದದೋಷಗಳ ಅನಾವಿಷ್ಕರಣ, ಇವೇ ಮುಖ್ಯ ವಾಗಿ ಈಗಿನ ವಿಮರ್ಶೆಯಲ್ಲಿ ಕಂಡುಬರುವುವು. ಮೊದಮೊದಲೇನೋ ಇದು ಆವಶ್ಯಕವಿರಬಹುದು. ಆದರೆ ಈಗ ವಿಮರ್ಶಕರು ಹೆಚ್ಚು ದಾಕ್ಷಿಣ್ಯರಹಿತರಾಗಿರಲಿಕ್ಕೆಬೇಕು. ಇದರಲ್ಲಿ ಇನ್ನೊಂದು ಭಯವಿದೆ. ಪುಸ್ತಕಗಳೇ ವಿಮರ್ಶೆಗೆ ಬಾರದೆ ಹೋಗಬಹುದು ! ಕೊಂಡಾದರೂ ಇಂಥ ವಿಮರ್ಶೆಮಾಡುವ ಧೈರ್ಯದಿಂದ ನಿಜವಾದ ವಿಮರ್ಶಕರು ಮುಂದೆ ಸಾಗಲಿಕ್ಕೆ ಬೇಕು. ಯಾವದೊಂದು ಪುಸ್ತಕದ ಧ್ಯೇಯ ಉದ್ದೇಶಗಳೇನು, ಅವೆಷ್ಟರ ಮಟ್ಟಿಗೆ ಸಾಧಿಸಿವೆ, ಲೇಖಕನ ಯೋಗ್ಯತೆ ಯೇನಿದೆ, ವಿಷಯಪ್ರತಿಪಾದನವು ಹೇಗಿದೆ, ಶೈಲಿ, ಪುಸ್ತಕದ ಅಚ್ಚು, ಬೆಲೆ ಇತ್ಯಾದಿ ಸರ್ವ ವಿಷಯಗಳನ್ನು ಕೇವಲ ಸತ್ಯಪಕ್ಷಪಾತದಿಂದ ಸಮಾಜಹಿತದೃಷ್ಟಿಯಿಂದ, ಅಭ್ಯಸಿಸಿ ಬರೆಯುವ ವಿಮರ್ಶಕರುನಮಗೆ ಈಗ ಬೇಕಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ವಿಮರ್ಶಕನ ಸ್ಥಾನವು ಬಹಳ ಮಹತ್ವದ್ದಿದೆ.

ಸಹೋದರ ಸಹೋದರಿಯರೇ, ಸಾಹಿತಿಯಲ್ಲದ ಸಾಮಾನ್ಯ ಜನರಲ್ಲಿ ಒಬ್ಬನಾದ ನನ್ನನ್ನು ಅಧ್ಯಕ್ಷಮಾಡಿದ ತಪ್ಪಿಗೆ, ಈವರೆಗೆ ಇಲ್ಲಿ ಕೂಡ್ರಿಸಿ ನಾನು ಈಗ ನಿಮಗೆ ಸಾಕಷ್ಟು ಪ್ರಾಯಶ್ಚಿತ್ತ ಕೊಟ್ಟಿ ದ್ದೇನೆ ! ಜನಸಾಮಾನ್ಯರಿಗೆ ಹೊಳೆಯುತಕ್ಕ ನಾಲ್ಕುಮಾತುಗಳನ್ನೇ ನಿಮ್ಮೆದುರಿಗೆ ಇಟ್ಟಿದ್ದೇನೆ. ಅವುಗಳನ್ನೆಲ್ಲ ಸಮಾಲೋಚಿಸಿ, ಕೊನೆಯ ನಾಲ್ಕು ಸೂಚನೆಗಳನ್ನು ಕೊಟ್ಟು ಇನ್ನು ವಿರಮಿಸಬೇಕೆನ್ನುತ್ತೇನೆ.

ನಮ್ಮ ನುಡಿಗೆ ಅಂದರೆ ನಮ್ಮ ಪ್ರಾಂತದ ನುಡಿಗೆ, ಜನಸಾಮಾನ್ಯರ ನುಡಿಗೆ, ನಾವು ಅತ್ಯಂತ ಮಹತ್ವವನ್ನು ಕೊಡಲಿಕ್ಕೆಬೇಕು. ಈ ದೇಹದ ಜೀವನಕ್ಕೆ ಉಸಿರು ಇದ್ದಂತೆ, ನಮ್ಮ ಜೀವನಕ್ಕೆ ನಮ್ಮನುಡಿ. ಯಾರು ನುಡಿಗೆ ಎಷ್ಟು ಮಹತ್ವ ಕೊಡಬೇಕೆಂಬುದನ್ನು ಸಮದೃಷ್ಟಿ ಯಿಂದ ನಿರ್ಧರಿಸಿ, ಅದರಂತೆ ನಾವು ವ್ಯವಹಾರದಲ್ಲಿ ನಡೆದರೆ ನುಡಿಗಳ ತಾಕಲಾಟವು ಕಡಮೆಯಾಗಬಲ್ಲದು. ಆ ವಿಷಯದಲ್ಲಿ ಪ್ರಾಂತಿಕ ಭಾಷೆಯೇ ಪ್ರಧಾನ ಎಂದು ತಿಳಿಯುವದು ಅತ್ಯವಶ್ಯ. ನುಡಿಯೇ ರುಚಿ ಕಟ್ಟಾದ ಸುಂದರರೂಪವನ್ನು ಧರಿಸಿತೆಂದರೆ ಅದು ಸಾಹಿತ್ಯವೆನಿಸುವ ದು. ಕನ್ನಡನುಡಿ ಹಾಗೂ ನಮ್ಮ ವಿಲಕ್ಷಣವಾದ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೂಲಕ ನಮ್ಮನುಡಿ ಹಾಗೂ ಸಾಹಿತ್ಯಗಳ ಬೆಳೆವಣಿಗೆಗೆ ಹಲವು ಅಡ್ಡಿಗಳುಂಟಾಗಿವೆ. ಆದರೆ ಅಭಿಮಾನ ಶೂನ್ಯತೆ ನಮ್ಮ ಜಾಡ್ಯ, ಇವುಗಳನ್ನು ಬಿಟ್ಟು ನಾವು ಸಾಗಿದರೆ, ಇತರ ಸಾಹಿತ್ಯಗಳಷ್ಟೆ ನಮ್ಮ ಸಾಹಿತ್ಯವು ಮುಂದುವರಿಯಬಹುದೆಂಬ ಭರವಸೆ ನನಗಿದೆ. ನಾವು ನಮ್ಮ ಸದ್ಯದ ಮಂದ ಪ್ರಗತಿಯಿಂದ ಸಂತುಷ್ಟ ರಾಗಿರುವದು ಮಾತ್ರ ಘಾತುಕವಿರುವದು. ನಾವು ಉಚ್ಚಧ್ಯೇಯ ಗಳನ್ನಿಟ್ಟುಕೊಂಡು ಅದನ್ನು ಮುಟ್ಟಲು ಹವಣಿಸಬೇಕು. ನುಡಿ ಮತ್ತು ಸಾಹಿತ್ಯಗಳ ವಿಷಯದಲ್ಲಿ ವ್ಯವಹಾರ ಮಾಡುವವರು ಮುಖ್ಯ ವಾಗಿ ವಾಗ್ಮಿಗಳು, ಲೇಖಕರು, ವಾಚಕರು ಮತ್ತು ವಿಮರ್ಶಕರು. ಅವರೆಲ್ಲರೂ ಉಚ್ಚ ಭಾವನೆಗಳಿಂದ ಪ್ರೇರಿತರಿರಲಿಕ್ಕೆಬೇಕು. ಅಂದರೆ ಸಮಾಜಕ್ಕೆ ಸಾಹಿತ್ಯದಿಂದ ನಿಜವಾದ ಲಾಭವಾಗುವದು. ಇನ್ನು ಸದ್ಯದ ನಮ್ಮ ನುಡಿ ಹಾಗು ಸಾಹಿತ್ಯಗಳ ಸ್ಥಿತಿ ನೋಡಿ ನಮ್ಮ ಧ್ಯೇಯದತ್ತ ಲಕ್ಷ್ಯವಿಟ್ಟು ವಿಚಾರಿಸಿದರೆ ನಾವು ಸದ್ಯದಲ್ಲಿ ಯಾವ ಕಾರ್ಯಕ್ರಮವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂಬುದನ್ನು ಸಂಕ್ಷೇಪದಲ್ಲಿ ಸೂಚಿಸುತ್ತೇನೆ.

### ಸೂಚನೆಗಳು

ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಒಪ್ಪಿ, ಮುಂಬಯಿ ಮದ್ರಾಸ ಸರಕಾರದವರು ಕರ್ನಾಟಕ ಪ್ರಾಂತೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದ್ದು ನಮ್ಮ ಧ್ಯೇಯಸಾಧನೆಗೆ ಅನುಕೂಲವಾದ್ದರಿಂದ ನಾವು ಆಯಾ ಸರಕಾರದವರನ್ನು ಅಭಿನಂದಿಸುವದು ನಮ್ಮ ಕರ್ತವ್ಯ.

ಸಾಹಿತ್ಯ ಪರಿಷತ್ ಸಂಸ್ಥೆಯನ್ನು ಸದಸ್ಯ ಸಂಖ್ಯೆ, ಧನ, ಕಾರ್ಯಕರ್ತರು ಇವುಗಳಿಂದ ಹೆಚ್ಚು ಬಲವುಳ್ಳದ್ದನ್ನಾಗಿ ಮಾಡಲಿಕ್ಕೆಬೇಕು.

ನಮ್ಮ ಸಾಹಿತ್ಯ ಪರಿಷತ್ತಿನ ಉದ್ದೇಶ ಮಾಲಿಕೆಯನ್ನು ನೋಡಿದರೆ ಕನ್ನಡ ಸಾಹಿತ್ಯದ ಬಗ್ಗೆ ಇದಕ್ಕೂ ಹೆಚ್ಚಿನದೇನಾದರೂ ಆಗಬೇಕು ಎಂದು ಹೇಳುವಂತೆ ಏನೂ ಉಳಿದಿಲ್ಲ. ಆ ಉದ್ದೇಶಗಳಲ್ಲಿಯ ಹಲವನ್ನೆತ್ತಿ ಸಾಧಿಸಲು ಯತ್ನಿಸುವದು ಅವಶ್ಯ ಎಂದು ಹೇಳಬಹುದು.

ಕನ್ನಡದಲ್ಲಿ ಅತ್ಯುಚ್ಚ ಸಾಹಿತ್ಯವು ನಿರ್ಮಾಣವಾಗಬೇಕೆಂದು ನಾವು ಬಯಸುವಂತೆ, ಕರ್ನಾಟಕದಲ್ಲಿಯ ಪ್ರತಿಯೊಬ್ಬನಿಗೆ ಕನ್ನಡ ಓದು ಬರಹವು ಬರುವಂತೆ ಮತ್ತು ಸರ್ವಸಾಮಾನ್ಯ ಜ್ಞಾನವೆಲ್ಲ ಅವನಿಗೆ ಕನ್ನಡದಲ್ಲಿ ದೊರಕುವಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯ ವೆಂದು ನಾವು ತಿಳಿದು ಸಾಗಲಿಕ್ಕೆಬೇಕು. ಈ ವಿಷಯದತ್ತ ನಾವು ಇನ್ನೂ ಅಷ್ಟು ಲಕ್ಷ್ಯಕೊಟ್ಟಿಲ್ಲ. ಕೊನೆಗೆ ಸರಕಾರದವರೇ ಇಂಥ ಕೆಲಸ ಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತು ನಿಜ. ಆದರೆ ಸರ ಕಾರವು ಈ ಕೆಲಸವನ್ನು ಕೈಗೊಳ್ಳುವಂತೆ ಮಾಡುವದು ನಮ್ಮ ದೀರ್ಘಪ್ರಯತ್ನದಿಂದಲೇ ಶಕ್ಯವು. ಬರೇ ನಾಲ್ಕು ಒಳ್ಳೇ ಕಾವ್ಯ ಪುಸ್ತಕಗಳು ಹೊರಟರೆ ಅದರಿಂದ ನಮ್ಮ ಉದ್ಧಾರವಾಗುವುದಿಲ್ಲ. ಜನ ಸಾಮಾನ್ಯರ ಕಾಲವಿದು. ಆದುದರಿಂದ ಎಲ್ಲರಿಗೂ ನುಡಿಯ ಜ್ಞಾನ ವಾದಾಗಲೆ ಮುಂದೆ ಆ ತಳಹದಿಯಮೇಲೆ ನಮ್ಮ ಸಾಹಿತ್ಯಮಂದಿರ ವನ್ನು ಸುವ್ಯವಸ್ಥಿತವಾಗಿ ಕಟ್ಟಲು ಆಸ್ಪದವಿರುವದು.

ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳು ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ. ಮೈಸೂರು ವಿಶ್ವವಿದ್ಯಾಲಯದವರು ಆ ರೀತಿ ಪ್ರಯತ್ನಮಾಡುತ್ತ ಹೋದಲ್ಲಿ ಅದು ಬೇಗ ಆಗುವದು ಕಠಿಣವಲ್ಲ. ಈಗ ಧಾರವಾಡದಲ್ಲಿ ಮುಂಬೈ ಸರಕಾರದವರು ಕನ್ನಡ ಸಂಶೋಧನೆಯ ಬಗ್ಗೆ ಒಂದು ಸಂಸ್ಥೆಯನ್ನು ಹೊರಡಿಸಬೇಕೆಂದಿದ್ದಾರೆ. ಅದರಲ್ಲಿಯೂ ಒಂದು ಪುಸ್ತಕಾಲಯದ ಯೋಜನೆ ಇದೆ. ಅಲ್ಲಿಯೂ ಪ್ರಯತ್ನಪಟ್ಟರೆ ಫಲ ಕಾರಿಯಾಗಬಹುದು.

ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವ ವಿದ್ಯಾಲಯವನ್ನು ಮಾಡುವ ವಿಚಾರವು ಒಮ್ಮೆ ಒಳ್ಳೆ ಜೋರಿನಿಂದ ಸಾಗಿ ಮುಂದೆ ಅದು ಮತ್ತೆ ತಣ್ಣಗಾಗಿದೆ. ಈ ಪ್ರಯತ್ನವನ್ನು ಪುನಃ ಮಾಡುವದು ಅವಶ್ಯವಿದೆ. ಅದೇ ರೀತಿ ಮುಂಬೈ ಇಲಾಖೆ ಯವರು ಹಾಗೂ ಮುಂಬೈ ವಿಶ್ವವಿದ್ಯಾಲಯದವರು ಈ ತತ್ವವನ್ನು ಒಪ್ಪಿರುವರು. ಆದರೆ ಅದು ಎಂದು ಆಗುವದೋ ತಿಳಿಯದು. ಈಗ ಇದ್ದ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ತಕ್ಕುದಾದ ಶ್ರೇಷ್ಠ ಸ್ಥಾನವು ಸಿಕ್ಕುವಂತೆ ನಾವು ಆಂದೋಲನವನ್ನು ನಡಸಲಿಕ್ಕೆಬೇಕು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕೂಡ ಇನ್ನೂ ಕನ್ನಡಕ್ಕೆ ಮುಖ್ಯ ಸ್ಥಾನವಿಲ್ಲ.

ಇದೇ ಸಂದರ್ಭದಲ್ಲಿ ಪ್ರೊ. ವಿಜಯೇಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಧಾರವಾಡದಲ್ಲಿ ಹೋದ ೮-೯ನೆಯ ತಾರೀಖಿನ ದಿವಸ ನೆರೆದ ಕರ್ನಾಟಕ ಶಿಕ್ಷಣ ಪರಿಷತ್ತಿನವರು ನೇಮಿಸಿದ ಮಂಡಳಕ್ಕೆ ನಾವೆಲ್ಲರೂ ಸಹಾಯ ಮಾಡುವದು ಅತ್ಯವಶ್ಯವಿರುವದು.

ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದು ನಮ್ಮೆದುರಿಗೆ ಮೇಲಿಂದ ಮೇಲೆ ಬರುತ್ತಿದೆ. ನನಗೆ ತಿಳಿದ ಮಟ್ಟಿಗೆ, ಅಲ್ಲಿ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗುವದು. ಅಲ್ಲಿ ಹೋಗಿ ಒಂದು ಶಾಲೆಯನ್ನೊ, ವಾಚನಾಲಯವನ್ನೊ ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ, ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ ಎಂದು ನನ್ನ

ಈಗ ನಮ್ಮಲ್ಲಿ ಸ್ವಲ್ಪ ನಾಚಲಾರಂಭಿಸಿದ್ದಾರೆ. ಇದೇ ಒಳ್ಳೇ ಲಕ್ಷಣವೆಂದು ಹೇಳಬೇಕು.

### ವಿಮರ್ಶಕರು

ಲೇಖಕರು, ವಾಚಕರು ಇವರ ನಡುವೆ ವಿಮರ್ಶಕರದೊಂದು ವರ್ಗವಿದೆ. ಸಾಹಿತ್ಯದಲ್ಲಿಯ ಒಳಿತು ಕೆಡಕುಗಳನ್ನು ಹುಡುಕಿ, ನಿರ್ದಾಕ್ಷಿಣ್ಯವಾಗಿ ಮುಂದಿಡುವವರಿವರು. ನಮ್ಮಲ್ಲಿ ಈ ವಿಮರ್ಶಕ ಕಲೆಯು ಇನ್ನೂ ಅಷ್ಟೊಂದು ವಿಕಸಿತವಾಗಿಲ್ಲ. ಇನ್ನೂ 'ಅಹೋರೂಪ ಮಹೋಧ್ವನಿ' ಯಂಥ ವಿಮರ್ಶೆಯೇ ನಮ್ಮಲ್ಲಿ ಬಹಳವಿದೆ. ಇಲ್ಲದ ಗುಣಗಳ ಆರೋಪ, ಇದ್ದದೋಷಗಳ ಅನಾವಿಷ್ಕರಣ, ಇವೇ ಮುಖ್ಯವಾಗಿ ಈಗಿನ ವಿಮರ್ಶೆಯಲ್ಲಿ ಕಂಡುಬರುವುವು. ಮೊದಮೊದಲೇನೋ ಇದು ಆವಶ್ಯಕವಿರಬಹುದು. ಆದರೆ ಈಗ ವಿಮರ್ಶಕರು ಹೆಚ್ಚು ದಾಕ್ಷಿಣ್ಯರಹಿತರಾಗಿರಲಿಕ್ಕೆಬೇಕು. ಇದರಲ್ಲಿ ಇನ್ನೊಂದು ಭಯವಿದೆ. ಪುಸ್ತಕಗಳೇ ವಿಮರ್ಶೆಗೆ ಬಾರದೆ ಹೋಗಬಹುದು! ಕೊಂಡಾದರೂ ಇಂಥ ವಿಮರ್ಶೆಮಾಡುವ ಧೈರ್ಯದಿಂದ ನಿಜವಾದ ವಿಮರ್ಶಕರು ಮುಂದೆ ಸಾಗಲಿಕ್ಕೆ ಬೇಕು. ಯಾವದೊಂದು ಪುಸ್ತಕದ ಧ್ಯೇಯ ಉದ್ದೇಶಗಳೇನು, ಅವೆಷ್ಟರ ಮಟ್ಟಿಗೆ ಸಾಧಿಸಿವೆ, ಲೇಖಕನ ಯೋಗ್ಯತೆಯೇನಿದೆ, ವಿಷಯಪ್ರತಿಪಾದನವು ಹೇಗಿದೆ, ಶೈಲಿ, ಪುಸ್ತಕದ ಅಚ್ಚು, ಬೆಲೆ ಇತ್ಯಾದಿ ಸರ್ವ ವಿಷಯಗಳನ್ನು ಕೇವಲ ಸತ್ಯಪಕ್ಷಪಾತದಿಂದ ಸಮಾಜಹಿತದೃಷ್ಟಿಯಿಂದ, ಅಭ್ಯಸಿಸಿ ಬರೆಯುವ ವಿಮರ್ಶಕರುನಮಗೆ ಈಗ ಬೇಕಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ವಿಮರ್ಶಕನ ಸ್ಥಾನವು ಬಹಳ ಮಹತ್ವದ್ದಿದೆ.

ಸಹೋದರ ಸಹೋದರಿಯರೇ, ಸಾಹಿತಿಯಲ್ಲದ ಸಾಮಾನ್ಯ ಜನರಲ್ಲಿ ಒಬ್ಬನಾದ ನನ್ನನ್ನು ಅಧ್ಯಕ್ಷನಮಾಡಿದ ತಪ್ಪಿಗೆ, ಈವರೆಗೆ ಇಲ್ಲಿ ಕೂಡ್ರಿಸಿ ನಾನು ಈಗ ನಿಮಗೆ ಸಾಕಷ್ಟು ಪ್ರಾಯಶ್ಚಿತ್ತ ಕೊಟ್ಟಿದ್ದೇನೆ! ಜನಸಾಮಾನ್ಯರಿಗೆ ಹೊಳೆಯುತಕ್ಕ ನಾಲ್ಕುಮಾತುಗಳನ್ನೇ ನಿಮ್ಮೆದುರಿಗೆ ಇಟ್ಟಿದ್ದೇನೆ. ಅವುಗಳನ್ನೆಲ್ಲ ಸಮಾಲೋಚಿಸಿ, ಕೊನೆಯ ನಾಲ್ಕು ಸೂಚನೆಗಳನ್ನು ಕೊಟ್ಟು ಇನ್ನು ವಿರಮಿಸಬೇಕೆನ್ನುತ್ತೇನೆ.

ನಮ್ಮ ನುಡಿಗೆ ಅಂದರೆ ನಮ್ಮ ಪ್ರಾಂತದ ನುಡಿಗೆ, ಜನಸಾಮಾನ್ಯರ ನುಡಿಗೆ, ನಾವು ಅತ್ಯಂತ ಮಹತ್ವವನ್ನು ಕೊಡಲಿಕ್ಕೆಬೇಕು. ಈ ದೇಹದ ಜೀವನಕ್ಕೆ ಉಸಿರು ಇದ್ದಂತೆ, ನಮ್ಮ ಜೀವನಕ್ಕೆ ನಮ್ಮನುಡಿ. ಯಾರು ನುಡಿಗೆ ಎಷ್ಟು ಮಹತ್ವ ಕೊಡಬೇಕೆಂಬುದನ್ನು ಸಮದೃಷ್ಟಿಯಿಂದ ನಿರ್ಧರಿಸಿ, ಅದರಂತೆ ನಾವು ವ್ಯವಹಾರದಲ್ಲಿ ನಡೆದರೆ ನುಡಿಗಳ ತಾಕಲಾಟವು ಕಡಮೆಯಾಗಬಲ್ಲದು. ಆ ವಿಷಯದಲ್ಲಿ ಪ್ರಾಂತಿಕ ಭಾಷೆಯೇ ಪ್ರಧಾನ ಎಂದು ತಿಳಿಯುವದು ಅತ್ಯವಶ್ಯ. ನುಡಿಯೇ ರುಚಿಕಟ್ಟಾದ ಸುಂದರರೂಪವನ್ನು ಧರಿಸಿತೆಂದರೆ ಅದು ಸಾಹಿತ್ಯವೆನಿಸುವದು. ಕನ್ನಡನುಡಿ ಹಾಗೂ ನಮ್ಮ ವಿಲಕ್ಷಣವಾದ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೂಲಕ ನಮ್ಮನುಡಿ ಹಾಗೂ ಸಾಹಿತ್ಯಗಳ ಬೆಳೆವಣಿಗೆಗೆ ಹಲವು ಅಡ್ಡಿಗಳುಂಟಾಗಿವೆ. ಆದರೆ ಅಭಿಮಾನ ಶೂನ್ಯತೆ ನಮ್ಮ ಜಾಡ್ಯ, ಇವುಗಳನ್ನು ಬಿಟ್ಟು ನಾವು ಸಾಗಿದರೆ, ಇತರ ಸಾಹಿತ್ಯಗಳಷ್ಟೆ, ನಮ್ಮ ಸಾಹಿತ್ಯವು ಮುಂದುವರಿಯಬಹುದೆಂಬ ಭರವಸೆ ನನಗಿದೆ. ನಾವು ನಮ್ಮ ಸದ್ಯದ ಮಂದ ಪ್ರಗತಿಯಿಂದ ಸಂತುಷ್ಟರಾಗಿರುವದು ಮಾತ್ರ ಘಾತುಕವಿರುವದು. ನಾವು ಉಚ್ಚಧ್ಯೇಯಗಳನ್ನಿಟ್ಟುಕೊಂಡು ಅದನ್ನು ಮುಟ್ಟಲು ಹವಣಿಸಬೇಕು. ನುಡಿ ಮತ್ತು ಸಾಹಿತ್ಯಗಳ ವಿಷಯದಲ್ಲಿ ವ್ಯವಹಾರ ಮಾಡುವವರು ಮುಖ್ಯವಾಗಿ ವಾಗ್ಮಿಗಳು, ಲೇಖಕರು, ವಾಚಕರು ಮತ್ತು ವಿಮರ್ಶಕರು. ಅವರೆಲ್ಲರೂ ಉಚ್ಚ ಭಾವನೆಗಳಿಂದ ಪ್ರೇರಿತರಿರಲಿಕ್ಕೆಬೇಕು. ಅಂದರೆ ಸಮಾಜಕ್ಕೆ ಸಾಹಿತ್ಯದಿಂದ ನಿಜವಾದ ಲಾಭವಾಗುವದು. ಇನ್ನು ಸದ್ಯದ ನಮ್ಮ ನುಡಿ ಹಾಗು ಸಾಹಿತ್ಯಗಳ ಸ್ಥಿತಿ ನೋಡಿ ನಮ್ಮ ಧ್ಯೇಯದತ್ತ ಲಕ್ಷ್ಯವಿಟ್ಟು ವಿಚಾರಿಸಿದರೆ ನಾವು ಸದ್ಯದಲ್ಲಿ ಯಾವ ಕಾರ್ಯಕ್ರಮವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂಬುದನ್ನು ಸಂಕ್ಷೇಪದಲ್ಲಿ ಸೂಚಿಸುತ್ತೇನೆ.

### ಸೂಚನೆಗಳು

ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಒಪ್ಪಿ, ಮುಂಬಯಿ ಮದ್ರಾಸ ಸರಕಾರದವರು ಕರ್ನಾಟಕ ಪ್ರಾಂತೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದ್ದು ನಮ್ಮ ಧ್ಯೇಯಸಾಧನೆಗೆ ಅನುಕೂಲವಾದ್ದರಿಂದ ನಾವು ಆಯಾ ಸರಕಾರದವರನ್ನು ಅಭಿನಂದಿಸುವದು ನಮ್ಮ ಕರ್ತವ್ಯ.

ಸಾಹಿತ್ಯ ಪರಿಷತ್ ಸಂಸ್ಥೆಯನ್ನು ಸದಸ್ಯ ಸಂಖ್ಯೆ, ಧನ, ಕಾರ್ಯಕರ್ತರು ಇವುಗಳಿಂದ ಹೆಚ್ಚು ಬಲವುಳ್ಳದ್ದನ್ನಾಗಿ ಮಾಡಲಿಕ್ಕೆಬೇಕು.

ನಮ್ಮ ಸಾಹಿತ್ಯ ಪರಿಷತ್ತಿನ ಉದ್ದೇಶ ಮಾಲಿಕೆಯನ್ನು ನೋಡಿದರೆ ಕನ್ನಡ ಸಾಹಿತ್ಯದ ಬಗ್ಗೆ ಇದಕ್ಕೂ ಹೆಚ್ಚಿನದೇನಾದರೂ ಆಗಬೇಕು ಎಂದು ಹೇಳುವಂತೆ ಏನೂ ಉಳಿದಿಲ್ಲ. ಆ ಉದ್ದೇಶಗಳಲ್ಲಿಯ ಹಲವನ್ನೆತ್ತಿ ಸಾಧಿಸಲು ಯತ್ನಿಸುವದು ಅವಶ್ಯ ಎಂದು ಹೇಳಬಹುದು.

ಕನ್ನಡದಲ್ಲಿ ಅತ್ಯುಚ್ಚ ಸಾಹಿತ್ಯವು ನಿರ್ಮಾಣವಾಗಬೇಕೆಂದು ನಾವು ಬಯಸುವಂತೆ, ಕರ್ನಾಟಕದಲ್ಲಿಯ ಪ್ರತಿಯೊಬ್ಬನಿಗೆ ಕನ್ನಡ ಓದು ಬರಹವು ಬರುವಂತೆ ಮತ್ತು ಸರ್ವಸಾಮಾನ್ಯ ಜ್ಞಾನವೆಲ್ಲ ಅವನಿಗೆ ಕನ್ನಡದಲ್ಲಿ ದೊರಕುವಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯವೆಂದು ನಾವು ತಿಳಿದು ಸಾಗಲಿಕ್ಕೆಬೇಕು. ಈ ವಿಷಯದತ್ತ ನಾವು ಇನ್ನೂ ಅಷ್ಟು ಲಕ್ಷ್ಯಕೊಟ್ಟಿಲ್ಲ. ಕೊನೆಗೆ ಸರಕಾರದವರೇ ಇಂಥ ಕೆಲಸಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತು ನಿಜ. ಆದರೆ ಸರಕಾರವು ಈ ಕೆಲಸವನ್ನು ಕೈಗೊಳ್ಳುವಂತೆ ಮಾಡುವದು ನಮ್ಮ ದೀರ್ಘಪ್ರಯತ್ನದಿಂದಲೇ ಶಕ್ಯವು. ಬರೇ ನಾಲ್ಕು ಒಳ್ಳೇ ಕಾವ್ಯ ಪುಸ್ತಕಗಳು ಹೊರಟರೆ ಆದರಿಂದ ನಮ್ಮ ಉದ್ಧಾರವಾಗುವುದಿಲ್ಲ. ಜನಸಾಮಾನ್ಯರ ಕಾಲವಿದು. ಆದುದರಿಂದ ಎಲ್ಲರಿಗೂ ನುಡಿಯ ಜ್ಞಾನವಾದಾಗಲೆ ಮುಂದೆ ಆ ತಳಹದಿಯಮೇಲೆ ನಮ್ಮ ಸಾಹಿತ್ಯಮಂದಿರವನ್ನು ಸುವ್ಯವಸ್ಥಿತವಾಗಿ ಕಟ್ಟಲು ಆಸ್ಪದವಿರುವದು.

ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳು ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ. ಮೈಸೂರು ವಿಶ್ವವಿದ್ಯಾಲಯದವರು ಆ ರೀತಿ ಪ್ರಯತ್ನಮಾಡುತ್ತಹೋದಲ್ಲಿ ಅದು ಬೇಗ ಆಗುವದು ಕಠಿಣವಲ್ಲ. ಈಗ ಧಾರವಾಡದಲ್ಲಿ ಮುಂಬೈ ಸರಕಾರದವರು ಕನ್ನಡ ಸಂಶೋಧನೆಯ ಬಗ್ಗೆ ಒಂದು ಸಂಸ್ಥೆಯನ್ನು ಹೊರಡಿಸಬೇಕೆಂದಿದ್ದಾರೆ. ಅದರಲ್ಲಿಯೂ ಒಂದು ಪುಸ್ತಕಾಲಯದ ಯೋಜನೆ ಇದೆ. ಅಲ್ಲಿಯೂ ಪ್ರಯತ್ನಪಟ್ಟರೆ ಫಲಕಾರಿಯಾಗಬಹುದು.

ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಮಾಡುವ ವಿಚಾರವು ಒಮ್ಮೆ ಒಳ್ಳೆ ಜೋರಿನಿಂದ ಸಾಗಿ ಮುಂದೆ ಅದು ಮತ್ತೆ ತಣ್ಣಗಾಗಿದೆ. ಈ ಪ್ರಯತ್ನವನ್ನು ಪುನಃ ಮಾಡುವದು ಅವಶ್ಯವಿದೆ. ಅದೇ ರೀತಿ ಮುಂಬೈ ಇಲಾಖೆಯವರು ಹಾಗೂ ಮುಂಬೈ ವಿಶ್ವವಿದ್ಯಾಲಯದವರು ಈ ತತ್ವವನ್ನು ಒಪ್ಪಿರುವರು. ಆದರೆ ಅದು ಎಂದು ಆಗುವದೋ ತಿಳಿಯದು. ಈಗ ಇದ್ದ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ತಕ್ಕುದಾದ ಶ್ರೇಷ್ಠ ಸ್ಥಾನವು ಸಿಕ್ಕುವಂತೆ ನಾವು ಆಂದೋಲನವನ್ನು ನಡಸಲಿಕ್ಕೆಬೇಕು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕೂಡ ಇನ್ನೂ ಕನ್ನಡಕ್ಕೆ ಮುಖ್ಯ ಸ್ಥಾನವಿಲ್ಲ.

ಇದೇ ಸಂದರ್ಭದಲ್ಲಿ ಪ್ರೊ. ವಿಜಯೇಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಧಾರವಾಡದಲ್ಲಿ ಹೋದ ೮-೯ನೆಯ ತಾರೀಖಿನ ದಿವಸ ನೆರೆದ ಕರ್ನಾಟಕ ಶಿಕ್ಷಣ ಪರಿಷತ್ತಿನವರು ನೇಮಿಸಿದ ಮಂಡಳಕ್ಕೆ ನಾವೆಲ್ಲರೂ ಸಹಾಯ ಮಾಡುವದು ಅತ್ಯವಶ್ಯವಿರುವದು.

ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದು ನಮ್ಮೆದುರಿಗೆ ಮೇಲಿಂದ ಮೇಲೆ ಬರುತ್ತಿದೆ. ನನಗೆ ತಿಳಿದ ಮಟ್ಟಿಗೆ, ಅಲ್ಲಿ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗುವದು. ಅಲ್ಲಿ ಹೋಗಿ ಒಂದು ಶಾಲೆಯನ್ನೊ, ವಾಚನಾಲಯವನ್ನೊ ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ, ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ ಎಂದು ನನ್ನ

ಈಗ ನಮ್ಮಲ್ಲಿ ಸ್ವಲ್ಪ ನಾಚಲಾರಂಭಿಸಿದ್ದಾರೆ. ಇದೇ ಒಳ್ಳೇ ಲಕ್ಷಣವೆಂದು ಹೇಳಬೇಕು.

### ವಿಮರ್ಶಕರು

ಲೇಖಕರು, ವಾಚಕರು ಇವರ ನಡುವೆ ವಿಮರ್ಶಕರದೊಂದು ವರ್ಗವಿದೆ. ಸಾಹಿತ್ಯದಲ್ಲಿಯ ಒಳಿತು ಕೆಡಕುಗಳನ್ನು ಹುಡುಕಿ, ನಿರ್ದಾಕ್ಷಿಣ್ಯವಾಗಿ ಮುಂದಿಡುವವರಿವರು. ನಮ್ಮಲ್ಲಿ ಈ ವಿಮರ್ಶಕಕಲೆಯು ಇನ್ನೂ ಅಷ್ಟೊಂದು ವಿಕಸಿತವಾಗಿಲ್ಲ. ಇನ್ನೂ 'ಅಹೋರೂಪ ಮಹೋಧ್ವನಿ' ಯಂಥ ವಿಮರ್ಶೆಯೇ ನಮ್ಮಲ್ಲಿ ಬಹಳವಿದೆ. ಇಲ್ಲದ ಗುಣಗಳ ಆರೋಪ, ಇದ್ದ ದೋಷಗಳ ಅನಾವಿಷ್ಕರಣ, ಇವೇ ಮುಖ್ಯವಾಗಿ ಈಗಿನ ವಿಮರ್ಶೆಯಲ್ಲಿ ಕಂಡುಬರುವುವು. ಮೊದಮೊದಲೇನೋ ಇದು ಆವಶ್ಯಕವಿರಬಹುದು. ಆದರೆ ಈಗ ವಿಮರ್ಶಕರು ಹೆಚ್ಚು ದಾಕ್ಷಿಣ್ಯರಹಿತರಾಗಿರಲಿಕ್ಕೆಬೇಕು. ಇದರಲ್ಲಿ ಇನ್ನೊಂದು ಭಯವಿದೆ. ಪುಸ್ತಕಗಳೇ ವಿಮರ್ಶೆಗೆ ಬಾರದೆ ಹೋಗಬಹುದು ! ಕೊಂಡಾದರೂ ಇಂಥ ವಿಮರ್ಶೆಮಾಡುವ ಧೈರ್ಯದಿಂದ ನಿಜವಾದ ವಿಮರ್ಶಕರು ಮುಂದೆ ಸಾಗಲಿಕ್ಕೆ ಬೇಕು. ಯಾವದೊಂದು ಪುಸ್ತಕದ ಧ್ಯೇಯ ಉದ್ದೇಶಗಳೇನು, ಅವೆಷ್ಟರ ಮಟ್ಟಿಗೆ ಸಾಧಿಸಿವೆ, ಲೇಖಕನ ಯೋಗ್ಯತೆಯೇನಿದೆ, ವಿಷಯಪ್ರತಿಪಾದನವು ಹೇಗಿದೆ, ಶೈಲಿ, ಪುಸ್ತಕದ ಅಚ್ಚು, ಬೆಲೆ ಇತ್ಯಾದಿ ಸರ್ವ ವಿಷಯುಗಳನ್ನು ಕೇವಲ ಸತ್ಯಪಕ್ಷಪಾತದಿಂದ ಸಮಾಜಹಿತದೃಷ್ಟಿಯಿಂದ, ಅಭ್ಯಸಿಸಿ ಬರೆಯುವ ವಿಮರ್ಶಕರುನಮಗೆ ಈಗ ಬೇಕಾಗಿದ್ದಾರೆ. ಸಾಹಿತ್ಯ ಸೃಷ್ಟಿಯಲ್ಲಿ ವಿಮರ್ಶಕನ ಸ್ಥಾನವು ಬಹಳ ಮಹತ್ವದ್ದಿದೆ.

ಸಹೋದರ ಸಹೋದರಿಯರೇ, ಸಾಹಿತಿಯಲ್ಲದ ಸಾಮಾನ್ಯ ಜನರಲ್ಲಿ ಒಬ್ಬನಾದ ನನ್ನನ್ನು ಅಧ್ಯಕ್ಷನಮಾಡಿದ ತಪ್ಪಿಗೆ, ಈವರೆಗೆ ಇಲ್ಲಿ ಕೂಡ್ರಿಸಿ ನಾನು ಈಗ ನಿಮಗೆ ಸಾಕಷ್ಟು ಪ್ರಾಯಶ್ಚಿತ್ತ ಕೊಟ್ಟಿದ್ದೇನೆ ! ಜನಸಾಮಾನ್ಯರಿಗೆ ಹೊಳೆಯುತಕ್ಕ ನಾಲ್ಕುಮಾತುಗಳನ್ನೇ ನಿಮ್ಮೆದುರಿಗೆ ಇಟ್ಟಿದ್ದೇನೆ. ಅವುಗಳನ್ನೆಲ್ಲ ಸಮಾಲೋಚಿಸಿ, ಕೊನೆಯ ನಾಲ್ಕು ಸೂಚನೆಗಳನ್ನು ಕೊಟ್ಟು ಇನ್ನು ವಿರಮಿಸಬೇಕೆನ್ನುತ್ತೇನೆ.

ನಮ್ಮ ನುಡಿಗೆ ಅಂದರೆ ನಮ್ಮ ಪ್ರಾಂತದ ನುಡಿಗೆ, ಜನಸಾಮಾನ್ಯರ ನುಡಿಗೆ, ನಾವು ಅತ್ಯಂತ ಮಹತ್ವವನ್ನು ಕೊಡಲಿಕ್ಕೆಬೇಕು. ಈ ದೇಹದ ಜೀವನಕ್ಕೆ ಉಸಿರು ಇದ್ದಂತೆ, ನಮ್ಮ ಜೀವನಕ್ಕೆ ನಮ್ಮನುಡಿ. ಯಾರು ನುಡಿಗೆ ಎಷ್ಟು ಮಹತ್ವ ಕೊಡಬೇಕೆಂಬುದನ್ನು ಸಮದೃಷ್ಟಿಯಿಂದ ನಿರ್ಧರಿಸಿ, ಅದರಂತೆ ನಾವು ವ್ಯವಹಾರದಲ್ಲಿ ನಡೆದರೆ ನುಡಿಗಳ ತಾಕಲಾಟವು ಕಡಮೆಯಾಗಬಲ್ಲದು. ಆ ವಿಷಯದಲ್ಲಿ ಪ್ರಾಂತಿಕ ಭಾಷೆಯೇ ಪ್ರಧಾನ ಎಂದು ತಿಳಿಯುವದು ಅತ್ಯವಶ್ಯ. ನುಡಿಯೇ ರುಚಿಕಟ್ಟಾದ ಸುಂದರರೂಪವನ್ನು ಧರಿಸಿತೆಂದರೆ ಅದು ಸಾಹಿತ್ಯವೆನಿಸುವದು. ಕನ್ನಡನುಡಿ ಹಾಗೂ ನಮ್ಮ ವಿಲಕ್ಷಣವಾದ ರಾಜಕೀಯ ಹಾಗೂ ಸಾಮಾಜಿಕ ಪರಿಸ್ಥಿತಿಯ ಮೂಲಕ ನಮ್ಮನುಡಿ ಹಾಗೂ ಸಾಹಿತ್ಯಗಳ ಬೆಳೆವಣಿಗೆಗೆ ಹಲವು ಅಡ್ಡಿಗಳುಂಟಾಗಿವೆ. ಆದರೆ ಅಭಿಮಾನ ಶೂನ್ಯತೆ ನಮ್ಮ ಜಾಡ್ಯ, ಇವುಗಳನ್ನು ಬಿಟ್ಟು ನಾವು ಸಾಗಿದರೆ ಇತರ ಸಾಹಿತ್ಯಗಳಷ್ಟೆ ನಮ್ಮ ಸಾಹಿತ್ಯವು ಮುಂದುವರಿಯಬಹುದೆಂಬ ಭರವಸೆ ನನಗಿದೆ. ನಾವು ನಮ್ಮ ಸದ್ಯದ ಮಂದ ಪ್ರಗತಿಯಿಂದ ಸಂತುಷ್ಟರಾಗಿರುವದು ಮಾತ್ರ ಘಾತುಕವಿರುವದು. ನಾವು ಉಚ್ಚಧ್ಯೇಯಗಳನ್ನಿಟ್ಟುಕೊಂಡು ಅದನ್ನು ಮುಟ್ಟಲು ಹವಣಿಸಬೇಕು. ನುಡಿ ಮತ್ತು ಸಾಹಿತ್ಯಗಳ ವಿಷಯದಲ್ಲಿ ವ್ಯವಹಾರ ಮಾಡುವವರು ಮುಖ್ಯವಾಗಿ ವಾಗ್ಮಿಗಳು, ಲೇಖಕರು, ವಾಚಕರು ಮತ್ತು ವಿಮರ್ಶಕರು. ಅವರೆಲ್ಲರೂ ಉಚ್ಚ ಭಾವನೆಗಳಿಂದ ಪ್ರೇರಿತರಿರಲಿಕ್ಕೆಬೇಕು. ಅಂದರೆ ಸಮಾಜಕ್ಕೆ ಸಾಹಿತ್ಯದಿಂದ ನಿಜವಾದ ಲಾಭವಾಗುವದು. ಇನ್ನು ಸದ್ಯದ ನಮ್ಮ ನುಡಿ ಹಾಗು ಸಾಹಿತ್ಯಗಳ ಸ್ಥಿತಿ ನೋಡಿ ನಮ್ಮ ಧ್ಯೇಯದತ್ತ ಲಕ್ಷ್ಯವಿಟ್ಟು ವಿಚಾರಿಸಿದರೆ ನಾವು ಸದ್ಯದಲ್ಲಿ ಯಾವ ಕಾರ್ಯಕ್ರಮವನ್ನಿಟ್ಟುಕೊಂಡು ಮುಂದೆ ಸಾಗಬೇಕೆಂಬುದನ್ನು ಸಂಕ್ಷೇಪದಲ್ಲಿ ಸೂಚಿಸುತ್ತೇನೆ.

### ಸೂಚನೆಗಳು

ಭಾಷಾನುಗುಣ ಪ್ರಾಂತರಚನೆಯ ತತ್ವಕ್ಕೆ ಒಪ್ಪಿ, ಮುಂಬಯಿ ಮದ್ರಾಸ ಸರಕಾರದವರು ಕರ್ನಾಟಕ ಪ್ರಾಂತೀಕರಣದ ಗೊತ್ತುವಳಿಗಳನ್ನು ಸ್ವೀಕರಿಸಿದ್ದು ನಮ್ಮ ಧ್ಯೇಯಸಾಧನೆಗೆ ಅನುಕೂಲವಾದ್ದರಿಂದ ನಾವು ಆಯಾ ಸರಕಾರದವರನ್ನು ಅಭಿನಂದಿಸುವದು ನಮ್ಮ ಕರ್ತವ್ಯ.

ಸಾಹಿತ್ಯ ಪರಿಷತ್ ಸಂಸ್ಥೆಯನ್ನು ಸದಸ್ಯ ಸಂಖ್ಯೆ, ಧನ, ಕಾರ್ಯಕರ್ತರು ಇವುಗಳಿಂದ ಹೆಚ್ಚು ಬಲವುಳ್ಳದ್ದನ್ನಾಗಿ ಮಾಡಲಿಕ್ಕೆಬೇಕು.

ನಮ್ಮ ಸಾಹಿತ್ಯ ಪರಿಷತ್ತಿನ ಉದ್ದೇಶ ಮಾಲಿಕೆಯನ್ನು ನೋಡಿದರೆ ಕನ್ನಡ ಸಾಹಿತ್ಯದ ಬಗ್ಗೆ ಇದಕ್ಕೂ ಹೆಚ್ಚಿನದೇನಾದರೂ ಆಗಬೇಕು ಎಂದು ಹೇಳುವಂತೆ ಏನೂ ಉಳಿದಿಲ್ಲ. ಆ ಉದ್ದೇಶಗಳಲ್ಲಿಯ ಹಲವನ್ನೆತ್ತಿ ಸಾಧಿಸಲು ಯತ್ನಿಸುವದು ಅವಶ್ಯ ಎಂದು ಹೇಳಬಹುದು.

ಕನ್ನಡದಲ್ಲಿ ಅತ್ಯುಚ್ಚ ಸಾಹಿತ್ಯವು ನಿರ್ಮಾಣವಾಗಬೇಕೆಂದು ನಾವು ಬಯಸುವಂತೆ, ಕರ್ನಾಟಕದಲ್ಲಿಯ ಪ್ರತಿಯೊಬ್ಬನಿಗೆ ಕನ್ನಡ ಓದು ಬರಹವು ಬರುವಂತೆ ಮತ್ತು ಸರ್ವಸಾಮಾನ್ಯ ಜ್ಞಾನವೆಲ್ಲ ಅವನಿಗೆ ಕನ್ನಡದಲ್ಲಿ ದೊರಕುವಂತೆ ವ್ಯವಸ್ಥೆ ಮಾಡುವದು ನಮ್ಮ ಕರ್ತವ್ಯವೆಂದು ನಾವು ತಿಳಿದು ಸಾಗಲಿಕ್ಕೆಬೇಕು. ಈ ವಿಷಯದತ್ತ ನಾವು ಇನ್ನೂ ಅಷ್ಟು ಲಕ್ಷ್ಯಕೊಟ್ಟಿಲ್ಲ. ಕೊನೆಗೆ ಸರಕಾರದವರೇ ಇಂಥ ಕೆಲಸಗಳನ್ನು ಕೈಗೊಳ್ಳಬೇಕಾಗುತ್ತದೆ ಎಂಬ ಮಾತು ನಿಜ. ಆದರೆ ಸರಕಾರವು ಈ ಕೆಲಸವನ್ನು ಕೈಗೊಳ್ಳುವಂತೆ ಮಾಡುವದು ನಮ್ಮ ದೀರ್ಘಪ್ರಯತ್ನದಿಂದಲೇ ಶಕ್ಯವು. ಬರೇ ನಾಲ್ಕು ಒಳ್ಳೇ ಕಾವ್ಯ ಪುಸ್ತಕಗಳು ಹೊರಟರೆ ಅದರಿಂದ ನಮ್ಮ ಉದ್ಧಾರವಾಗುವುದಿಲ್ಲ. ಜನಸಾಮಾನ್ಯರ ಕಾಲವಿದು. ಆದುದರಿಂದ ಎಲ್ಲರಿಗೂ ನುಡಿಯ ಜ್ಞಾನವಾದಾಗಲೆ ಮುಂದೆ ಆ ತಳಹದಿಯಮೇಲೆ ನಮ್ಮ ಸಾಹಿತ್ಯಮಂದಿರವನ್ನು ಸುವ್ಯವಸ್ಥಿತವಾಗಿ ಕಟ್ಟಲು ಆಸ್ಪದವಿರುವದು.

ಅಖಿಲ ಕನ್ನಡ ಮತ್ತು ತತ್ಸಂಬಂಧದ ಪುಸ್ತಕಗಳು ಹಾಗೂ ಹಸ್ತಪ್ರತಿಗಳ ಸಂಪೂರ್ಣ ಪುಸ್ತಕಾಲಯವೊಂದು ನಮಗೆ ಅವಶ್ಯ. ಮೈಸೂರು ವಿಶ್ವವಿದ್ಯಾಲಯದವರು ಆ ರೀತಿ ಪ್ರಯತ್ನಮಾಡುತ್ತ ಹೋದಲ್ಲಿ ಅದು ಬೇಗ ಆಗುವದು ಕಠಿಣವಲ್ಲ. ಈಗ ಧಾರವಾಡದಲ್ಲಿ ಮುಂಬೈ ಸರಕಾರದವರು ಕನ್ನಡ ಸಂಶೋಧನೆಯ ಬಗ್ಗೆ ಒಂದು ಸಂಸ್ಥೆಯನ್ನು ಹೊರಡಿಸಬೇಕೆಂದಿದ್ದಾರೆ. ಅದರಲ್ಲಿಯೂ ಒಂದು ಪುಸ್ತಕಾಲಯದ ಯೋಜನೆ ಇದೆ. ಅಲ್ಲಿಯೂ ಪ್ರಯತ್ನಪಟ್ಟರೆ ಫಲಕಾರಿಯಾಗಬಹುದು.

ಮೈಸೂರು ವಿಶ್ವವಿದ್ಯಾಲಯವನ್ನೇ ಅಖಿಲ ಕರ್ನಾಟಕ ವಿಶ್ವವಿದ್ಯಾಲಯವನ್ನು ಮಾಡುವ ವಿಚಾರವು ಒಮ್ಮೆ ಒಳ್ಳೆ ಜೋರಿನಿಂದ ಸಾಗಿ ಮುಂದೆ ಅದು ಮತ್ತೆ ತಣ್ಣಗಾಗಿದೆ. ಈ ಪ್ರಯತ್ನವನ್ನು ಪುನಃ ಮಾಡುವದು ಅವಶ್ಯವಿದೆ. ಅದೇ ರೀತಿ ಮುಂಬೈ ಇಲಾಖೆಯವರು ಹಾಗೂ ಮುಂಬೈ ವಿಶ್ವವಿದ್ಯಾಲಯದವರು ಈ ತತ್ವವನ್ನು ಒಪ್ಪಿರುವರು. ಆದರೆ ಅದು ಎಂದು ಆಗುವದೋ ತಿಳಿಯದು. ಈಗ ಇದ್ದ ವಿಶ್ವವಿದ್ಯಾಲಯಗಳಲ್ಲಿ ಕನ್ನಡಕ್ಕೆ ತಕ್ಕುದಾದ ಶ್ರೇಷ್ಠ ಸ್ಥಾನವು ಸಿಕ್ಕುವಂತೆ ನಾವು ಆಂದೋಲನವನ್ನು ನಡಸಲಿಕ್ಕೆಬೇಕು. ಮೈಸೂರು ವಿಶ್ವವಿದ್ಯಾಲಯದಲ್ಲಿ ಕೂಡ ಇನ್ನೂ ಕನ್ನಡಕ್ಕೆ ಮುಖ್ಯ ಸ್ಥಾನವಿಲ್ಲ.

ಇದೇ ಸಂದರ್ಭದಲ್ಲಿ ಪ್ರೊ. ವಿಜಯೇಂದ್ರರಾವ್ ಇವರ ಅಧ್ಯಕ್ಷತೆಯಲ್ಲಿ, ಕರ್ನಾಟಕ ಪ್ರಾಂತಿಕ ಕಾಂಗ್ರೆಸ್ ಕಮಿಟಿಯ ಪರವಾಗಿ ಧಾರವಾಡದಲ್ಲಿ ಹೋದ ೮-೯ನೆಯ ತಾರೀಖಿನ ದಿವಸ ನೆರೆದ ಕರ್ನಾಟಕ ಶಿಕ್ಷಣ ಪರಿಷತ್ತಿನವರು ನೇಮಿಸಿದ ಮಂಡಳಕ್ಕೆ ನಾವೆಲ್ಲರೂ ಸಹಾಯ ಮಾಡುವದು ಅತ್ಯವಶ್ಯವಿರುವದು.

ಕರ್ನಾಟಕ ಗಡಿನಾಡುಗಳ ಸಮಸ್ಯೆಯೊಂದು ನಮ್ಮೆದುರಿಗೆ ಮೇಲಿಂದ ಮೇಲೆ ಬರುತ್ತಿದೆ. ನನಗೆ ತಿಳಿದ ಮಟ್ಟಿಗೆ, ಅಲ್ಲಿ ಹೋಗಿ ದೊಡ್ಡ ಉಪನ್ಯಾಸಗಳನ್ನು ಕೊಟ್ಟು ಬಂದರೆ ಸದ್ಯಕ್ಕೆ ವಿಶೇಷ ಉಪಯೋಗವಾಗುವದು. ಅಲ್ಲಿ ಹೋಗಿ ಒಂದು ಶಾಲೆಯನ್ನೊ, ವಾಚನಾಲಯವನ್ನೊ ಹೊರಡಿಸಿ ಕನ್ನಡದ ಅಭಿರುಚಿಯನ್ನು ಹುಟ್ಟಿಸುವ, ಶಾಂತ ತಾತ್ವಿಕ ಕಾರ್ಯದ ಅವಶ್ಯಕತೆ ಈಗಿದೆ ಎಂದು ನನ್ನ

# ಪರಿಷತ್ತಿನ ಸುದ್ದಿ

## ಕಾರ್ಯಸಮಿತಿಯ ಅಧಿವೇಶನ

ಹೊಸ ಕಾರ್ಯಸಮಿತಿಯ ಸದಸ್ಯರು ಕಳೆದ ಡಿಸೆಂಬರ್ ೩೧ನೆಯ ತಾರೀಖಿನ ದಿನ ಬಳ್ಳಾರಿಯಲ್ಲಿ ಸಭೆ ಸೇರಿ ಕೆಲವು ಆಡಳಿತ ವಿಚಾರಗಳನ್ನೂ, ಪ್ರಾಂತ ಸಮಿತಿಗಳನ್ನು ಶೀಘ್ರದಲ್ಲಿಯೇ ಸಿದ್ಧಪಡಿಸುವುದಕ್ಕೆ ಬೇಕಾದ ಏರ್ಪಾಟುಗಳನ್ನೂ ನಿರ್ಣಯಿಸಿದರು.

## ಕನ್ನಡ ಪಠ್ಯಪುಸ್ತಕ ಸಮಿತಿ

ಮೇಲೆಕಂಡ ಸಮಿತಿ ೩೧ನೆಯ ತಾರೀಖು ಬಳ್ಳಾರಿಯಲ್ಲಿ ಸಭೆ ಸೇರಿ ಕನ್ನಡನಾಡಿಗೆಲ್ಲಾ ಒಂದೇ ಪಾಠಸಿಯಾಮಕ ಸಮಿತಿ (one Federal Text Book Committee for all Karnataka) ಇರಬೇಕೆಂಬ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಿ ಕೆಲವು ನಿರ್ಣಯಗಳನ್ನು ಮಾಡಿತು. ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರೂ, ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಪರವಾಗಿ ಶ್ರೀ॥ ಬೆಳ್ಳಾವೆ ನರಹರಿ ಶಾಸ್ತ್ರಿಗಳವರೂ, ಬೊಂಬಾಯಿ ಸರಕಾರದ ಪರವಾಗಿ ಧಾರವಾಡದ ಪ್ರೊ॥ ಎಸ್. ಎಸ್. ಮಾಳವಾಡರವರೂ, ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರೂ ಅಧಿವೇಶನದಲ್ಲಿ ಭಾಗವಹಿಸಿದ್ದರು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ಸಭಾಪತಿಗಳಾಗಿದ್ದರು. ಸಭಾಪತಿಗಳು ಕೋರಿದ ಮೇರೆಗೆ ಶ್ರೀ॥ ಗಳಾದ ಪಿ. ಸೀತಾರಾಮಯ್ಯನವರೂ, ಕೆ. ಎಸ್. ಕಾರಂತರೂ, ದ. ರಾ. ಬೇಂದ್ರೆಯವರೂ, ರಂಗಪ್ಪ ಪೊದ್ದಾರರವರೂ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳೂ ಅಧಿವೇಶನದಲ್ಲಿ ಹಾಜರಿದ್ದು ಉಪಯುಕ್ತವಾದ ಸಲಹೆಗಳನ್ನು ಕೊಟ್ಟರು. ಸಮಿತಿಯ ಸಲಹೆ ಸೂಚನೆಗಳನ್ನು ಕಾಲಕ್ರಮದಲ್ಲಿ ಪ್ರಕಟಿಸಲಾಗುವುದು.

## ಈ ವರ್ಷದ ಲೆಕ್ಕಶೋಧಕರು

ಬಳ್ಳಾರಿಯಲ್ಲಿ ನಡೆದ ಸಕಲ ಸದಸ್ಯ ವಾರ್ಷಿಕಾಧಿವೇಶನದಲ್ಲಿ ಶ್ರೀ॥ ಎಂ. ಎ. ನರಸಿಂಹಾಚಾರ್ಯರವರೇ ಈ ವರ್ಷಕ್ಕೂ ಪರಿಷತ್ತಿನ ಲೆಕ್ಕಶೋಧಕರಾಗಿ ಆಯ್ದು ಬಂದಿದ್ದಾರೆ.

# ಕನ್ನಡ ಸುದ್ದಿ

## ಮೈಸೂರಿನ ರಾಜನುನೆತನದ ಪ್ರಶಂಸೆ

ಡಿಸೆಂಬರ್ ೩೦ನೆಯ ತಾರೀಖಿನ ದಿನ ಮದರಾಸಿನಲ್ಲಿರುವ 'ಮೈಸೂರು ಕೆಫೆ'ಯಲ್ಲಿ ಮೈಸೂರು ಶ್ರೀಮನ್ಮಹಾರಾಜರವರ, ಶ್ರೀಮದ್ಯುವರಾಜರವರ ಮತ್ತು ಶ್ರೀ ಜಯಚಾಮರಾಜ ಒಡೆಯರವರ ಭಾವಚಿತ್ರಗಳ ಅನಾವರಣೋತ್ಸವವು ನಡೆಯಿತು. ಡಾ॥ ಯು. ರಾಮರಾಯರು ಸಭಾಧ್ಯಕ್ಷತೆ ವಹಿಸಿದ್ದರು. ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಅವರು ಭಾವಚಿತ್ರಗಳನ್ನು ಅನಾವರಣ ಮಾಡುತ್ತ ಶ್ರೀಮನ್ಮಹಾರಾಜರವರಿಗೂ, ಶ್ರೀಮದ್ಯುವರಾಜರವರಿಗೂ, ಶ್ರೀಮದ್ಯುವರಾಜ ಕುಮಾರರಿಗೂ ತಮ್ಮ ಹೃದಯಪೂರ್ವಕವಾದ ಪ್ರಶಂಸೆಯನ್ನು ಸಮರ್ಪಿಸಿದರು. ಅವರು ಶ್ರೀಮನ್ಮಹಾರಾಜರವರನ್ನು ಕುರಿತು—'ಶ್ರೀಮನ್ಮಹಾರಾಜರವರು ಸರ್ವ ರೀತಿಯಲ್ಲೂ ಆದರ್ಶಪ್ರಭುಗಳಾಗಿದ್ದಾರೆ. ಮಹಾಸ್ವಾಮಿಯವರಂತೆ ಸಮಗ್ರ ಭರತಖಂಡದಲ್ಲಿ ತೀರ್ಥಯಾತ್ರೆ ಮಾಡಿರುವ ಭಾರತೀಯ ರಾಜರು ಮತ್ತೊಬ್ಬರಿಲ್ಲ. ಹಿಂದೂ ಧರ್ಮವನ್ನು ಅವರು ಒಂದು ಸಂಪ್ರದಾಯವೆಂದು ತಿಳಿದಿಲ್ಲ. ವೈದಿಕಧರ್ಮ ಅವರ ಸರ್ವಸ್ವವಾಗಿದೆ. ಇತರ ಧರ್ಮಗಳಲ್ಲಿ ಅವರಿಗಿರುವ ಸಮದೃಷ್ಟಿ ಅನ್ಯಾದೃಶವಾದುದು' ಎಂಬುದಾಗಿ ಹೇಳಿದರು.

## ಮದರಾಸು ಸಂಗೀತ ಸಮ್ಮೇಳನದಲ್ಲಿ ಶ್ರೀಮದ್ಯುವರಾಜರವರ ಪ್ರಶಂಸೆ

ಕಳೆದ ಡಿಸೆಂಬರ್ ೨೩ನೆಯ ತಾರೀಖಿನ ದಿವಸ ಮದರಾಸಿನಲ್ಲಿ, ಮದರಾಸು ಸಂಗೀತ ಪರಿಷತ್ತಿನ ೧೨ನೆಯ ವಾರ್ಷಿಕಾಧಿವೇಶನವನ್ನು ಮೈಸೂರಿನ ಶ್ರೀಮದ್ಯುವರಾಜರವರು ಆರಂಭಗೊಳಿಸುತ್ತ ಸ್ಫೂರ್ತಿದಾಯಕವಾದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಶ್ರೀ॥ ಎಸ್. ಸತ್ಯಮೂರ್ತಿಯವರು ಶ್ರೀಮದ್ಯುವರಾಜರವರಿಗೆ ವಂದನೆಗಳನ್ನು ಸಮರ್ಪಿಸುತ್ತಾ, ಶ್ರೀಮದ್ಯುವರಾಜರವರು ಭಾರತೀಯ ಸಂಸ್ಕೃತಿಯ ಪುನರುಜ್ಜೀವನದಲ್ಲಿ ತಮಗೆ ವಿಶೇಷ ಆಸಕ್ತಿಯಿರುವುದರಿಂದ ತಾವು ಈ ಸಮಾರಂಭದಲ್ಲಿ ಭಾಗವಹಿಸಿದುದಾಗಿ ಅಪ್ಪಣೆ ಕೊಡಿಸಿದ್ದು ಎಲ್ಲರ ಅಂತಃಕರಣದಲ್ಲೂ ಪರಿಣಾಮವನ್ನುಂಟು ಮಾಡಿವೆಯೆಂದೂ, ಶ್ರೀಮದ್ಯುವರಾಜರವರೂ ಅವರ ಪೂಜ್ಯಸಹೋದರರಾದ ಶ್ರೀಮನ್ಮಹಾರಾಜರವರೂ ಕರ್ನಾಟಕ ಸಂಗೀತದಲ್ಲಿ ವಿಶೇಷ ಆಸಕ್ತಿ ವಹಿಸಿರುವುದು ಎಲ್ಲರಿಗೂ ತಿಳಿದ ಸಂಗತಿಯೆಂದೂ ಹೇಳಿದರು.

## ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನ : ಕನ್ನಡದಲ್ಲಿ ಕಾರ್ಯಕಲಾಪ

ಅಖಿಲ ಕರ್ನಾಟಕದ ಆಯುರ್ವೇದ ಸಮ್ಮೇಳನದ ೧೦ನೆಯ ಅಧಿವೇಶನ ಈ ಸಲ ಬಳ್ಳಾರಿಯಲ್ಲಿ, ಸಾಹಿತ್ಯ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ, ಮೈಸೂರಿನ ಆಯುರ್ವೇದ ಮತ್ತು ಯುನಾನಿ ಕಾಲೇಜಿನ ಪ್ರಿನ್ಸಿಪಾಲರವರಾದ ಡಾ॥ ವೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಸಮ್ಮೇಳನದ ಅಧ್ಯಕ್ಷರು ಕನ್ನಡದಲ್ಲಿ ಭಾಷಣ ಮಾಡಿದ್ದಲ್ಲದೆ, ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲಿ ಆಯುರ್ವೇದ ಮಹಾಪಾಠಶಾಲೆಗಳು ಸ್ಥಾಪಿತವಾಗಬೇಕೆಂದೂ ಅಲ್ಲೆಲ್ಲಾ ಬೋಧನೆ ಕನ್ನಡದ ಮೂಲಕವೇ ನಡೆಯುವಂತೆ ಏರ್ಪಾಟಾಗಬೇಕೆಂದೂ ಸೂಚಿಸಿರುವುದು ಅಭಿನಂದನೀಯವಾಗಿದೆ. ಸಮ್ಮೇಳನದ ನಡವಳಿಕೆಗಳೆಲ್ಲ ಕನ್ನಡದಲ್ಲಿಯೇ ನಡೆಯಿತೆಂಬುದೂ ಸಂತೋಷದ ಸಂಗತಿಯಾಗಿದೆ.

## ಬೋಧಕ ಭಾಷೆ ಕನ್ನಡ

ಡಿಸೆಂಬರ್ ೨೫ ರಲ್ಲಿ ಮಂಗಳೂರಿನ ಕೆನರಾ ಹೈಸ್ಕೂಲಿನ ವಾರ್ಷಿಕೋತ್ಸವ ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರವರಾದ ರಾಜಕಾರ್ಯಪ್ರವೀಣ ಶ್ರೀ॥ ಎನ್. ಎಸ್. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ನೆರವೇರಿತು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ, ಮೈಸೂರಿನ ಪ್ರಯೋಗ ತೃಪ್ತಿಕರವಾಗಿದೆಯೆಂದೂ ಕನ್ನಡೇತರ ವಿಷಯಗಳನ್ನು ಕನ್ನಡದಲ್ಲಿಯೇ ಬೋಧಿಸಬೇಕೆಂದೂ ಅಭಿಪ್ರಾಯಪಟ್ಟರು.

## ಮಾತೃಭಾಷೆಯಲ್ಲಿ ಶಿಕ್ಷಣ

ಡಿಸೆಂಬರ್ ೨೭ರಿಂದ ೩೦ರ ವರೆಗೆ ಬೊಂಬಾಯಿಯಲ್ಲಿ ಅಖಿಲಭಾರತ ಶಿಕ್ಷಣ ಪರಿಷತ್ತು ನಡೆಯಿತು. ಎಲ್ಲ ತರಗತಿಗಳ ಶಿಕ್ಷಣವೂ ಮಾತೃಭಾಷೆಯಲ್ಲಿಯೇ ನಡೆಯತಕ್ಕದ್ದೆಂಬ ಬಗ್ಗೆ ಒಂದು ಗೊತ್ತುವಳಿಯಾಯಿತು.

## ವೀರಶೈವ ಮಹಾಸಭೆ

ಅಖಿಲ ಭಾರತ ವೀರಶೈವ ಮಹಾಸಭೆಯ ೧೩ನೆಯ ಅಧಿವೇಶನವು ಡಿಸೆಂಬರ್ ೨೬ನೆಯ ತಾರೀಖಿನಿಂದ ಮೊದಲುಗೊಂಡು ಮೂರು ದಿನ ಹುಬ್ಬಳ್ಳಿಯಲ್ಲಿ ವಿಜೃಂಭಣೆಯಿಂದ ನಡೆಯಿತು. ಕನ್ನಡದ ಅಭಿಮಾನಿಗಳಾದ ಪ್ರೊ॥ ಎಸ್. ಎಸ್. ಬಸವನಾಳ ಅವರು ಮಹಾಸಭೆಯ ಅಧ್ಯಕ್ಷರಾಗಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಹಾಸಭೆಯ ಬೆಳವಣಿಗೆಯನ್ನು ವಿವರಿಸಿ ವೀರಶೈವರಲ್ಲಿ ಒಕ್ಕಟ್ಟು ಉಂಟಾಗಬೇಕೆಂದು ಕೋರಿ, ಪ್ರತ್ಯೇಕ ಕರ್ನಾಟಕ ಪ್ರಾಂತರಚನೆಯ ಆವಶ್ಯಕತೆಯನ್ನು ಕುರಿತು ಒತ್ತಿ ಹೇಳಿದರು. ರಾಷ್ಟ್ರೀಯ ಭಾವನೆಯ ಬೆಳವಣಿಗೆಗೆ ಪೋಷಕವಾದ ಹಲವು ಗೊತ್ತುವಳಿಗಳು ಸ್ವೀಕೃತವಾದುವು.

## ಬೊಂಬಾಯಿನ ಶ್ರೀ॥ ಕೆ. ರಾಮಸ್ವಾಮಿಯವರಿಗೆ ಬಿರುದು

ಕನ್ನಡದ ಅಭಿಮಾನಿಗಳಾದ, ಬೊಂಬಾಯಿನಲ್ಲಿರುವ ಮೈಸೂರಿನವರ ಮುಖಂಡರಾದ ರಾವ್ ಬಹದ್ದೂರ್ ಕೆ. ರಾಮಸ್ವಾಮಿಯವರಿಗೆ ಸಾರ್ವಭೌಮ ಸರ್ಕಾರದವರು "ದಿವಾನ್ ಬಹದ್ದೂರ್" ಎಂಬ ಹೊಸವರ್ಷದ ಮನ್ನಣೆಯ ಬಿರುದು ಕೊಟ್ಟು ಗೌರವಿಸಿರುತ್ತಾರೆ. ಅವರಿಗೆ ಅಭಿನಂದನೆಗಳು.

## ಸೊಂಡೂರಿನಲ್ಲಿ ಶ್ರೀ॥ ಸಂಪತ್ಕುಮಾರಾಚಾರ್ಯರ ಭಾರತವಾಚನ

ಇದೇ ತಾ॥ ೧ರಲ್ಲಿ ಸೊಂಡೂರು ಮಹಾರಾಜರ ದರ್ಬಾರು ಭವನದಲ್ಲಿ ಗಮಕಿ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರು 'ಕುಮಾರವ್ಯಾಸ ಭಾರತ'ವನ್ನು ವಾಚನಮಾಡಿ, ಕನ್ನಡ ಸಾಹಿತ್ಯದ ಪ್ರಾಮುಖ್ಯತೆಯನ್ನು ಕುರಿತು ಮಾತಾಡಿದರೆಂದು ತಿಳಿಯಬರುತ್ತದೆ.

## ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘ : ಉಪನ್ಯಾಸ ಮಾಲೆ

ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘದವರು ಕಳೆದ ಡಿಸೆಂಬರ್ ೨೩ರಿಂದ ೨೭ರ ವರೆಗೆ ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲೂ, ಇದೇ ಜನವರಿ ೨ರಿಂದ ೭ರ ವರೆಗೆ ದಾವಣಗೆರೆಯ ಶಿವಯೋಗಿ ಆಶ್ರಮದ ಆಶ್ರಯದಲ್ಲೂ ೧೮ ಮತ್ತು ೧೯ನೆಯ ಕನ್ನಡ ಉಪನ್ಯಾಸ ಮಾಲೆಗಳನ್ನು ನೆರವೇರಿಸಿದರು.

## ಹರೀಶ್ವರ ಜಯಂತ್ಯುತ್ಸವ

ಚೆನ್ನರಾಯಪಟ್ಟಣದ ಕರ್ನಾಟಕ ಸಂಘದ ಆಶ್ರಯದಲ್ಲಿ ಕಳೆದ ಡಿಸೆಂಬರ್ ೨೫ರಲ್ಲಿ, ಸಂಘದ ಅಧ್ಯಕ್ಷರಾದ ಶ್ರೀ॥ ಎಸ್. ಎಂ. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರ ಕವಿಯ ಜಯಂತ್ಯುತ್ಸವ ವಿಜೃಂಭಣೆಯಿಂದ ನೆರವೇರಿತೆಂದು ತಿಳಿಯಬರುತ್ತದೆ.

---

## ಕೃತಜ್ಞತೆ

ಕನ್ನಡ ನಾಡಿನ ಭೂಪಟದ ಚಿತ್ರದ ಪಡಿಯಚ್ಚನ್ನು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರೂ, ಸೊಂಡೂರು ಮಹಾರಾಜರ ಭಾವಚಿತ್ರದ ಪಡಿಯಚ್ಚನ್ನು 'ವಿಶ್ವಕರ್ನಾಟಕ'ದ ಸಂಪಾದಕರೂ, ಸೊಂಡೂರು ಮಹಾರಾಜರು ಆನೆಯ ಮೇಲೆ ಅಂಬಾರಿಯಲ್ಲಿ ಮಂಡಿಸಿರುವ ಚಿತ್ರದ ಪಡಿಯಚ್ಚು ಮತ್ತು ಸ್ವಾಗತಾಧ್ಯಕ್ಷರು, ಸೊಂಡೂರು ಮಹಾರಾಜರು, ಸಮ್ಮೇಳನಾಧ್ಯಕ್ಷರು ಇವರುಗಳಿರುವ ಚಿತ್ರದ ಪಡಿಯಚ್ಚು ಇವೆರಡನ್ನೂ 'ತಾಯಿನಾಡು' ಪತ್ರಿಕೆಯ ಸಂಪಾದಕರೂ ಕೃಪೆಮಾಡಿ ಕೊಟ್ಟು ಉಪಕಾರಮಾಡಿರುತ್ತಾರೆ. ಇವರಿಗೆಲ್ಲ 'ಕನ್ನಡ ನುಡಿ' ಕೃತಜ್ಞತೆಯುಳ್ಳದ್ದಾಗಿದೆ.

ಬೆಂಗಳೂರು ಸುಬೋಧ ಎಲೆಕ್ಟ್ರಿಕ್ ಪ್ರೆಸ್ ಅಲ್ಲ — ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ,
ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.

# ಪರಿಷತ್ತಿನ ಸುದ್ದಿ

## ಕಾರ್ಯಸಮಿತಿಯ ಅಧಿವೇಶನ

ಹೊಸ ಕಾರ್ಯಸಮಿತಿಯ ಸದಸ್ಯರು ಕಳೆದ ಡಿಸೆಂಬರ್ ೩೧ನೆಯ ತಾರೀಖಿನ ದಿನ ಬಳ್ಳಾರಿಯಲ್ಲಿ ಸಭೆ ಸೇರಿ ಕೆಲವು ಆಡಳಿತ ವಿಚಾರಗಳನ್ನೂ, ಪ್ರಾಂತ ಸಮಿತಿಗಳನ್ನು ಶೀಘ್ರದಲ್ಲಿಯೇ ಸಿದ್ಧಪಡಿಸುವುದಕ್ಕೆ ಬೇಕಾದ ಏರ್ಪಾಟುಗಳನ್ನೂ ನಿರ್ಣಯಿಸಿದರು.

## ಕನ್ನಡ ಪಠ್ಯಪುಸ್ತಕ ಸಮಿತಿ

ಮೇಲೆಕಂಡ ಸಮಿತಿ ೩೧ನೆಯ ತಾರೀಖು ಬಳ್ಳಾರಿಯಲ್ಲಿ ಸಭೆ ಸೇರಿ ಕನ್ನಡ ನಾಡಿಗೆಲ್ಲಾ ಒಂದೇ ಪಾಠಸಿಯಾಮಕ ಸಮಿತಿ (one Federal Text Book Committee for all Karnataka) ಇರಬೇಕೆಂಬ ವಿಚಾರವನ್ನು ಕೂಲಂಕಷವಾಗಿ ಚರ್ಚಿಸಿ ಕೆಲವು ನಿರ್ಣಯಗಳನ್ನು ಮಾಡಿತು. ಮೈಸೂರು ವಿಶ್ವವಿದ್ಯಾನಿಲಯದ ಪರವಾಗಿ ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರೂ, ಮೈಸೂರು ವಿದ್ಯಾಭ್ಯಾಸದ ಇಲಾಖೆಯ ಪರವಾಗಿ ಶ್ರೀ॥ ಬೆಳ್ಳಾವೆ ನರಹರಿ ಶಾಸ್ತ್ರಿಗಳವರೂ, ಬೊಂಬಾಯಿ ಸರಕಾರದ ಪರವಾಗಿ ಧಾರವಾಡದ ಪ್ರೊ॥ ಎಸ್. ಎಸ್. ಮಾಳವಾಡರವರೂ, ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ॥ ಸಿ. ಕೆ. ವೆಂಕಟರಾಮಯ್ಯನವರೂ ಅಧಿವೇಶನದಲ್ಲಿ ಭಾಗವಹಿಸಿದ್ದರು. ಪರಿಷತ್ತಿನ ಉಪಾಧ್ಯಕ್ಷರಾದ ರಾಜಸೇವಾಸಕ್ತ ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರು ಸಭಾಪತಿಗಳಾಗಿದ್ದರು. ಸಭಾಪತಿಗಳು ಕೋರಿದ ಮೇರೆಗೆ ಶ್ರೀ॥ ಗಳಾದ ವಿ. ಸೀತಾರಾಮಯ್ಯನವರೂ, ಕೆ. ಎಸ್. ಕಾರಂತರೂ, ದ. ರಾ. ಬೇಂದ್ರೆಯವರೂ, ರಂಗಪ್ಪ ಪೊದ್ದಾರರವರೂ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳೂ ಅಧಿವೇಶನದಲ್ಲಿ ಹಾಜರಿದ್ದು ಉಪಯುಕ್ತವಾದ ಸಲಹೆಗಳನ್ನು ಕೊಟ್ಟರು. ಸಮಿತಿಯ ಸಲಹೆ ಸೂಚನೆಗಳನ್ನು ಕಾಲಕ್ರಮದಲ್ಲಿ ಪ್ರಕಟಿಸಲಾಗುವುದು.

## ಈ ವರ್ಷದ ಲೆಕ್ಕಶೋಧಕರು

ಬಳ್ಳಾರಿಯಲ್ಲಿ ನಡೆದ ಸಕಲ ಸದಸ್ಯ ವಾರ್ಷಿಕಾಧಿವೇಶನದಲ್ಲಿ ಶ್ರೀ॥ ಎಂ. ಎ. ನರಸಿಂಹಾಚಾರ್ಯರವರೇ ಈ ವರ್ಷಕ್ಕೂ ಪರಿಷತ್ತಿನ ಲೆಕ್ಕಶೋಧಕರಾಗಿ ಆಯ್ದು ಬಂದಿದ್ದಾರೆ.

# ಕನ್ನಡ ಸುದ್ದಿ

## ಮೈಸೂರಿನ ರಾಜಮನೆತನದ ಪ್ರಶಂಸೆ

ಡಿಸೆಂಬರ್ ೩೦ನೆಯ ತಾರೀಖಿನ ದಿನ ಮದರಾಸಿನಲ್ಲಿರುವ 'ಮೈಸೂರು ಕೆಫೆ'ಯಲ್ಲಿ ಮೈಸೂರು ಶ್ರೀಮನ್ಮಹಾರಾಜರವರ, ಶ್ರೀಮದ್ಯುವರಾಜರವರ ಮತ್ತು ಶ್ರೀ ಜಯಚಾಮರಾಜ ಒಡೆಯರವರ ಭಾವಚಿತ್ರಗಳ ಅನಾವರಣೋತ್ಸವವು ನಡೆಯಿತು. ಡಾ॥ ಯು. ರಾಮರಾಯರು ಸಭಾಧ್ಯಕ್ಷತೆ ವಹಿಸಿದ್ದರು. ಸರ್. ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್ ಅವರು ಭಾವಚಿತ್ರಗಳನ್ನು ಅನಾವರಣ ಮಾಡುತ್ತ ಶ್ರೀಮನ್ಮಹಾರಾಜರವರಿಗೂ, ಶ್ರೀಮದ್ಯುವರಾಜರವರಿಗೂ, ಶ್ರೀಮದ್ಯುವರಾಜಕುಮಾರರಿಗೂ ತಮ್ಮ ಹೃದಯಪೂರ್ವಕವಾದ ಪ್ರಶಂಸೆಯನ್ನು ಸಮರ್ಪಿಸಿದರು. ಅವರು ಶ್ರೀಮನ್ಮಹಾರಾಜರವರನ್ನು ಕುರಿತು—'ಶ್ರೀಮನ್ಮಹಾರಾಜರವರು ಸರ್ವ ರೀತಿಯಲ್ಲೂ ಆದರ್ಶಪ್ರಭುಗಳಾಗಿದ್ದಾರೆ. ಮಹಾಸ್ವಾಮಿಯವರಂತೆ ಸಮಗ್ರ ಭರತಖಂಡದಲ್ಲಿ ತೀರ್ಥಯಾತ್ರೆ ಮಾಡಿರುವ ಭಾರತೀಯ ರಾಜರು ಮತ್ತೊಬ್ಬರಿಲ್ಲ. ಹಿಂದೂ ಧರ್ಮವನ್ನು ಅವರು ಒಂದು ಸಂಪ್ರದಾಯವೆಂದು ತಿಳಿದಿಲ್ಲ. ವೈದಿಕಧರ್ಮ ಅವರ ಸರ್ವಸ್ವವಾಗಿದೆ. ಇತರ ಧರ್ಮಗಳಲ್ಲಿ ಅವರಿಗಿರುವ ಸಮದೃಷ್ಟಿ ಅಸಾದೃಶವಾದುದು' ಎಂಬುದಾಗಿ ಹೇಳಿದರು.

## ಮದರಾಸು ಸಂಗೀತ ಸಮ್ಮೇಳನದಲ್ಲಿ ಶ್ರೀಮದ್ಯುವರಾಜರವರ ಪ್ರಶಂಸೆ

ಕಳೆದ ಡಿಸೆಂಬರ್ ೨೩ನೆಯ ತಾರೀಖಿನ ದಿವಸ ಮದರಾಸಿನಲ್ಲಿ, ಮದರಾಸು ಸಂಗೀತ ಪರಿಷತ್ತಿನ ೧೨ನೆಯ ವಾರ್ಷಿಕಾಧಿವೇಶನವನ್ನು ಮೈಸೂರಿನ ಶ್ರೀಮದ್ಯುವರಾಜರವರು ಆರಂಭಗೊಳಿಸುತ್ತ ಸ್ಫೂರ್ತಿದಾಯಕವಾದ ಭಾಷಣವನ್ನು ಅಪ್ಪಣೆ ಕೊಡಿಸಿದರು. ಶ್ರೀ॥ ಎಸ್. ಸತ್ಯಮೂರ್ತಿಯವರು ಶ್ರೀಮದ್ಯುವರಾಜರವರಿಗೆ ವಂದನೆಗಳನ್ನು ಸಮರ್ಪಿಸುತ್ತಾ, ಶ್ರೀಮದ್ಯುವರಾಜರವರು ಭಾರತೀಯ ಸಂಸ್ಕೃತಿಯ ಪುನರುಜ್ಜೀವನದಲ್ಲಿ ತಮಗೆ ವಿಶೇಷ ಆಸಕ್ತಿಯಿರುವುದರಿಂದ ತಾವು ಈ ಸಮಾರಂಭದಲ್ಲಿ ಭಾಗವಹಿಸಿದುದಾಗಿ ಅಪ್ಪಣೆ ಕೊಡಿಸಿದ್ದು ಎಲ್ಲರ ಅಂತಃಕರಣದಲ್ಲೂ ಪರಿಣಾಮವನ್ನುಂಟು ಮಾಡಿವೆಯೆಂದೂ, ಶ್ರೀಮದ್ಯುವರಾಜರವರೂ ಅವರ ಪೂಜ್ಯಸಹೋದರರಾದ ಶ್ರೀಮನ್ಮಹಾರಾಜರವರೂ ಕರ್ನಾಟಕ ಸಂಗೀತದಲ್ಲಿ ವಿಶೇಷ ಆಸಕ್ತಿ ವಹಿಸಿರುವುದು ಎಲ್ಲರಿಗೂ ತಿಳಿದ ಸಂಗತಿಯೆಂದೂ ಹೇಳಿದರು.

## ಅಖಿಲ ಕರ್ನಾಟಕ ಆಯುರ್ವೇದ ಸಮ್ಮೇಳನ : ಕನ್ನಡದಲ್ಲಿ ಕಾರ್ಯಕಲಾಪ

ಅಖಿಲ ಕರ್ನಾಟಕದ ಆಯುರ್ವೇದ ಸಮ್ಮೇಳನದ ೧೦ನೆಯ ಅಧಿವೇಶನ ಈ ಸಲ ಬಳ್ಳಾರಿಯಲ್ಲಿ, ಸಾಹಿತ್ಯ ಸಮ್ಮೇಳನಕ್ಕೆ ಪೂರ್ವಭಾವಿಯಾಗಿ, ಮೈಸೂರಿನ ಆಯುರ್ವೇದ ಮತ್ತು ಯುನಾನಿ ಕಾಲೇಜಿನ ಪ್ರಿನ್ಸಿಪಾಲರವರಾದ ಡಾ॥ ವೈ. ಲಕ್ಷ್ಮೀನರಸಿಂಹ ಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ನಡೆಯಿತು. ಸಮ್ಮೇಳನದ ಅಧ್ಯಕ್ಷರು ಕನ್ನಡದಲ್ಲಿ ಭಾಷಣ ಮಾಡಿದ್ದಲ್ಲದೆ, ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲಿ ಆಯುರ್ವೇದ ಮಹಾಪಾಠಶಾಲೆಗಳು ಸ್ಥಾಪಿತವಾಗಬೇಕೆಂದೂ ಅಲ್ಲೆಲ್ಲಾ ಬೋಧನೆ ಕನ್ನಡದ ಮೂಲಕವೇ ನಡೆಯುವಂತೆ ಏರ್ಪಾಟಾಗಬೇಕೆಂದೂ ಸೂಚಿಸಿರುವುದು ಅಭಿನಂದನೀಯವಾಗಿದೆ. ಸಮ್ಮೇಳನದ ನಡವಳಿಕೆಗಳೆಲ್ಲ ಕನ್ನಡದಲ್ಲಿಯೇ ನಡೆಯಿತೆಂಬುದೂ ಸಂತೋಷದ ಸಂಗತಿಯಾಗಿದೆ.

## ಬೋಧಕ ಭಾಷೆ ಕನ್ನಡ

ಡಿಸೆಂಬರ್ ೨೫ ರಲ್ಲಿ ಮಂಗಳೂರಿನ ಕೆನರಾ ಹೈಸ್ಕೂಲಿನ ವಾರ್ಷಿಕೋತ್ಸವ ಮೈಸೂರು ವಿಶ್ವವಿದ್ಯಾನಿಲಯದ ವೈಸ್ ಛಾನ್ಸಲರವರಾದ ರಾಜಕಾರ್ಯಪ್ರವೀಣ ಶ್ರೀ॥ ಎನ್. ಎಸ್. ಸುಬ್ಬರಾಯರ ಅಧ್ಯಕ್ಷತೆಯಲ್ಲಿ ನೆರವೇರಿತು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ, ಮೈಸೂರಿನ ಪ್ರಯೋಗ ತೃಪ್ತಿಕರವಾಗಿದೆಯೆಂದೂ ಕನ್ನಡೇತರ ವಿಷಯಗಳನ್ನು ಕನ್ನಡದಲ್ಲಿಯೇ ಬೋಧಿಸಬೇಕೆಂದೂ ಅಭಿಪ್ರಾಯಪಟ್ಟರು.

## ಮಾತೃಭಾಷೆಯಲ್ಲಿ ಶಿಕ್ಷಣ

ಡಿಸೆಂಬರ್ ೨೭ರಿಂದ ೩೦ರ ವರೆಗೆ ಬೊಂಬಾಯಿಯಲ್ಲಿ ಅಖಿಲಭಾರತ ಶಿಕ್ಷಣ ಪರಿಷತ್ತು ನಡೆಯಿತು. ಎಲ್ಲ ತರಗತಿಗಳ ಶಿಕ್ಷಣವೂ ಮಾತೃಭಾಷೆಯಲ್ಲಿಯೇ ನಡೆಯತಕ್ಕದ್ದೆಂಬ ಬಗ್ಗೆ ಒಂದು ಗೊತ್ತುವಳಿಯಾಯಿತು.

## ವೀರಶೈವ ಮಹಾಸಭೆ

ಅಖಿಲ ಭಾರತ ವೀರಶೈವ ಮಹಾಸಭೆಯ ೧೩ನೆಯ ಅಧಿವೇಶನವು ಡಿಸೆಂಬರ್ ೨೬ನೆಯ ತಾರೀಖಿನಿಂದ ಮೊದಲುಗೊಂಡು ಮೂರು ದಿನ ಹುಬ್ಬಳ್ಳಿಯಲ್ಲಿ ವಿಜೃಂಭಣೆಯಿಂದ ನಡೆಯಿತು. ಕನ್ನಡದ ಅಭಿಮಾನಿಗಳಾದ ಪ್ರೊ॥ ಎಸ್. ಎಸ್. ಬಸವನಾಳ ಅವರು ಮಹಾಸಭೆಯ ಅಧ್ಯಕ್ಷರಾಗಿದ್ದರು. ಅವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಮಹಾಸಭೆಯ ಬೆಳವಣಿಗೆಯನ್ನು ವಿವರಿಸಿ ವೀರಶೈವರಲ್ಲಿ ಒಕ್ಕಟ್ಟು ಉಂಟಾಗಬೇಕೆಂದು ಕೋರಿ, ಪ್ರತ್ಯೇಕ ಕರ್ನಾಟಕ ಪ್ರಾಂತರಚನೆಯ ಆವಶ್ಯಕತೆಯನ್ನು ಕುರಿತು ಒತ್ತಿ ಹೇಳಿದರು. ರಾಷ್ಟ್ರೀಯ ಭಾವನೆಯ ಬೆಳವಣಿಗೆಗೆ ಪೋಷಕವಾದ ಹಲವು ಗೊತ್ತುವಳಿಗಳು ಸ್ವೀಕೃತವಾದುವು.

## ಬೊಂಬಾಯಿನ ಶ್ರೀ॥ ಕೆ. ರಾಮಸ್ವಾಮಿಯವರಿಗೆ ಬಿರುದು

ಕನ್ನಡದ ಅಭಿಮಾನಿಗಳಾದ, ಬೊಂಬಾಯಿನಲ್ಲಿರುವ ಮೈಸೂರಿನವರ ಮುಖಂಡರಾದ ರಾವ್ ಬಹದ್ದೂರ್ ಕೆ. ರಾಮಸ್ವಾಮಿಯವರಿಗೆ ಸಾರ್ವಭೌಮ ಸರ್ಕಾರದವರು "ದಿವಾನ್ ಬಹದ್ದೂರ್" ಎಂಬ ಹೊಸವರ್ಷದ ಮನ್ನಣೆಯ ಬಿರುದು ಕೊಟ್ಟು ಗೌರವಿಸಿರುತ್ತಾರೆ. ಅವರಿಗೆ ಅಭಿನಂದನೆಗಳು.

## ಸೊಂಡೂರಿನಲ್ಲಿ ಶ್ರೀ॥ ಸಂಪತ್ಕುಮಾರಾಚಾರ್ಯರ ಭಾರತವಾಚನ

ಇದೇ ತಾ॥ ೧ರಲ್ಲಿ ಸೊಂಡೂರು ಮಹಾರಾಜರ ದರ್ಬಾರು ಭವನದಲ್ಲಿ ಗಮಕಿ ಶ್ರೀ॥ ಕೆ. ಜಿ. ಸಂಪತ್ಕುಮಾರಾಚಾರ್ಯರು 'ಕುಮಾರವ್ಯಾಸ ಭಾರತ'ವನ್ನು ವಾಚನಮಾಡಿ, ಕನ್ನಡ ಸಾಹಿತ್ಯದ ಪ್ರಾಮುಖ್ಯತೆಯನ್ನು ಕುರಿತು ಮಾತಾಡಿದರೆಂದು ತಿಳಿಯಬರುತ್ತದೆ.

## ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘ : ಉಪನ್ಯಾಸ ಮಾಲೆ

ಮೈಸೂರು ವಿಶ್ವವಿದ್ಯಾನಿಲಯ ಅಧ್ಯಾಪಕ ಸಂಘದವರು ಕಳೆದ ಡಿಸೆಂಬರ್ ೨೩ರಿಂದ ೨೭ರ ವರೆಗೆ ಶಿವಮೊಗ್ಗ ಕರ್ನಾಟಕ ಸಂಘದ ಆಶ್ರಯದಲ್ಲೂ, ಇದೇ ಜನವರಿ ೨ರಿಂದ ೭ರ ವರೆಗೆ ದಾವಣಗೆರೆಯ ಶಿವಯೋಗಿ ಆಶ್ರಮದ ಆಶ್ರಯದಲ್ಲೂ ೧೮ ಮತ್ತು ೧೯ನೆಯ ಕನ್ನಡ ಉಪನ್ಯಾಸ ಮಾಲೆಗಳನ್ನು ನೆರವೇರಿಸಿದರು.

## ಹರೀಶ್ವರ ಜಯಂತ್ಯುತ್ಸವ

ಚೆನ್ನರಾಯಪಟ್ಟಣದ ಕರ್ನಾಟಕ ಸಂಘದ ಆಶ್ರಯದಲ್ಲಿ ಕಳೆದ ಡಿಸೆಂಬರ್ ೨೫ರಲ್ಲಿ, ಸಂಘದ ಅಧ್ಯಕ್ಷರಾದ ಶ್ರೀ॥ ಎಸ್. ಎಂ. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಹರಿಹರ ಕವಿಯ ಜಯಂತ್ಯುತ್ಸವ ವಿಜೃಂಭಣೆಯಿಂದ ನೆರವೇರಿತೆಂದು ತಿಳಿಯಬರುತ್ತದೆ.

---

## ಕೃತಜ್ಞತೆ

ಕನ್ನಡ ನಾಡಿನ ಭೂಪಟದ ಚಿತ್ರದ ಪಡಿಯಚ್ಚನ್ನು ಮೈಸೂರು ವಿದ್ಯಾಭ್ಯಾಸದ ಇಲಾಖೆಯವರೂ, ಸೊಂಡೂರು ಮಹಾರಾಜರ ಭಾವಚಿತ್ರದ ಪಡಿಯಚ್ಚನ್ನು 'ವಿಶ್ವಕರ್ಣಾಟಕ'ದ ಸಂಪಾದಕರೂ, ಸೊಂಡೂರು ಮಹಾರಾಜರು ಆನೆಯ ಮೇಲೆ ಅಂಬಾರಿಯಲ್ಲಿ ಮಂಡಿಸಿರುವ ಚಿತ್ರದ ಪಡಿಯಚ್ಚು ಮತ್ತು ಸ್ವಾಗತಾಧ್ಯಕ್ಷರು, ಸೊಂಡೂರು ಮಹಾರಾಜರು, ಸಮ್ಮೇಳನಾಧ್ಯಕ್ಷರು ಇವರುಗಳಿರುವ ಚಿತ್ರದ ಪಡಿಯಚ್ಚು ಇವೆರಡನ್ನೂ 'ತಾಯಿನಾಡು' ಪತ್ರಿಕೆಯ ಸಂಪಾದಕರೂ ಕೃಪೆಮಾಡಿ ಕೊಟ್ಟು ಉಪಕಾರಮಾಡಿರುತ್ತಾರೆ. ಇವರಿಗೆಲ್ಲ 'ಕನ್ನಡ ನುಡಿ' ಕೃತಜ್ಞತೆಯುಳ್ಳದ್ದಾಗಿದೆ.

ಬೆಂಗಳೂರು ಸುಬೋಧ ವಿದ್ಯುನ್ಮುದ್ರಣಾಲಯದ ಮ್ಯಾನೇಜರಾದ ಬಿ. ರಂಗನಾಥರಾಯರು ಅಚ್ಚುಮಾಡಿ,
ಸಂಪಾದಕರಾದ ಅ. ನ. ಕೃಷ್ಣರಾಯರು ಪರಿಷತ್ತಿಗಾಗಿ ಪ್ರಕಟಿಸಿರುತ್ತಾರೆ.